# ಬಾದಾಮಿ ಚಲುಕ್ಯರ ದೇವಾಲಯಗಳ ಅಲಂಕಾರ ಶಿಲ್ಪಗಳು

ಡಾ॥ ಶೀಲಾಕಾಂತ ಪತ್ತಾರ




ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು-002

## ಬಾದಾಮಿ ಚಲುಕ್ಯರ ದೇವಾಲಯಗಳ

# ಅಲಂಕಾರ ಶಿಲ್ಪಗಳು

ಡಾ॥ ಶೀಲಾಕಾಂತ ಪತ್ತಾರ




**ಕರ್ನಾಟಕ ಶಿಲ್ಪಕಲಾ ಅಕಾಡೆಮಿ**

ಮೇಲ್ಮನೆ, ಚಾಲುಕ್ಯ ವಿಭಾಗ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು – ೫೬೦ ೦೦೨

**Badamai Chalukyara Devalayagala Alankara Shilpagalu**

A Monograph on decorative sculpture in Chalukyan Temples with photographs and illustrations

By : **Dr. Sheelkant Pattar.** M.A., D.Litt, Badami

Chief Editor : **Dr. G. Gnanananda,** Chairman
Karnataka Shilpakala Academy

*Published by* : **Registrar,**
Karnataka Shilpakala Academy,
Kannada Bhavan, J.C. Road, Bangalore - 1

Pages : xii + 160

**Price** : **Rs. 200/-**

First Edition : 2013



---

**ಬಾದಾಮಿ ಚಲುಕ್ಯ ದೇವಾಲಯಗಳ ಅಲಂಕಾರ ಶಿಲ್ಪಗಳು,**

ಲೇಖಕರು : **ಡಾ. ಶೀಲಕಾಂತ ಪತ್ತಾರ** ಎಂ. ಡಿ.ಲಿಟ್., ಬಾದಾಮಿ

ಪ್ರಧಾನ ಸಂಪಾದಕರು : **ಡಾ॥ ಜಿ. ಜ್ಞಾನಾನಂದ,** ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

ಪ್ರಕಾಶಕರು : **ರಿಜಿಸ್ಟ್ರಾರ್**
ಶಿಲ್ಪಕಲಾ ಅಕಾಡೆಮಿ, ಕನ್ನಡ ಭವನ,
ಜೆ.ಸಿ. ರಸ್ತೆ, ಬೆಂಗಳೂರು – 560 001

ಪುಟಗಳು : xii + 160

**ಬೆಲೆ** : **ರೂ. ೨೦೦/–**



ಮುದ್ರಣ

ಸ್ನೇಹ ಪ್ರಿಂಟ್ಸ್
sneha prints
MULTICOLOUR OFFSET PRINTERS & BINDERS
# 17/1, 3ನೇ ಅಡ್ಡರಸ್ತೆ, ನಂಜಾಂಬ ಅಗ್ರಹಾರ,
ಚಾಮರಾಜಪೇಟೆ, ಬೆಂಗಳೂರು – 560 018
ದೂರವಾಣಿ : 26604835, 56974235





# ಅಧ್ಯಕ್ಷರ ಮಾತು

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು 2010–11ನೆಯ ಸಾಲಿನಲ್ಲಿ ಎಲ್ಲಾ ಅಕಾಡೆಮಿಗಳಿಗೂ ಆಯಾ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನೆಯನ್ನು ಪ್ರೋತ್ಸಾಹಿಸಲು ಒಂದು ಲಕ್ಷ ಮೊತ್ತದ ಐದು ಫೆಲೋಷಿಪ್‌ಗಳನ್ನು ಕೊಟ್ಟು ಹೆಚ್ಚಿನ ಸಂಶೋಧನೆಯ ಅವಕಾಶವನ್ನು ಕಲ್ಪಿಸಿತು. ಅದಕ್ಕಾಗಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಲ್ಲಿ ತಜ್ಞರ ವಿಶೇಷ ಸಮಿತಿಯನ್ನು ರಚಿಸಿತು.

ಅಧ್ಯಕ್ಷರು

**ಡಾ॥ ಜಿ. ಜ್ಞಾನಾನಂದ**

ಅಧ್ಯಕ್ಷರು, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು

ಸಂಚಾಲಕರು

**ಶ್ರೀ ಕಾ.ತ. ಚಿಕ್ಕಣ್ಣ**

ಜಂಟಿ ನಿರ್ದೇಶಕರು(ಆಡಳಿತ) ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಸದಸ್ಯರು

**ಶ್ರೀ ಬಿ.ಟಿ. ಮುನಿರಾಜಯ್ಯ,** ಜಂಟಿ ನಿರ್ದೇಶಕರು (ಸಾಮಾನ್ಯ) ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅರ್ಥ ಸದಸ್ಯರು

**ಪ್ರೊ॥ ಮಲ್ಲೆಪುರಂ ಜಿ. ವೆಂಕಟೇಶ್**

ಕುಲಪತಿಗಳು, ಸಂಸ್ಕೃತ ವಿಶ್ವವಿದ್ಯಾಲಯ

**ಶ್ರೀ ತ್ಯಾಗರಾಜ್,** ರಿಜಿಸ್ಟ್ರಾರ್ ಶಿಲ್ಪಕಲಾ ಅಕಾಡೆಮಿ

ಫೆಲೋಷಿಪ್‌ಗಾಗಿ ಅರ್ಜಿಗಳನ್ನು ಆಹ್ವಾನಿಸಿ ಬಂದ ಅರ್ಜಿಗಳನ್ನು ಪರಿಶೀಲಿಸಿ ಅದರಲ್ಲಿ ಆಯ್ಕೆಯಾದವರನ್ನು ಸಂದರ್ಶನಕ್ಕೆ ಆಹ್ವಾನಿಸಿ ಅವರು ಹೆಚ್ಚಿನ ಅಧ್ಯಯನಕ್ಕೆ ಆರಿಸಿಕೊಂಡಿದ್ದ ವಿಷಯಗಳ ಬಗ್ಗೆ ಅರ್ಜಿದಾರರೊಂದಿಗೆ ಚರ್ಚಿಸಿ ಫೆಲೋಷಿಪ್ ಬಗ್ಗೆ ತೀರ್ಮಾನಿಸಲಾಯಿತು. ಹಾಗೆ ಆಯ್ಕೆಯಾದವರು ಒಂದು ವರ್ಷದೊಳಗಾಗಿ ತಮ್ಮ ಪ್ರಬಂಧವನ್ನು ಸಲ್ಲಿಸಬೇಕೆಂಬುದಾಗಿ ತಿಳಿಸಲಾಯಿತು. ಆದರೆ ಪ್ರಬಂಧ ಸಿದ್ಧ ಪಡಿಸಲು ಹೆಚ್ಚು ಕಾಲವನ್ನು ಪಡೆದುಕೊಂಡರೂ ಅಂತಿಮವಾಗಿ ಕೇವಲ ನಾಲ್ಕು ಪ್ರಬಂಧಗಳು ಮಾತ್ರವೇ ಸಲ್ಲಿಕೆಯಾಗಿವೆ.

1. **ಬಾದಾಮಿ ಚಲುಕ್ಯ ದೇವಾಲಯಗಳಲ್ಲಿ ಅಲಂಕಾರ ಶಿಲ್ಪಗಳು**
   – ಡಾ॥ ಶೀಲಾಕಾಂತ ಪತ್ತಾರ, ಬಾದಾಮಿ
2. **ಶಿಲ್ಪಸಿದ್ಧಾಂತಿ, ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳ ಶಿಲ್ಪಕಲಾ ಸಾಧನೆ** – ಶ್ರೀ ಎಲ್. ಶಿವಲಿಂಗಪ್ಪ, ಮೈಸೂರು
3. **ಚಾಮುಂಡೇಶ್ವರಿ**
   – ಡಾ॥ ಚೂಡಾಮಣಿ ನಂದಗೋಪಾಲ್, ಬೆಂಗಳೂರು
4. **ಅರ್ಧನಾರೀಶ್ವರ : ಒಂದು ಅಧ್ಯಯನ**
   –ವಿದ್ವಾನ್ ತಾಡಿಚರ್ಲ ವೀರರಾಘವ ಶರ್ಮ, ಬಳ್ಳಾರಿ

ಈ ಪ್ರಬಂಧಗಳಿಗೆ ಫೆಲೋಷಿಪ್ ಹಣವನ್ನು ಸಲ್ಲಿಸಿದೆ. ಮೊದಲ ಎರಡು ಗ್ರಂಥಗಳನ್ನು ಪ್ರಸ್ತುತದಲ್ಲಿ ಮಾತ್ರವೇ ಅಕಾಡೆಮಿಯು ಪ್ರಕಟಿಸಲಾಗುತ್ತಿದೆ. ಐದನೆಯ ಫೆಲೋಷಿಪ್ ಸಂಪ್ರಬಂಧ ಸಲ್ಲಿಕೆಯಾಗದೆ ಇರುವುದರಿಂದ ಫೆಲೋಷಿಪ್ ಹಿಂದಕ್ಕೆ ಪಡೆದು ವಜಾಕರಿಸಲಾಗಿದೆ.

**ಬಾದಾಮಿ ಚಲುಕ್ಯ ದೇವಾಲಯಗಳಲ್ಲಿ ಅಲಂಕಾರ ಶಿಲ್ಪಗಳು** ಪ್ರಬಂಧವು ವಿಶಿಷ್ಟವಾದದ್ದು. ಬಾದಾಮಿಯ ದೇವಾಲಯಗಳ ಬಗ್ಗೆ ಬಹು ವಿವರವಾದ ಹಲವು ಅಧ್ಯಯನಗಳು ನಡೆದಿವೆ. ಆದರೆ ಅಲಂಕಾರ ಶಿಲ್ಪಗಳ ಬಗ್ಗೆ ಅಧ್ಯಯನದ ಮೊದಲ ಪ್ರಯತ್ನ ಇದಾಗಿದೆ.

ದೇವಾಲಯಗಳು ನಿರ್ಮಿತವಾಗವುದು ಶಿಲ್ಪಶಾಸ್ತ್ರದ ನಿಯಮಗಳ ಅನುಸಾರವಾಗಿ. ನಿಜಕ್ಕೂ ಅಳತೆ ಇಲ್ಲದ ಯಾವ ಭಾಗವೂ ದೇವಾಲಯದಲ್ಲಿ ಇರುವುದಿಲ್ಲ. ಮೂಲ ಮೂರ್ತಿ, ಅದಕ್ಕೆ ತಕ್ಕ ಪರಿವಾರ, ಎಲ್ಲವೂ ಶಾಸ್ತ್ರ ನಿರ್ದೇಶನದ ಅನುಸಾರವೇ ಇರುತ್ತವೆ. ದೇವಾಲಯದಲ್ಲಿರುವ ಸ್ತಂಭಗಳೂ ಇದೇ ಶಾಸ್ತ್ರದ ಮಾನ–ಲಕ್ಷಣದ ಅನುಸಾರವೇ ಇರಬೇಕು.

ಆದರೆ ಅಲಂಕಾರ ಭಾಗಕ್ಕೆ ಈ ರೀತಿಯ ಕಟ್ಟಪಾಡು ಇರುವುದಿಲ್ಲ ಅಲಂಕಾರಗಳಲ್ಲಿ ಬಳಕೆಯಾಗಬಹುದಾದ ಹಂಸ, ಮಕರ, ಕೀರ್ತಿಮುಖ, ಕುದುರೆ, ಸಿಂಹ, ವ್ಯಾಳ, ಕಿನ್ನರ, ಅಪ್ಸರೆ, ಯಕ್ಷ, ಗಂಧರ್ವ ಇವರಿಗೆ ರೂಪವಿನ್ಯಾಸವಿದೆ. ತಾಲಮಾನದ ಅಳತೆಗಳು ನಿಗದಿಯಾಗಿವೆ. ಆದರೆ ಯಾವುವು ಎಲ್ಲಿ ಇರಬೇಕು ಎಂಬ ನಿರ್ದೇಶನವಿಲ್ಲ. ಎಂದರೆ ಇವನ್ನು ಸುಂದರ ಎಂದು ತೋರುವ ಕಡೆ ಬಳಸಿ ದೇವಾಲಯದ ಸೌಂದರ್ಯವನ್ನು ವೃದ್ಧಗೊಳಿಸುವ ಸ್ವಾತಂತ್ರ್ಯ ಸ್ಥಪತಿಯಾದವನಿಗೆ ಇರುತ್ತದೆ.

ಈ ಬಗ್ಗೆ ಬಾದಾಮಿಯ ದೇವಾಲಯಗಳಲ್ಲಿ ಲಭಿಸುವ ವಿವರಗಳನ್ನು ಡಾ॥ ಶೀಲಾಕಾಂತ ಪತ್ತಾರ ಅವರು ಸಮಗ್ರವಾಗಿ ತಮ್ಮ ಪ್ರಬಂಧದಲ್ಲಿ ಚರ್ಚಿಸಿದ್ದಾರೆ. ಅವಶ್ಯಕವಾದ ಸ್ಥಾನಗಳಲ್ಲಿ ರೇಖಾಚಿತ್ರಗಳನ್ನೂ ಬರೆಸಿ ಗ್ರಂಥದಲ್ಲಿ ಅವಳಡಿಸಿದ್ದಾರೆ.

ಅವರಿಗೆ ಲಭಿಸಿರುವ ಫೆಲೋಷಿಪ್ ನೆರವನ್ನು ಸಮರ್ಥವಾಗಿ ಬಳಸಿಕೊಂಡು ಚಲುಕ್ಯರ ದೇವಾಲಯಗಳ ಅಧ್ಯಯನಕ್ಕೆ ಹೊಸ ಆಯಾಮನವನ್ನು ಕಲ್ಪಿಸಿ ಆ ಬಗ್ಗೆ ವಿವರವಾದ ಪ್ರಬಂಧವನ್ನು ಸಿದ್ಧಪಡಿಸಿ ಅದರ ಪ್ರಕಟಣೆಯ ಹೊಣೆಯನ್ನು ಕರ್ನಾಟಕ ಶಿಲ್ಪಕಲಾ ಅಕಾಡೆಮಿಗೆ ವಹಿಸಿರುವುದಕ್ಕಾಗಿ ಡಾ॥ ಶೀಲಾಕಾಂತ ಪತ್ತಾರರಿಗೆ ಅಕಾಡೆಮಿಯ ಕೃತಜ್ಞವಾಗಿದೆ. ಈ ಸಂಬಂಧದಲ್ಲಿ ಸಹಕರಿಸಿರುವ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಯುಕ್ತರಿಗೆ, ಫೆಲೋಷಿಪ್ ಆಯ್ಕೆಯ ಸಮಿತಿಯವರಿಗೆ, ರಿಜಿಸ್ಟ್ರಾರ್ ಅವರಿಗೆ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಕಾರ್ಯಸಮಿತಿಯ ಸದಸ್ಯರಿಗೆ, ಸಂಪಾದಕ ಮಂಡಲಿಯ ಸದಸ್ಯರಿಗೆ ಅವರ ಸಹಕಾರಕ್ಕಾಗಿ ವಂದನೆಗಳು.

ಈ ಗ್ರಂಥವನ್ನು ಮುದ್ರಿಸಿಕೊಟ್ಟಿರುವ ಸ್ನೇಹ ಪ್ರಿಂಟ್ಸ್‌ನ ಶ್ರೀ ಟಿ. ಎಲ್. ಮಂಜುನಾಥ್ ಅವರಿಗೆ ವಂದನೆಗಳು

1 ಜೂನ್ 2013

**ಡಾ॥ ಜಿ. ಜ್ಞಾನಾನಂದ**
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಉಪಕೃತಿ ಸ್ಮರಣೆ

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಫೆಲೋಶಿಪ್ ಯೋಜನೆಯಡಿಯಲ್ಲಿ ನನಗೆ ಈ ಕೃತಿ ರಚನೆ ಮಾಡಲು ಅನುವು ಮಾಡಿಕೊಟ್ಟ ಡಾ॥ ಜಿ. ಜ್ಞಾನಾನಂದ, ಅಧ್ಯಕ್ಷರು, ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಬೆಂಗಳೂರು ಅವರಿಗೆ,

ಹಾಗೆಯೇ

ರಿಜಿಸ್ಟ್ರಾರ್, ತಜ್ಞ ಮಂಡಲಿಯ ಸದಸ್ಯರಿಗೆ,

ಮತ್ತು

ನನಗೆ ಸೂಕ್ತ ಸಲಹೆ, ಸೂಚನೆಗಳನ್ನು ನೀಡಿ ಬೆಳಕಿನತ್ತ ದಾರಿ ತೋರಿದ ಶ್ರೀ ಕಾ. ತ. ಚಿಕ್ಕಣ್ಣ, ಪ್ರೊ. ಮಲ್ಲೇಪುರಂ ವೆಂಕಟೇಶ್, ಡಾ. ಶ್ರೀನಿವಾಸ ಪಾಡಿಗಾರ, ಡಾ. ಬಿ.ಕೆ. ಹಿರೇಮಠ ಅವರಿಗೆ

ಹಾಗೂ

ತಮ್ಮ ಅಮೂಲ್ಯ ರೇಖಾಚಿತ್ರಗಳನ್ನು ನೀಡಿ ನೆರವಾಗಿರುವ ಆಪ್ತಮಿತ್ರರಾದ ಶ್ರೀ ಸುಭಾಷ ಕಮ್ಮಾರ, ಶ್ರೀ ಗೋಪಾಲ ಕಮ್ಮಾರ, ಶ್ರೀ ಶಿವಾನಂದ ಬಡಿಗೇರ ಅವರಿಗೆ,

ಕಲಾತ್ಮಕ ಛಾಯಾಚಿತ್ರಗಳನ್ನು ಪ್ರೀತಿಯಿಂದ ಕೊಡಮಾಡಿದ ಸನ್ಮಿತ್ರರಾದ ಶ್ರೀ ಗೌರೀಶ ಕಪನಿ, ಶ್ರೀ ಚಂದ್ರಶೇಖರ ಭದ್ರಾವತಿ, ಶ್ರೀ ಮನು ಹಳ್ಳದ ಅವರಿಗೆ

ಅಂತೆಯೇ

ಹಸ್ತಪ್ರತಿ ಸಿದ್ಧಪಡಿಸುವಲ್ಲಿ ಸಹಾಯ ಹಸ್ತವನ್ನು ಚಾಚಿದ ಆತ್ಮೀಯ ಸ್ನೇಹಿತರಾದ ಶ್ರೀ ಪ್ರಮೋದ ಗಲಗಲಿ ಪ್ರೊ॥ ಶಶಿಧರ ಮೂಲಿಮನಿ ಅವರಿಗೆ,

ಜೊತೆಗೆ

ಹಲವು ಬಗೆಯಲ್ಲಿ ಸಹಕಾರ ನೀಡಿದ ಡಾ॥ ಎನ್. ಎಂ. ಅಂಗಡಿ, ಶ್ರೀಮತಿ ಸುನೀತಾ ಪಾಟೀಲ ಅವರಿಗೆ,

ಅಲ್ಲದೇ

ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ ಧಾರವಾಡ ವಲಯದ ಅಧಿಕಾರಿಗಳಿಗೆ,

ನನ್ನ ತುಂಬು ಹೃದಯದ ಕೃತಜ್ಞತೆಗಳು.

**– ಡಾ. ಶೀಲಾಕಾಂತ ಪತ್ತಾರ**

## ಪರಿವಿಡಿ

# ಚಿತ್ರಸೂಚಿ

## ಛಾಯ ಚಿತ್ರಗಳು

## ಅಲಂಕಾರ ಶಿಲ್ಪಗಳ ರೇಖಾಚಿತ್ರಗಳು

ನಮ್ಮ ದೇಶದಲ್ಲಿ ದೇವಾಲಯದ ಪರಿಕಲ್ಪನೆ ತುಂಬಾ ಪ್ರಾಚೀನವಾದುದು. ದೇವಾಲಯಗಳನ್ನು ಮೊದಲು ಯಾರು ನಿರ್ಮಿಸಿದರು, ಯಾವಾಗ ನಿರ್ಮಿಸಿದರು ಎಂಬುದನ್ನು ನಿರ್ದಿಷ್ಟವಾಗಿ ಹೇಳಲಾಗದು. ವೇದಕಾಲದಲ್ಲಾಗಲೀ ಹರಪ್ಪ ಸಂಸ್ಕೃತಿಯಲ್ಲಾಗಲಿ ದೇವಾಲಯಗಳಿದ್ದ ಬಗ್ಗೆ ನಿಖರ ವಿವರಗಳಿಲ್ಲ. ಆದರೆ ಯಜ್ಞಗಳನ್ನು ನೆರವೇರಿಸಲಾದ ಜಾಗಗಳೇ ಕಾಲಾಂತರದಲ್ಲಿ ದೇವಾಲಯದ ಸ್ವರೂಪ ಪಡೆದವೆಂದು ತಿಳಿಯಲಾಗಿದೆ. ದೇವಾಲಯಗಳ ನಿರ್ಮಾಣವು ರಾಮಾಯಣದ ಕಾಲದಷ್ಟು ಹಿಂದೆಯೇ ಪ್ರಾರಂಭವಾಗಿರುವ ಬಗ್ಗೆ ಸೂಚನೆಗಳಿವೆ.

ಪ್ರಾಚೀನ ಕಾಲದಿಂದಲೂ ಭಾರತೀಯ ಸಂಸ್ಕೃತಿಯಲ್ಲಿ ಸಾಮೂಹಿಕ ಪ್ರಾರ್ಥನಾ ಪದ್ಧತಿಯಿಲ್ಲ. ಹಾಗಾಗಿ ಮನೆಯಲ್ಲಿಯೇ ದೇವರ ಪೂಜೆ ನಡೆಯುವುದು ರೂಢಿಯಾಗಿತ್ತು. ಜನರು ಮನೆಯಲ್ಲಿ ತಮಗೊಂದು ಶಯ್ಯಾಗೃಹ ಮಾಡಿಕೊಂಡಂತೆ, ದೇವರಿಗಾಗಿ ಒಂದು ಕೋಣೆಯನ್ನು ಮೀಸಲಾಗಿರಿಸಿ ಅದನ್ನು ದೇವರ ಮನೆ ಎಂದು ಕರೆದರು. ಕ್ರಮೇಣ ಒಂದು ಜನ ಸಮೂಹವು ಎಲ್ಲರೂ ಒಟ್ಟಾಗಿ ಪೂಜಿಸಲೆಂದು ಗುಹೆಯಲ್ಲಿ ಇಲ್ಲವೆ ರಾಚನಿಕ ಕಟ್ಟಡದಲ್ಲಿ ದೇವರ ಮೂರ್ತಿಯನ್ನು ಸ್ಥಾಪಿಸಿರಬೇಕು. ನಮಗೊಂದು ಮನೆಯಿರುವಂತೆ ದೇವನಿಗೊಂದು ಮನೆ, ಅದೇ ದೇವಾಲಯ.

ಅತಿ ಪ್ರಾಚೀನ ಕಾಲದಲ್ಲಿ ಕಟ್ಟಿಗೆಯ ದೇವ ಮಂಟಪ, ಇಲ್ಲವೆ ಮಣ್ಣಿನ ದೇವಾಲಯಗಳು ರೂಪಿತವಾಗಿರಬಹುದು. ಅವು ಬಹುಕಾಲ ಇರಬೇಕೆಂಬ ಇಚ್ಛೆಯಿಂದ ಮನುಷ್ಯ ಗುಹಾದೇವಾಲಯಗಳನ್ನು ನಿರ್ಮಿಸಿದನೆಂದು ತೋರುತ್ತದೆ. ಹೀಗೆ ದೀರ್ಘಕಾಲ ಬಾಳಬಲ್ಲ ಇಟ್ಟಿಗೆ ಹಾಗೂ ಕಲ್ಲುಗಳಿಂದ ರಚಿತವಾದ ದೇವಾಲಯಗಳು ಅಸ್ತಿತ್ವ ಪಡೆದವು. ಭಾರತದಲ್ಲಿ ಅತ್ಯಂತ ಪ್ರಾಚೀನ ಧಾರ್ಮಿಕ ಕಟ್ಟಡಗಳೆಂದರೆ ಕ್ರಿ.ಪೂ. ೩ನೇ ಶತಮಾನಕ್ಕೆ ಸೇರಿದ ಬೌದ್ಧಮತದ ಸ್ತೂಪಗಳು. ಇವುಗಳ ಜೊತೆಗೆ ಗುಹಾ ವಾಸ್ತುವೂ ಬೆಳೆದು ಬಂದಿತು. ಮುಂದೆ ಗುಪ್ತರ ಕಾಲದಲ್ಲಿ ರಾಚನಿಕ ದೇವಾಲಯಗಳ ಹೊಸಯುಗ ಪ್ರಾರಂಭವಾಯಿತು. ಕ್ರಮೇಣ ಕಲೆಯ ಈ ಅಲೆ ದಕ್ಷಿಣಕ್ಕೂ ಹರಿದು ಬಂದಿತು.

ದಕ್ಷಿಣ ಭಾರತದಲ್ಲಿ ಗುಹಾದೇವಾಲಯಗಳನ್ನು ಕೊರೆದು ಅವನ್ನು ಬಗೆ ಬಗೆಯ ಶಿಲ್ಪಗಳನ್ನು ಅಲಂಕರಿಸಿದ ಶ್ರೇಯಸ್ಸು ಬಾದಾಮಿಯ ಚಲುಕ್ಯರಿಗೆ ಸಲ್ಲುತ್ತದೆ. ಪಲ್ಲವ ದೊರೆ ಒಂದನೆಯ ಮಹೇಂದ್ರವರ್ಮನು (ಕ್ರಿ.ಶ. ೫೯೦–೬೩೦)ಪಟ್ಟಕ್ಕೆ ಬರುವ ಪೂರ್ವದಲ್ಲಿಯೇ ಚಲುಕ್ಯರ ಸರ್ವೋತ್ಕೃಷ್ಟ ಗುಹಾದೇವಾಲಯವಾದ ಮಹಾವಿಷ್ಣುಗೃಹವು ಕ್ರಿ.ಶ.೫೭೮ರಲ್ಲಿ ನಿರ್ಮಿತವಾಗಿತ್ತೆಂಬುದು ಮಂಗಲೇಶನ ಶಾಸನದಿಂದ ಶತಸ್ಸಿದ್ಧವಿದ್ದರೂ ಕೆ.ಆರ್. ಶ್ರೀನಿವಾಸನ್‌ರಂತಹ ಇತಿಹಾಸಕಾರರು ಮಹೇಂದ್ರ ಪಲ್ಲವನನ್ನು ದಕ್ಷಿಣ ಭಾರತದ ಗುಹಾ ವಾಸ್ತುಕಲೆಯ ಮೂಲಪುರುಷ ಎಂದು ಬರೆದಿರುವುದು ದುರ್ದೈವದ ಸಂಗತಿ.[೧]

[೧] Srinivas K. R. 1964, Cave-temples of Pallavas, New Delhi, P. 5.

ಮೂಲತಃ ಮತ ದೃಷ್ಟಿಯಿಂದ ನಿರ್ಮಾಣಗೊಂಡ ಈ ಗುಹಾಲಯಗಳು ಮತ್ತು ರಾಚನಿಕ ದೇವಾಲಯಗಳು ಕರ್ನಾಟಕದ ಲಲಿತಕಲೆಗಳ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವಹಿಸಿದವು. ಇವು ಧಾರ್ಮಿಕ ವಿಧಿ ವಿಧಾನಗಳನ್ನು ನೆರವೇರಿಸಲು ನೆಲೆಯಾಗುವುದರ ಜೊತೆಗೆ ಕಲಾರಾಧನೆಯ ತಾಣಗಳಾಗಿರುವುದು ಬಾದಾಮಿ ಪರಿಸರದ ವೈಶಿಷ್ಟ್ಯವಾಗಿದೆ. ಈ ದೇವಾಲಯಗಳ ಆಸರೆಯಲ್ಲಿ ಶಿಲ್ಪ ಕಲಾಕೃತಿಗಳು ಸಮೃದ್ಧವಾಗಿ ಅರಳಿ ನಿಂತವು.

ಸೌಂದರ್ಯ ಪ್ರಜ್ಞೆಯುಳ್ಳವನು ತನ್ನ ಮನೆಯನ್ನು ಸುಣ್ಣ, ಬಣ್ಣಗಳಿಂದ ಸುಂದರಗೊಳಿಸುವಂತೆ ಪ್ರಾಚೀನ ಕಲಾವಿದರು ದೇವರ ಮನೆಗಳನ್ನು ಈ ಶಿಲ್ಪಗಳಿಂದ ಸುಂದರಗೊಳಿಸಿದರು. ಹೀಗೆ ದೇವಾಲಯದ ಚೆಲುವನ್ನು ಹೆಚ್ಚಿಸಲು ರೂಪಿತವಾದ ಮೂರ್ತಿಗಳು ಅಲಂಕಾರ ಶಿಲ್ಪಗಳು. ಪ್ರಸ್ತುತ ಅಧ್ಯಯನದಲ್ಲಿ ಚಲುಕ್ಯರ ದೇವಾಲಯಗಳಲ್ಲಿ ಮೂಡಿ ಬಂದ ಅಲಂಕಾರ ಶಿಲ್ಪಗಳನ್ನು ಅಭ್ಯಸಿಸಲಾಗಿದೆ.

ಸಾಮಾನ್ಯವಾಗಿ ದೇವಾಲಯದಲ್ಲಿನ ಶಿಲ್ಪಗಳನ್ನು ಧಾರ್ಮಿಕ ಮತ್ತು ಲೌಕಿಕ ಎಂದು ಎರಡು ಬಗೆಯಾಗಿ ವಿಂಗಡಿಸಲಾಗುತ್ತದೆ. ಧಾರ್ಮಿಕ ಶಿಲ್ಪಗಳು ಭಕ್ತಿಯನ್ನು ಉದ್ದೀಪನಗೊಳಿಸುವಂತಿದ್ದರೆ ಲೌಕಿಕ ಶಿಲ್ಪಗಳು ಸೌಂದರ್ಯವನ್ನು ಅರಳಿಸುತ್ತವೆ. ಒಂದು ಪರಲೋಕದ್ದು; ಇನ್ನೊಂದು ಇಹಲೋಕದ್ದು. ಇದುವರೆಗೆ ಪ್ರಧಾನವಾಗಿ ದೇವತಾ ಮೂರ್ತಿಗಳಿಗೆ ಸಂಬಂಧಿಸಿದಂತೆ ಚಲುಕ್ಯರ ಶಿಲ್ಪಕಲೆಯ ಅಧ್ಯಯನ ನಡೆದಿದೆ. ಇದು ಪ್ರತಿಮಾಶಾಸ್ತ್ರವನ್ನು ಆಧರಿಸಿದ ಅಧ್ಯಯನ. ಧಾರ್ಮಿಕ ಶಿಲ್ಪಗಳು ಪ್ರಧಾನವಾಗಿ ದೇವತೆಗಳ ಶಿಲ್ಪಗಳು. ಇವುಗಳ ನಿರೂಪಣೆಯಲ್ಲಿ ಶಿಲ್ಪಿಯು ಆಗಮಗಳಲ್ಲಿ ಸೂಚಿಸಲಾದ ನಿರ್ದಿಷ್ಟ ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಆಯಾ ದೇವಿ ಅಥವಾ ದೇವನ ಪ್ರತಿಮಾ ಲಕ್ಷಣಗಳನ್ನು ಕರಾರುವಾಕ್ಕಾಗಿ ಉಳಿಸಿಕೊಳ್ಳಬೇಕಾಗುತ್ತದೆ. ಶಿವನ ಕೈಯಲ್ಲಿ ತ್ರಿಶೂಲ, ಡಮರುಗಳಿರುವಂತೆ ವಿಷ್ಣುವಿನ ಕೈಯಲ್ಲಿ ಶಂಖ, ಚಕ್ರಗಳಿರುತ್ತವೆ. ಪಕ್ಕದಲ್ಲಿ ಅವರ ವಾಹನಗಳಿರಬಹುದು. ಇವು ಅದಲು ಬದಲು ಆಗುವಂತಿಲ್ಲ. ಲೌಕಿಕ ಶಿಲ್ಪಗಳನ್ನು ನಿರ್ಮಿಸುವಾಗ ಈ ಬಗೆಯ ಯಾವುದೇ ನಿರ್ಬಂಧವಿಲ್ಲ. ಇಲ್ಲಿ ಕಲಾವಿದನಿಗೆ ಕಲಾಭಿವ್ಯಕ್ತಿಯ ಸ್ವಾತಂತ್ರ್ಯವನ್ನು ಸವಿಯಲು, ಕಲಾ ನೈಪುಣ್ಯವನ್ನು ತೋರಲು ಹೆಚ್ಚಿನ ಅವಕಾಶವಿದೆ. ಆದ್ದರಿಂದ ಅಲಂಕಾರ ಶಿಲ್ಪಗಳು ಕಲಾವಿದನ ಸೃಜನಶೀಲತೆಗೆ ಹೆಚ್ಚಿನ ಆಸ್ಪದವನ್ನು ಒದಗಿಸುತ್ತದೆ. ಈ ಅಲಂಕರಣ ಶಿಲ್ಪಗಳು ಸಮಕಾಲೀನ ಜೀವನ ಶೈಲಿಗೆ ಕನ್ನಡಿ ಹಿಡಿಯುತ್ತವೆ.

ಬಾದಾಮಿ ಚಲುಕ್ಯರ ಕಾಲಾವಧಿಯಲ್ಲಿ ನಿರ್ಮಾಣಗೊಂಡ ದೇವಾಲಯಗಳಿಗೆ ಸೀಮಿತಗೊಳಿಸಿದಂತೆ ಅಲಂಕಾರ ಶಿಲ್ಪಗಳ ಅಧ್ಯಯನವನ್ನಿಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಚಲುಕ್ಯರ ರೂವಾರಿಗಳೇ ಕರ್ನಾಟಕದ ಅಲಂಕಾರ ಶಿಲ್ಪಗಳ ಆದ್ಯಪ್ರವರ್ತಕರು. ಸುಮಾರು ಎರಡು ಶತಮಾನಗಳವರೆಗೆ ಚಾಚಿಕೊಂಡ ಸುದೀರ್ಘ ಕಾಲಾವಧಿಯಲ್ಲಿ ನೂರಾರು ದೇವಾಲಯಗಳು ಸೃಷ್ಟಿಗೊಂಡವು. ಅವು ಕರ್ನಾಟಕ ಮತ್ತು ಆಂಧ್ರಪ್ರದೇಶಗಳ ಸುಮಾರು ಇಪ್ಪತ್ತೈದು ನೆಲೆಗಳಲ್ಲಿ ಚದುರಿಕೊಂಡಿವೆ. ಅವುಗಳಲ್ಲಿ ಮೂಡಿ ಬಂದ ಅಲಂಕಾರ ಶಿಲ್ಪಗಳು ಅಗಣಿತ. ಇಷ್ಟು ಚಿಕ್ಕ ಗಾತ್ರದ ಗ್ರಂಥದ ಮುಷ್ಟಿಯಲ್ಲಿ ಹಿಡಿದಿಡಲಾಗದು. ಆಕಾರಣ ಅಧ್ಯಯನದ ಅನುಕೂಲತೆಗಾಗಿ ಪ್ರಾತಿನಿಧಿಕ ದೇವಾಲಯಗಳನ್ನು ಲಕ್ಷಿಸಲಾಗಿದೆ. ಮಹತ್ವದ ಮತ್ತು ಅಪರೂಪದ ಶಿಲ್ಪಗಳನ್ನು ಚರ್ಚೆಗೆ ಆಯ್ದುಕೊಳ್ಳಲಾಗಿದೆ.

ದೇವಾಲಯವನ್ನು ಅಲಂಕರಿಸಲೆಂದು ಕಂಡರಿಸಲಾದ ಶಿಲ್ಪವನ್ನು ಅಲಂಕಾರ ಶಿಲ್ಪವೆಂದು ಪರಿಗಣಿಸಲಾಗಿದೆ. ಉದಾಹರಣೆಗೆ ಬಾದಾಮಿಯ ಮಹಾವಿಷ್ಣುಗೃಹದಲ್ಲಿರುವ ಪರಾವಾಸುದೇವ ಅಥವಾ ನರಸಿಂಹ ವಿಗ್ರಹಗಳು ದೇವಾಲಯವನ್ನು ಸುಂದರಗೊಳಿಸುವ ಉದ್ದೇಶದಿಂದ ಕೆತ್ತನೆಗೊಂಡವುಗಳಲ್ಲ. ಅವುಗಳ ಹಿಂದಿರುವ ಉದ್ದೇಶ ವಿಷ್ಣು ಪಾರಮ್ಯವನ್ನು

ತಿಳಿಸುವುದಾಗಿದೆ. ಹಾಗೆಯೇ ನಿರೂಪಣಾ ಅಥವಾ ಕಥಾನಕ ಶಿಲ್ಪಗಳ ಉದ್ದೇಶ ಅಲಂಕಾರ ಮಾಡುವುದಾಗಿರದೆ ಕತೆಯ ನೀತಿಯನ್ನು ತಿಳಿಸುವುದಾಗಿದೆ. ಅದಾಗಿ ಅವು ಈ ಅಧ್ಯಯನದ ಪರಿಧಿಗೆ ಸೇರಲಾರವು. ಈ ಕಾರಣಕ್ಕಾಗಿಯೇ ಅರ್ಧನಾರೀಶ್ವರ ಮೂರ್ತಿ, ಬಾಹುಬಲಿ ವಿಗ್ರಹ ಮೊದಲಾದವು ಚರ್ಚೆಯಾಚೆಗೆ ಉಳಿಯುತ್ತವೆ.

ಭವ್ಯ ಪ್ರತಿಮೆಗಳಲ್ಲಿ ಮೂಡಿಬಂದ ಕಿರೀಟ, ಕೇಯೂರಾದಿ ಆಭರಣಗಳು, ಉಡುಗೆ ತೊಡುಗೆಗಳು, ಆ ಶಿಲ್ಪದ ಚೆಲುವನ್ನು ಹೆಚ್ಚಿಸಲು ಕೆತ್ತನೆಗೊಂಡಿದ್ದರೂ, ಇಡಿ ಶಿಲ್ಪದ ಮೂಲ ಉದ್ದೇಶ ಭಿನ್ನವಾಗಿರುವ ಕಾರಣ ಅದನ್ನು ಈ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಲ್ಲ. ಕೆಲವು ಅಲಂಕಾರ ಶಿಲ್ಪಗಳು ಧಾರ್ಮಿಕ ಹಿನ್ನೆಲೆಯಲ್ಲಿ ರಚಿತವಾಗಿರಬಹುದು. ಅವುಗಳ ಪ್ರಧಾನ ಉದ್ದೇಶ ಅಲಂಕರಣವಾಗಿದ್ದಲ್ಲಿ ಇಲ್ಲಿ ಚರ್ಚೆಗೆ ಸ್ಥಾನ ಪಡೆದಿರುವುದುಂಟು. ಪ್ರಸ್ತುತ ಅಧ್ಯಯನವು ಅಲಂಕಾರ ಶಿಲ್ಪಗಳಿಗೆ ಸೀಮಿತವಾಗಿರುವದರಿಂದ ಪ್ರತಿಮಾ ಶಾಸ್ತ್ರ, ಲಕ್ಷಣಗಳು ಕುರಿತಂತೆ ಚರ್ಚೆಗೆ ಆಸ್ಪದ ಇಲ್ಲದಾಗುತ್ತದೆ. ಅವಕ್ಕೆ ಯಾವ ಶೃಂಖಲೆಗಳೂ ಇಲ್ಲ. ಅವು ಸ್ವಚ್ಛಂದ ಕಾವ್ಯದ ಸಾಲುಗಳಿದ್ದಂತೆ.

ಅಲಂಕಾರ ಶಿಲ್ಪಗಳನ್ನು ಮುಖ್ಯವಾಗಿ ಅರೆದೈವಗಳು, ಮಾನವರು, ಪ್ರಾಣಿ–ಪಕ್ಷಿಗಳು, ಸಸ್ಯಗಳು, ಜ್ಯಾಮಿತಿ ಆಕೃತಿಗಳು ಎಂಬ ಶೀರ್ಷಿಕೆಗಳಲ್ಲಿ ಅಭ್ಯಸಿಸಲಾಗಿದೆ. ಪ್ರಾತಿನಿಧಿಕವಾದ ಇಲ್ಲವೆ ವಿಶಿಷ್ಟವಾದ ಶಿಲ್ಪಗಳನ್ನು ಆಯ್ಕೆ ಮಾಡಿಕೊಂಡು ಛಾಯಾಚಿತ್ರಗಳ ನೆರವಿನಿಂದ ವಿಷಯವನ್ನು ಮಂಡಿಸಲಾಗಿದೆ. ಜೊತೆಗೆ ದೇವಾಲಯದ ವಾಸ್ತು ಅಂಗಗಳಾದ ಕಂಬಗಳು, ತೋರಣಗಳು, ಮೇಲ್ಗಂಡು (ಮೇಲ್ಚಾವಣಿ), ಜಾಲಂಧ್ರ ಮೊದಲಾದವನ್ನು ಅಲಂಕಾರ ಮಾಡಲೆಂದು ಬಳಸಿಕೊಂಡಿದ್ದರಿಂದ ಅವನ್ನು ಪ್ರತ್ಯೇಕವಾಗಿ ವಿವೇಚಿಸಲಾಗಿದೆ.

ಒಟ್ಟಾರೆ, ಅಲಂಕಾರ ಶಿಲ್ಪಗಳು ಸಮಕಾಲೀನ ಜೀವನದ ಚಿತ್ರಣಗಳಿಂದ ಕೂಡಿರುವುದರಿಂದ ಆ ಕಾಲದ ಸಾಮಾಜಿಕ ಜೀವನವನ್ನು ಅರ್ಥೈಸುವಲ್ಲಿ ನೆರವಾಗುತ್ತವೆ. ಅಂದಿನ ಜನಪದರ ಜೀವನ ಶೈಲಿ, ದೈನಂದಿನ ಚಟುವಟಿಕೆಗಳು, ಆಟ ಪಾಟಗಳು, ಕೌಟುಂಬಿಕ ಜೀವನದ ರಸ ನಿಮಿಷಗಳು, ಸಾರ್ವಜನಿಕ ಬದುಕಿನ ನೃತ್ಯ, ಸಂಗೀತ, ಕುಸ್ತಿ ಮೊದಲಾದ ವಿನೋದಗಳು, ಬೇಟೆಯ ಸನ್ನಿವೇಶ ಮೊದಲಾದವನ್ನು ವಸ್ತುವನ್ನಾಗಿಸಿಕೊಂಡು ಬಿಂಬಿತವಾದ ಶಿಲ್ಪಗಳಿವು. ಈ ಅಲಂಕಾರ ಶಿಲ್ಪಗಳ ಹರವು ದೊಡ್ಡದು.

ಚಲುಕ್ಯ ಪೂರ್ವದ ಅರಸು ಮನೆತನಗಳ ಕಾಲಾವಧಿಯಲ್ಲಿ ನಿರ್ಮಿತವಾಗಿರಬಹುದಾದ ಅಲಂಕಾರ ಶಿಲ್ಪಗಳು ಗಮನೀಯ ಸಂಖ್ಯೆಯಲ್ಲಿ ಲಭ್ಯವಿಲ್ಲವಾದರಿಂದ ಪ್ರಸ್ತುತ ಅಧ್ಯಯನವು ಹೆಚ್ಚಿನ ಮಹತ್ವ ಪಡೆಯುತ್ತದೆ. ಚಲುಕ್ಯರ ಕಾಲದಲ್ಲಿ ವಿಪುಲವಾಗಿ ಅಲಂಕಾರ ಶಿಲ್ಪಗಳು ಕೆತ್ತನೆಗೊಂಡಿದ್ದು ಈ ಕುರಿತಾದ ಅಧ್ಯಯನವು ಹೆಚ್ಚು ಪ್ರಯೋಜನಕಾರಿಯಾಗಬಲ್ಲದು.

## ಕಲಾನೆಲೆಗಳು

ಚಲುಕ್ಯರ ಕಲಾನೆಲೆಗಳು ಕರ್ನಾಟಕ ಹಾಗೂ ಆಂಧ್ರಪ್ರದೇಶದ ಹಲವೆಡೆಗಳಲ್ಲಿ ಚದುರಿಕೊಂಡಿವೆ. ರಾಜಧಾನಿಯ ಕೇಂದ್ರವಾಗಿದ್ದ ಬಾದಾಮಿ ಈ ಎಲ್ಲ ಕಲಾನಿರ್ಮಿತಿಗಳ ಕೇಂದ್ರ ಬಿಂದುವಾಗಿತ್ತು. ಮೊದಮೊದಲು ಕಲ್ಬೆಟ್ಟಗಳ ಬಸಿರಲ್ಲಿ ಗುಹಾದೇವಾಲಯಗಳನ್ನು ರೂಪಿಸಲಾಯಿತು. ಐಹೊಳೆಯ ರಾವಲ ಫಡಿ, ಮೀನ ಬಸದಿಗಳು ಮತ್ತು ಬಾದಾಮಿಯ ನಾಲ್ಕು ಮೇಣ ಬಸದಿಗಳು ಕರ್ನಾಟಕದ ಪ್ರಸಿದ್ಧ ಏಕಶಿಲಾ ನಿರ್ಮಿತ ದೇವಾಲಯಗಳು. ಇವು ಶಿಲ್ಪಗಳ ಭಂಡಾರಗಳಾಗಿವೆ.

ಗುಹಾದೇವಾಲಯಗಳ ಜೊತೆಗೆ ಐಹೊಳೆ, ಬಾದಾಮಿಗಳಲ್ಲಿ ರಾಚನಿಕ ಮಂದಿರಗಳ ನಿರ್ಮಾಣವೂ ನಡೆಯಿತು. ಮಾಲಗಿತ್ತಿ ಶಿವಾಲಯ, ಮೇಲಣ ಶಿವಾಲಯ, ಜಂಬುಲಿಂಗ

ದೇವಾಲಯಗಳು ಬಾದಾಮಿಯ ಮಹತ್ವದ ಮಂದಿರಗಳು. ಮೂವತ್ತಕ್ಕೂ ಹೆಚ್ಚು ಚಲುಕ್ಯ ದೇಗುಲಗಳ ತಾಣವೆನಿಸಿದ ಐಹೊಳೆಯಲ್ಲಿ ವೈಶಿಷ್ಟ್ಯ ಪೂರ್ಣವಾದವುಗಳೆಂದರೆ ದುರ್ಗಾ(ದುರ್ಗ)ಗುಡಿ, ಲಾಡಖಾನ ಗುಡಿ, ಮೇಗುತಿ, ಹುಚ್ಚಿಮಲ್ಲಿ ಗುಡಿ, ಹುಚ್ಚಪ್ಪಯ್ಯನ ಗುಡಿ ಮೊದಲಾದವು. ಅಲಂಕಾರ ಶಿಲ್ಪಗಳ ಅಧ್ಯಯನಕ್ಕೆ ಇವು ಆಕರಗಳು. ಪಟ್ಟದಕಲ್ಲಿನ ಗುಡಿಗುಚ್ಛದಲ್ಲಿ ಚಲುಕ್ಯರ ವಾಸ್ತುಕಲೆಯ ಪರಾಕಾಷ್ಠೆಯನ್ನು ಕಾಣುತ್ತೇವೆ. ಇದು ವಿಶ್ವ ಪರಂಪರೆಯ ತಾಣವೆಂಬ ಗೌರವಕ್ಕೆ ಪಾತ್ರವಾಗಿದೆ. ಇಲ್ಲಿಯ ವಿರೂಪಾಕ್ಷ, ಮಲ್ಲಿಕಾರ್ಜುನ, ಪಾಪನಾಥ ಮೊದಲಾದ ದೇವಾಲಯಗಳು ಸ್ಥಪತಿ ಹಾಗೂ ರೂವಾರಿಗಳ ಕಲಾ ಚಾತುರ್ಯಕ್ಕೆ ಸಾಕ್ಷಿಯಾಗಿ ನಿಂತಿವೆ. ಪಟ್ಟದಕಲ್ಲು ಅಲಂಕಾರ ಶಿಲ್ಪಗಳ ಶ್ರೀಮಂತ ಗಣಿಯಾಗಿದೆ. ಹಾಗಾಗಿ ಈ ಅಧ್ಯಯನಕ್ಕೆ ಅದು ಪ್ರಧಾನ ಆಕರವಾಗಿದೆ.

ಮಹಾಕೂಟವು ಇನ್ನೊಂದು ಮಹತ್ವದ ಕಲಾ ಕೇಂದ್ರವಾಗಿದೆ. ಮಹಾಕೂಟೇಶ್ವರ ದೇವಾಲಯವು ಈ ಮಂದಿರ ಸಮೂಹದ ಮಹತ್ವದ ವಾಸ್ತು ನಿರ್ಮಿತಿ. ದ್ರಾವಿಡ ವಿಮಾನ, ರೇಖಾನಾಗರ ಮತ್ತು ಕದಂಬ ನಾಗರ ಎಂಬ ಮೂರು ಬಗೆಯ ಶಿಖರ ಶೈಲಿಗಳು ಒಂದೇ ಪ್ರಾಕಾರದಲ್ಲಿ ಕಾಣಸಿಗುವ ಏಕಮಾತ್ರ ನೆಲೆ ಇದಾಗಿದೆ. ಚಲುಕ್ಯರ ಗುಡಿಗುಂಪನ್ನು ಪ್ರದರ್ಶಿಸುವ ಇನ್ನೊಂದು ನೆಲೆಯೆಂದರೆ ಆಂಧ್ರ ಪ್ರದೇಶದ ಆಲಂಪುರ. ಇಲ್ಲಿ ಸ್ವರ್ಗಬ್ರಹ್ಮ, ಅರ್ಕಬ್ರಹ್ಮ, ಬಾಲಬ್ರಹ್ಮ, ಕುಮಾರ ಬ್ರಹ್ಮ, ಮೊದಲಾದ ಒಂಬತ್ತು ದೇವಾಲಯಗಳಿವೆ.

ಇವಲ್ಲದೆ ಚಲುಕ್ಯರ ದೇವಾಲಯಗಳು ಬಿಡಿ ಬಿಡಿಯಾಗಿ ಅನೇಕ ಕಡೆಗಳಲ್ಲಿ ತಲೆ ಎತ್ತಿವೆ. ನಾಗನಾಥನ ಕೊಳ್ಳ, ಹುಲಿಗೆಮ್ಮನ ಕೊಳ್ಳ (ಬಿ.ಎನ್.ಜಾಲಿಹಾಳ), ಹಾಗೂ ಸಿದ್ದನಕೊಳ್ಳಗಳಲ್ಲಿನ ಸ್ಮಾರಕಗಳು ಮರೆಯಲ್ಲಿ ಉಳಿದಿವೆ. ಸಂಡೂರಿನ(ಬಳ್ಳಾರಿ ಜಿಲ್ಲೆ) ಪಾರ್ವತಿ ಮಂದಿರವು ಗಮನಾರ್ಹ ವಾಸ್ತು ಕಲಾಕೃತಿ. ರೇಖಾ ನಾಗರ ಶೈಲಿಯ ದೇವಾಲಯಗಳನ್ನು ಇಂದಿನ ಆಂಧ್ರ ಪ್ರದೇಶದಲ್ಲಿ (ಅಂದಿನ ಚಲುಕ್ಯ ವಿಷಯದಲ್ಲಿ) ನಿರ್ಮಿಸಿದವರು ಬಾದಾಮಿ ಚಲುಕ್ಯರೇ. ಆಲಂಪುರ ಮಾತ್ರವಲ್ಲದೆ ಕೂಡವೇಲಿ, ಕಡಮಾರ ಕಾಳವ, ಪಾಣ್ಯಂ, ಮಹಾನಂದಿ, ಸತ್ಯವೊಲು, ಪಂಚಲಿಂಗ ಮೊದಲಾದ ಸ್ಥಳಗಳಲ್ಲಿ ದೇವಾಲಯಗಳು ಸೃಷ್ಟಿಗೊಂಡವು. ಒಟ್ಟು ಇಪ್ಪತ್ತೈದಕ್ಕೂ ಹೆಚ್ಚಿನ ಜಾಗಗಳಲ್ಲಿ ನೂರ ನಲವತ್ತಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ದೇಗುಲಗಳನ್ನು ಕಟ್ಟಿಸುವುದರ ಮೂಲಕ ಚಲುಕ್ಯ ಅರಸರು, ಅರಸಿಯರು, ಅಧಿಕಾರಿಗಳು, ವಾಸ್ತು ಕಲೆಯ ಬೆಳವಣಿಗೆಯ ಜೊತೆಗೆ ಶಿಲ್ಪಕಲೆಯ ಅಭಿವೃದ್ಧಿಗೂ ಕೂಡ ಎಡೆಮಾಡಿಕೊಟ್ಟರು. ಅವರ ಈ ಕಲಾ ಪೋಷಣೆಯು ಮುಂದಿನ ಅರಸು ಮನೆತನಗಳಿಗೆ ಮಾದರಿಯೂ ಆಯಿತು. ಚಲುಕ್ಯರ ಕಲಾನೆಲೆಗಳಲ್ಲಿ ಅತ್ಯಂತ ಮಹತ್ವದ ಕಲಾ ಸಂಕೀರ್ಣವೆನಿಸಿರುವ ಬಾದಾಮಿ, ಐಹೊಳೆ, ಪಟ್ಟದಕಲ್ಲು, ಮಹಾಕೂಟಗಳನ್ನು ಒಳಗೊಂಡ ಪ್ರದೇಶದ ಅಲಂಕಾರ ಶಿಲ್ಪಗಳನ್ನು ಅನುಲಕ್ಷಿಸಿ ಇಲ್ಲಿ ಅಧ್ಯಯನ ಮಾಡಲಾಗಿದೆ.

## ಬಾದಾಮಿ ಚಲುಕ್ಯರ ದೇವಾಲಯಗಳ ಹಿನ್ನೆಲೆ

ಬಾದಾಮಿಗೆ ರಾಜಧಾನಿಯ ಘನತೆಯನ್ನು ತಂದು ಕೊಟ್ಟವರು ಚಲುಕ್ಯ ಅರಸರು. ಇವರ ಮನೆತನದ ಹೆಸರು ಶಾಸನಗಳಲ್ಲಿ ಚಲುಕ್ಯ ಎಂದಿದೆ. ಶುದ್ಧ ರೂಪವಾದ ಅದನ್ನೇ ಈ ಕೃತಿಯುದ್ದಕ್ಕೂ ಬಳಸಲಾಗಿದೆ. ಮೊದಲನೆಯ ಪುಲಕೇಶಿ(ಪೊಲೆಕೇಶಿ)ಯು ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿ ಬಾದಾಮಿಯಲ್ಲಿ ಅಭೇದ್ಯವಾದ ಗಿರಿದುರ್ಗವೊಂದನ್ನು (ಕ್ರಿ.ಶ. ೫೪೩ರಲ್ಲಿ) ಕಟ್ಟಿಸಿದನು. ಅಂದಿನಿಂದ ಕರ್ನಾಟಕದಲ್ಲಿ ಹೊಸ ಯುಗವೊಂದು ಪ್ರಾರಂಭವಾಯಿತು. ಲಲಿತಕಲೆಗಳಿಗೆ ಕಾಯಕಲ್ಪವನ್ನು ನೀಡಿದ ಅಗ್ಗಳಿಕೆ ಈ ಅರಸು ಮನೆತನದ್ದು. ವಿಶೇಷವಾಗಿ ವಾಸ್ತುಕಲೆ, ಶಿಲ್ಪಗಳಿಗೆ ಚಲುಕ್ಯರು ಹೆಚ್ಚಿನ ಆದ್ಯತೆ ನೀಡಿದರು. ಇದರ ಪರಿಣಾಮವಾಗಿ ಐಹೊಳೆ, ಬಾದಾಮಿಗಳ ಕಲ್ಬೆಟ್ಟಗಳಲ್ಲಿ ಗುಹಾದೇವಾಲಯಗಳು ಉತ್ಪನ್ನಗೊಂಡವು. ರಾಚನಿಕ ಮಂದಿರಗಳು ತಲೆ ಎತ್ತಿದವು.

ಮಹಾಕೂಟದಲ್ಲಿ ಮಕುಟೇಶ್ವರ ದೇವಾಲಯವಿದ್ದ ಸಂಗತಿ ಮಂಗಲೇಶನ ಶಾಸನದಿಂದ ಸ್ಪಷ್ಟವಿದೆ. ಇದು ಒಂದನೆಯ ಪೊಲೆಕೇಶಿಯ ವಾಸ್ತು ಕಾಣ್ಕೆ.[೧] ಈ ದೇವಾಲಯವು ಮೂಲ ರೂಪವನ್ನು ಕಳೆದುಕೊಂಡು ಮಹಾಕೂಟೇಶ್ವರ ದೇವಾಲಯವಾಗಿ ಬೆಳೆದು ನಿಂತಿದೆ. ಒಂದನೆಯ ಕೀರ್ತಿವರ್ಮನು (ಕ್ರಿ.ಶ.೫೬೬–೫೯೧) ಮಕುಟೇಶ್ವರನಿಗೆ ದಾನ ಸಲ್ಲಿಸಿದ ವಿವರ ಇಲ್ಲಿನ ಶಾಸನದಲ್ಲಿದೆ. ಪಕ್ಕದಲ್ಲಿರುವ ವಿಶಾಲ ಪುಷ್ಕರಿಣಿ ಹಾಗೂ ಅದರಲ್ಲಿನ ಕಲ್ಲಿನ ಮಂಟಪ (ದೇವದ್ರೋಣಿ)ದ ಪ್ರಸ್ತಾಪವೂ ಅಲ್ಲಿದೆ. ಅವೂ ಕೂಡ ಒಂದನೆಯ ಪೊಲೆಕೇಶಿಯ ಪೋಷಣೆಯಲ್ಲಿ ರಚಿತಗೊಂಡಿರ ಬಹುದಾಗಿದೆ. ಹೊಸ ರಾಜ್ಯವನ್ನು ಸ್ಥಾಪನೆ ಮಾಡುತ್ತಲೆ ಒಂದನೆಯ ಪೊಲೆಕೇಶಿಯು ತನ್ನ ಹೊಸ ರಾಜಧಾನಿಯನ್ನು ಸುಂದರಗೊಳಿಸಲು ಗುಹಾ ನಿರ್ಮಾಣವನ್ನು ಪ್ರಾರಂಭಿಸಿದನು. ಬಾದಾಮಿಯಲ್ಲಿ ಶೈವ ಗುಹಾಲಯ ಹಾಗೂ ವೈಷ್ಣವ ಗುಹಾ ಮಂದಿರಗಳು ಈತನ ಕಾಲಾವಧಿಯಲ್ಲಿ ಅರಳಿದವು.[೨]

ತನ್ನ ತಂದೆ ಪ್ರಾರಂಭಿಸಿದ ನಗರ ಸೌಂದರ್ಯೀಕರಣವನ್ನು ಒಂದನೆಯ ಕೀರ್ತಿವರ್ಮನು ಮುಂದುವರೆಸಿದ. ಬಾದಾಮಿಯಲ್ಲಿ ಕೊರೆಯಿಸಲಾದ 'ಮಹಾವಿಷ್ಣುಗೃಹ'ವು ಭಾರತದ ಕಲಾ – ಇತಿಹಾಸದಲ್ಲಿ ಮಹತ್ವದ ಮೈಲುಗಲ್ಲು . ತಮ್ಮನಾದ ಮಂಗಲೇಶನು ಈ ಗುಹಾ ನಿರ್ಮಾಣದ ಹೊಣೆ ಹೊತ್ತು ಕೊಂಡು ಕ್ರಿ.ಶ ೫೭೮ ರಲ್ಲಿ ಅದನ್ನು ಪೂರ್ಣಗೊಳಿಸಿ ಕಲಾಪ್ರೇಮವನ್ನೂ, ಭ್ರಾತೃಪ್ರೇಮವನ್ನೂ ಮೆರೆದಿರುವನು. ಕ್ರಿ.ಶ ೫೭೮ರ ವೇಳೆಗೆ ಬಾದಾಮಿಯಲ್ಲಿ ಮೂರು ಏಕಶಿಲಾ ನಿರ್ಮಿತ ಗುಹಾಲಯಗಳು ನಿರ್ಮಾಣವಾಗಿರುವುದು ಸ್ಪಷ್ಟ. ಈ ಕಾಲ ಘಟ್ಟದಲ್ಲಿ ಐಹೊಳೆಯ ರಾವಲಫಡಿ, ಮೀನಬಸದಿಗಳೂ ಕೆತ್ತನೆಗೊಂಡವು. ಈ ವಾಸ್ತು ನಿರ್ಮಿತಿಗಳಲ್ಲಿ ವೈವಿಧ್ಯ ಪೂರ್ಣ ಕಂಬಗಳು, ಬೋದಿಗೆ ಶಿಲ್ಪಗಳು, ಬಗೆ ಬಗೆಯ ಪುಷ್ಪನಕ್ಷೆಗಳು, ಜ್ಯಾಮಿತಿ ರಚನೆಗಳು ಮೊದಲಾದವು ಅಲಂಕಾರ ಶಿಲ್ಪಗಳಾಗಿ ಅರಳಿ ನಿಂತಿವೆ.

ಒಂದನೆಯ ಕೀರ್ತಿವರ್ಮನು ತೀರಿದಾಗ ಮಗನಾದ ಇಮ್ಮಡಿ ಪೊಲೆಕೇಶಿ ಇನ್ನೂ ಪುಟ್ಟ ಬಾಲಕ. ಹಾಗಾಗಿ ಮಂಗಲೇಶನೇ ರಾಜ್ಯಭಾರವನ್ನು ಕೈಗೆತ್ತಿಕೊಂಡನು. ಮಂಗಲೇಶ ಮಹತ್ವಾಕಾಂಕ್ಷಿ. ಉತ್ತರದಲ್ಲಿ ದಂಡಯಾತ್ರೆ ಕೈಗೊಂಡು ಚಲುಕ್ಯ ಸಾಮ್ರಾಜ್ಯವನ್ನು ವಿಸ್ತರಿಸಿದನು.

ಕಲಚೂರಿಗಳನ್ನು ಸೋಲಿಸಿ ಬಂದು ಮಹಾಕೂಟದಲ್ಲಿ ಧರ್ಮಸ್ತಂಭವನ್ನು ನಿಲ್ಲಿಸಿದನು. ಈಗ ಇದು ವಿಜಾಪುರದ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿದೆ. ಪ್ರಾಯಶ: ಈತನ ಕಾಲದಲ್ಲಿಯೇ ಬಾದಾಮಿ ಹಾಗೂ ಐಹೊಳೆಯ ಗುಹಾಲಯಗಳ ಕೊರೆತಗಳು ಕೂಡ ಪೂರ್ಣಗೊಂಡವು. ಇಲ್ಲಿಯ ಕಂಬಗಳು, ಮೇಲ್ಛಾವಣಿಗಳು ಶಿಲ್ಪಗಳಿಂದ ಅಲಂಕೃತಗೊಂಡಿವೆ. ಪರಮ ಭಾಗವತನೆಂಬ ಖ್ಯಾತಿ ಹೊತ್ತ ಮಂಗಳೇಶನು ಶೈವ ಮಂದಿರಗಳ, ಜಿನಾಲಯಗಳ ಮತ್ತು ಪೋಷಕನಾಗಿದ್ದುದು ಇತಿಹಾಸದಲ್ಲಿ ಅಪರೂಪದ ಉದಾಹರಣೆ. ಚಲುಕ್ಯರು ಸರ್ವಧರ್ಮ ಸಮನ್ವತೆಯ ಹರಿಕಾರರೆನಿಸಿದರು.

ತಾನು ವಿಸ್ತರಿಸಿದ ಸಾಮ್ರಾಜ್ಯವನ್ನು ಮಂಗಲೇಶನು (೫೯೧–೬೧೦) ಅಣ್ಣನ ಮಗನಾದ ಪೊಲೆಕೇಶಿಗೆ ಬಿಟ್ಟು ಕೊಡಲಿಲ್ಲ. ತರುಣ ಪೊಲೆಕೇಶಿಯು ಕಕ್ಕನೊಂದಿಗೆ ಯುದ್ಧ ಮಾಡಿ ತನ್ನ ಹಕ್ಕಿನ ಸಿಂಹಾಸನವನ್ನು ಪಡೆದುಕೊಂಡ. ಇಮ್ಮಡಿ ಪೊಲೆಕೇಶಿಯ ಕಾಲವೆಂದರೆ ಚಲುಕ್ಯ ಸಾಮ್ರಾಜ್ಯದ ವೈಭವದ ಉತ್ತುಂಗ ಶಿಖರ. ತನ್ನ ತೋಳ್ಬಲದಿಂದ 'ದಕ್ಷಿಣಾ ಪಥೇಶ್ವರ' ನೆನಿಸಿದ. ಉತ್ತರದ ಬಲಾಢ್ಯ ಸಮ್ರಾಟನೆನಿಸಿದ ಹರ್ಷವರ್ಧನನನ್ನು ನರ್ಮದೆಯ ದಂಡೆಯಲ್ಲಿ ಸೋಲಿಸಿದುದು ಭಾರತದ ಇತಿಹಾಸದಲ್ಲಿ ಅವಿಸ್ಮರಣೀಯ ಘಟನೆ.

ಮಹಾಯೋಧನಾದ ಇಮ್ಮಡಿ ಪೊಲೆಕೇಶಿಯು ಕಲಾಪೋಷಕನೂ ಧರ್ಮ ರಕ್ಷಕನೂ

೧ ಗೋಪಾಲ. ಬಾ. ರಾ. (೧೯೯೭), 'ವಿಶಾಲ ಕರ್ನಾಟಕ : ಬಾದಾಮಿ ಚಲುಕ್ಯರು' ಕರ್ನಾಟಕ ಚರಿತ್ರೆ ಸಂ. ೧., ಕ.ವಿ.ವಿ. ಹಂಪಿ, ಪು. ೪೩೮. ಎಸ್. ರಾಜಶೇಖರ ಅವರು ಇದು ಮೊದಲನೆಯ ಕೀರ್ತಿವರ್ಮನ ನಿರ್ಮಾಣವೆಂದು ಅಭಿಪ್ರಾಯ ಪಡುತ್ತಾರೆ.

೨ Rajasekhar, S., (1985) Early Chalukya Art at Aihole, New Delhi p.9

ಆಗಿದ್ದನು. ಈತನ ಕಾಲದಲ್ಲಿ ವಾಸ್ತು ಚಟುವಟಿಕೆಗಳು ಗುಹಾಲಯ ನಿರ್ಮಾಣದಿಂದ ರಾಚನಿಕ ಮಂದಿರ ರಚನೆಯತ್ತ ವಾಲಿದವು. ದಾಕ್ಷಿಣಾತ್ಯ ಮತ್ತು ಔತ್ತರೇಯ ಶೈಲಿ ಮಂದಿರಗಳು ಸಂಗಮಿಸ ತೊಡಗಿದವು. ಬಾದಾಮಿಯಲ್ಲಿ ಮೇಲಿನ ಶಿವಾಲಯ (ಮೂಲತ: ಇದು ವಿಷ್ಣುಮಂದಿರ) ಮತ್ತು ಕೆಳಗಿನ ಶಿವಾಲಯ (ಗಣಪತಿ ಮಂದಿರ ?)ಗಳು ಈತನ ಅವಧಿಯಲ್ಲಿ ನಿರ್ಮಾಣಗೊಂಡವು. ಮೇಲಿನ ಶಿವಾಲಯಕ್ಕೆ ನಾಗರ ಸ್ತೂಪಿಯ ಅಲಂಕಾರವಿದ್ದರೆ ಕೆಳಗಿನ ಶಿವಾಲಯವು ದ್ರಾವಿಡ ಸ್ತೂಪಿಯ ರಚನೆ ಹೊಂದಿರುವುದನ್ನು ಇಲ್ಲಿ ಲಕ್ಷಿಸಬಹುದು. ಐಹೊಳೆಯ ಹುಚ್ಚಿಮಲ್ಲಿ ಗುಡಿ ಕೂಡ ಈ ಕಾಲದಲ್ಲಿ ರಚಿತವಾದುದು.[೪] ಇದು ರೇಖಾ ನಾಗರ ಮಾದರಿಯ ಶಿಖರವನ್ನು ಹೊಂದಿದೆ.

ಇಮ್ಮಡಿ ಪೊಲೆಕೇಶಿಯ ಆಸ್ಥಾನ ಕವಿಯಾಗಿದ್ದ ರವೀಕೀರ್ತಿಯು ಐಹೊಳೆಯ ಬೆಟ್ಟದ ತುದಿಯಲ್ಲಿ ಕಟ್ಟಿಸಿದ ಜಿನಾಲಯವು (ಕ್ರಿ.ಶ ೬೩೪) ದ್ರಾವಿಡ ವಿಮಾನ ಶೈಲಿಯಲ್ಲಿದೆ. ಹೀಗೆ ವೈವಿಧ್ಯ ಪೂರ್ಣವಾದ ವಾಸ್ತು ನಿರ್ಮಿತಿಗಳು ಬೆಳಕು ಕಂಡವು. ಅವು ಅಲಂಕಾರ ಶಿಲ್ಪಗಳಿಂದ ಅಂದಗೊಂಡವು.

ಕ್ರಿ.ಶ. ೬೪೨ರಲ್ಲಿ ಎರಡನೆಯ ನರಸಿಂಹವರ್ಮ ಪಲ್ಲವ ರಾಜನು ಇಮ್ಮಡಿ ಪೊಲೆಕೇಶಿಯನ್ನು ಗೆಲ್ಲುವಲ್ಲಿ ಯಶಸ್ವಿಯಾದನು. ಇದರಿಂದ ಚಲುಕ್ಯ ನೇಸರನು ಸುಮಾರು ೧೩ ವರ್ಷಗಳ ಕಾಲ ಗ್ರಹಣಕ್ಕೆ ಈಡಾದನು. ರಾಜಕೀಯ ಚಟುವಟಿಕೆಗಳು ಸ್ಥಗಿತವಾಗುತ್ತಿದ್ದಂತೆ ಬಾದಾಮಿ ಪರಸರಲ್ಲಿ ಕಲಾ ಚಟುವಟಿಕೆಗಳೂ ನಿಷ್ಕ್ರಿಯವಾದವು.

ಮೊದಲನೆಯ ವಿಕ್ರಮಾದಿತ್ಯನಿಂದಾಗಿ ಕ್ರಿ.ಶ. ೬೫೫ರಲ್ಲಿ ಚಲುಕ್ಯ ಸಾಮ್ರಾಜ್ಯವು ಮರುಹುಟ್ಟನ್ನು ಪಡೆಯಿತು. ಮತ್ತೆ ಅವ್ಯಾಹತವಾಗಿ ನೂರು ವರ್ಷಗಳ ಕಾಲ ಬಾದಾಮಿ, ಐಹೊಳೆ, ಮಹಾಕೂಟ, ಪಟ್ಟದಕಲ್ಲು ಮತ್ತು ಆಲಂಪುರ ಪರಿಸರಗಳಲ್ಲಿ ವಾಸ್ತು ಕಲೆ ಮತ್ತು ಶಿಲ್ಪ ಕಲೆಯ ಉತ್ಥಾನಕ್ಕಾಗಿ ಶ್ರಮಿಸಲಾಯಿತು. ಈ ಎರಡನೆಯ ಹಂತದಲ್ಲಿ ಗುಹಾ ನಿರ್ಮಾಣಗಳ ಕಾರ್ಯ ನಿಂತೇ ಹೋಯಿತು. ಆದರೆ ರಾಚನಿಕ ಮಂದಿರಗಳು ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಾಣಗೊಂಡವು.

ಕ್ರಿ.ಶ. ೬೬೦ರಲ್ಲಿ ಒಂದನೆಯ ವಿಕ್ರಮಾದಿತ್ಯನು ಶಿವಮಂಡಲ ದೀಕ್ಷೆಯನ್ನು ಸ್ವೀಕರಿಸಿ ಪರಮಮಾಹೇಶ್ವರನೆನಿಸಿದನು.[೫] ವಾಸ್ತುಕಲೆ ಹೊಸ ಆಯಾಮವನ್ನು ಪಡೆದುಕೊಂಡಿತು. ಶೈವಧರ್ಮದ ಪ್ರಸಾರ ದ್ವಿಗುಣಗೊಂಡಿತು. ಹಲವಾರು ಶಿವದೇವಾಲಯಗಳು ವಿಶಾಲ ಸಾಮ್ರಾಜ್ಯದ ವಿವಿಧ ಕಡೆಗಳಲ್ಲಿ ತಲೆ ಎತ್ತಿದವು. ಮುಖ್ಯವಾಗಿ ಪಕ್ಕದ ಪಟ್ಟದಕಲ್ಲು, ದೂರದ ಆಲಂಪುರ, ಮಹಾನಂದಿ, ಪಾಪನಾಶನಂ, ಪಾಣ್ಯಂ ಮೊದಲಾದವುಗಳು ಶೈವ ಕೇಂದ್ರಗಳಾಗಿ ಬೆಳೆದವು. ಮಹಾಕೂಟ, ಐಹೊಳೆಗಳಲ್ಲಿಯೂ ಎಂದಿನಂತೆ ವಾಸ್ತು ರಚನೆಗಳು ಮುಂದುವರೆದವು. ಈ ಅರಸನ ಮಹತ್ವದ ವಾಸ್ತು ಕೊಡುಗೆ ಎಂದರೆ ದ್ರಾವಿಡ ಶೈಲಿಯಲ್ಲಿ ಕಟ್ಟಲಾದ ಮಾಲಗಿತ್ತಿ ಶಿವಾಲಯ.[೬] ಇದರ ಹೊರಗೋಡೆಯು ಸುಂದರ ಶಿಲ್ಪ ಹಾಗೂ ಕಲಾತ್ಮಕ ಅಧಿಷ್ಠಾನಗಳಿಂದ ಅಲಂಕೃತವಾಗಿದೆ.

ಹಳೆಯ ಮಹಾಕೂಟದಲ್ಲಿನ ಗಜಪೃಷ್ಠ ವಿನ್ಯಾಸದ ಶಿವಮಂದಿರವು ಈತನ ಆಸರೆಯಲ್ಲಿಯೇ ರಚಿತವಾಯಿತೆಂದು ಗ್ರಹಿಸಲಾಗಿದೆ.[೭] ಜೊತೆಗೆ ಆಲಂಪುರ ಪರಿಸರವನ್ನು ಹೆಚ್ಚು ಕ್ರಿಯಾಶೀಲಗೊಳಿಸಿದನು. ಇದರಿಂದಾಗಿ ಅರ್ಕಬ್ರಹ್ಮ, ವೀರಬ್ರಹ್ಮ, ಕುಮಾರ ಬ್ರಹ್ಮ ಹಾಗೂ ಬಾಲಬ್ರಹ್ಮ ದೇವಾಲಯಗಳು ಅಲ್ಲಿ ತಲೆ ಎತ್ತಿದವು.[೮] ಕಡಮಾರ ಕಳವದಲ್ಲಿನ ಶಿವನಂದೀಶ್ವರ ಮಂದಿರವೂ ಈ ಅವಧಿಯದೇ.

ಒಂದನೆಯ ವಿಕ್ರಮಾದಿತ್ಯನ ತರುವಾಯ ಪುತ್ರನಾದ ವಿನಯಾದಿತ್ಯನು (೬೮೧–೬೯೬) ಸಿಂಹಾಸವನ್ನೇರಿದನು. ರಾಜವಂಶದ ಪರಂಪರೆ ಎಂಬಂತೆ ಪೂರ್ವಜರ ದಾರಿಯನ್ನು ಕ್ರಮಿಸುತ್ತ ಕಲಾ ಪೋಷಣೆಯನ್ನು ಮುಂದುವರೆಸಿದನು. ಆಲಂಪುರ ಗುಡಿ

೪ ರಾಜಶೇಖರ ಸಿಂದಗಿ (೧೯೯೭) 'ವಾಸ್ತುಶಿಲ್ಪ' ಕರ್ನಾಟಕ ಚರಿತ್ರೆ ಸಂ.೧, ಕವಿವಿ. ಹಂಪಿ, ಪು. ೪೮೮

೫ ET, Vol. XXXII, PP. 175-184

೬ ರಾಜಶೇಖರ ಸಿಂದಗಿ, ಪೂರ್ವೋಕ್ತ, ಪು. ೪೮೯

೭ Rajasekhara. S. op.cit, P. 13

೮ ರಾಜಶೇಖರ ಸಿಂದಗಿ, ಪೂರ್ವೋಕ್ತ, ಪು. ೪೮೯

ಸಮುಚ್ಚಯದಲ್ಲಿಯೇ ಅತ್ಯಂತ ಸುಂದರ ವಾಸ್ತು ನಿರ್ಮಿತಿ ಎನಿಸಿರುವ ಸ್ವರ್ಗ ಬ್ರಹ್ಮ ದೇವಾಲಯವು ಈತನ ಕಾಲದ ಅಮರ ಕಲಾಕೃತಿ. ಅದು ಅಲಂಕಾರ ಶಿಲ್ಪಗಳ ಜೀಡಾಗಿದೆ.[೯]

ಚಲುಕ್ಯ ಅರಸರಲ್ಲಿ ಅತಿ ಹೆಚ್ಚು ಅವಧಿಯ ರಾಜ್ಯಭಾರ ಮಾಡಿದವನು ಈತನ ಮಗನಾದ ವಿಜಯಾದಿತ್ಯ. (ಕ್ರಿ.ಶ. ೬೯೬–೭೩೩) ಇವನು ಪಟ್ಟದಕಲ್ಲನ್ನು ಶೈವ ಕೇಂದ್ರವಾಗಿ, ಕಲಾ ಕೇಂದ್ರವಾಗಿ ಬೆಳೆಸಿದನು. ಅಲ್ಲಿನ ಸಂಗಮೇಶ್ವರ ದೇವಾಲಯ(ವಿಜಯೇಶ್ವರ)ವು ಈತನ ಕೊಡುಗೆಯಾಗಿದೆ.[೧೦] ದ್ರಾವಿಡ ವಿಮಾನ ಮಾದರಿಯ ಸರಳ ಮಂದಿರವಿದಾಗಿದೆ. ದಕ್ಷಿಣ ಭಾರತದಲ್ಲಿಯೇ ಪ್ರಪ್ರಥಮ ತ್ರಿಕೂಟಾಲಯವೆನಿಸಿರುವ ಬಾದಾಮಿ ಜಂಬುಲಿಂಗ ದೇವಾಲಯವು ಈತನ ಕಾಲದಲ್ಲಿಯೇ ನಿರ್ಮಾಣವಾಯಿತು. ಕ್ರಿ.ಶ. ೬೯೯ರಲ್ಲಿ ರಾಜ ಮಾತೆ ವಿನಯವತಿಯು ಈ ತ್ರಿಕೂಟಾಲಯದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ ಮೂರ್ತಿಗಳನ್ನು ಪ್ರತಿಷ್ಠಾಪಿಸಿದುದು ಶಾಸನದಿಂದ ವೇದ್ಯವಾಗುತ್ತದೆ.[೧೧] ಈ ದೇಗುಲ ನಿರ್ಮಾಣದ ಕಾಲವು ನಿರ್ದಿಷ್ಟವಾಗಿ ಗೊತ್ತಿರುವುದರಿಂದ ವಾಸ್ತು ಹಾಗೂ ಶಿಲ್ಪ ಕಲೆಯ ಬೆಳವಣಿಗೆಯನ್ನು ಗುರುತಿಸಲು ಇದು ಸಹಾಯಕವಾಗಿದೆ. ನಾಗನಾಥ ಕೊಳ್ಳದಲ್ಲಿ ಒಂಟಿ ಸಲಗದಂತೆ ನಿಂತಿರುವ ನಾಗನಾಥ ದೇವಾಲಯವನ್ನು ಕೂಡ ವಿಜಯಾದಿತ್ಯನ ಅವಧಿಯಲ್ಲಿ ಕಟ್ಟಲಾಗಿದೆ.[೧೨] ಮೊದಲಬಾರಿಗೆ ಮುಖಮಂಟಪ ಕಂಬಗಳು ಮಿಥುನ ಶಿಲ್ಪಗಳಿಂದ ಅಲಂಕೃತವಾಗಿರುವುದನ್ನು ಇಲ್ಲಿ ಕಾಣುತ್ತೇವೆ. ಮೇಲ್ಗಂಡಿನಲ್ಲಿರುವ ನಾಗಶಿಲ್ಪದ ಅಲಂಕರಣ ಕೂಡ ಮೌಲಿಕವಾದುದು. ಮಹಾಕೂಟದಲ್ಲಿನ ಬೃಹದಾಕಾರದ ಮಲ್ಲಿಕಾರ್ಜುನ, ಹಾಗೂ ಮಹಾಕೂಟೇಶ್ವರ ಗುಡಿಗಳು ಕೂಡ ಈ ಕಾಲದ ರಚನೆಗಳು. ಇಲ್ಲಿನ ಅಧಿಷ್ಠಾನದ ಅಲಂಕಾರ ಶಿಲ್ಪಗಳು ವಿಭಿನ್ನ ವಸ್ತುವಿನಿಂದಾಗಿ ಚಿತ್ತಾಕರ್ಷಕವಾಗಿವೆ. ಐಹೊಳೆಯಲ್ಲಿ ಬೃಹತ್‌ಗಾತ್ರದ ಜಾಲಂಧ್ರಗಳಿಂದ ಕೂಡಿದ ಲಾಡಖಾನಗುಡಿ ಮತ್ತು ಕಲಾತ್ಮಕ ಶಿಲ್ಪಗಳಿಂದ ಅಲಂಕೃತವಾದ ಮೇಲ್ಗಂಡನ್ನು ಹೊಂದಿರುವ ಹುಚ್ಚಪ್ಪಯ್ಯನ ಗುಡಿ ವಿಜಯಾದಿತ್ಯನ ಕಾಲಾವಧಿಯಲ್ಲಿ ರಚನೆಗೊಂಡ ಮಹತ್ವದ ದೇವಾಲಯಗಳು.

ಎರಡನೆಯ ವಿಕ್ರಮಾದಿತ್ಯನ ಆಡಳಿತದಲ್ಲಿ (೭೩೩–೭೪೪) ಚಲುಕ್ಯ ವಾಸ್ತುಕಲೆ ಮತ್ತು ಶಿಲ್ಪಕಲೆಗಳು ತಮ್ಮ ಪರಾಕಾಷ್ಠೆಯನ್ನು ತಲುಪಿದವು. ಅರಸರ ಲಕ್ಷ್ಯವು ಪಟ್ಟದಕಲ್ಲಿನಲ್ಲಿ ಕೇಂದ್ರೀಕೃತವಾಯಿತು. ಅರಸಿಯರಾದ ಲೋಕ ಮಹಾದೇವಿ ಹಾಗೂ ತ್ರೈಲೋಕ್ಯ ಮಹಾದೇವಿಯವರು, ಮೂರು ಬಾರಿ ಪಲ್ಲವರನ್ನು ಸೋಲಿಸಿದ ತಮ್ಮ ಪತಿಯ ದಿಗ್ವಿಜಯದ ಸ್ಮರಣೆಗಾಗಿ ಅತ್ಯದ್ಭುತ ಶಿವಾಲಯಗಳನ್ನು ಕಟ್ಟಿಸಿದರು. ಅವನ್ನು ಸೃಜಿಸಿದ ಸ್ಥಪತಿಗಳಾದ ಸರ್ವಸಿದ್ಧಿ ಆಚಾರಿ ಹಾಗೂ ಗುಂಡ ಅನಿವಾರಿತಾಚಾರಿ ಅವರಿಗೆ ಬಿರುದು ನೀಡಿ ಪ್ರಶಂಸೆಗಳೊಂದಿಗೆ ಅವರನ್ನು ಗೌರವಿಸಿದರು. ದೇವಾಲಯಗಳ ವಾಸ್ತು ಅಂಗಗಳೆಲ್ಲವೂ ಅಲಂಕಾರ ಶಿಲ್ಪಗಳಿಂದ ಶೋಭಿತವಾಗಿವೆ. ಶಿಲ್ಪಗಳ ಕಲಾ ನೈಪುಣ್ಯವಿಲ್ಲಿ ಘನರೂಪ ತಳೆದುದನ್ನು ಸಹೃದಯನು ಮನಗಾಣತ್ತಾನೆ.

ಭವ್ಯತೆ, ಘನತೆಯಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಮೆರೆದ ಐಹೊಳೆಯ ದುರ್ಗಾ (ದುರ್ಗ)ದೇವಾಲಯವು ಈ ಅವಧಿಯಲ್ಲಿ ಅಸ್ತಿತ್ವ ಪಡೆಯಿತು.[೧೩] ದೇವಕೋಷ್ಠ, ಕಂಬಗಳು, ಜಾಲಂಧ್ರಗಳು ಮತ್ತು ಅಧಿಷ್ಠಾನಗಳಲ್ಲಿ ಅಲಂಕರಣ ಶಿಲ್ಪಗಳು ಹರಳುಗೊಂಡಿವೆ. ಅವು ಅಧ್ಯಯನ ಯೋಗ್ಯವಾಗಿವೆ. ಅಳಕೊಮರಸಿಂಗ್ ಎಂಬ ಅಧಿಕಾರಿಯೋರ್ವನು ಇದನ್ನು ಕಟ್ಟಿಸಿದನು. ತನ್ನ ಪೂರ್ವಜರಂತೆ ಇಮ್ಮಡಿ ವಿಕ್ರಮಾದಿತ್ಯನೂ ಆಲಂಪುರದಲ್ಲಿ ವಾಸ್ತು ನಿರ್ಮಾಣ ಕಾರ್ಯಕ್ಕೆ ನೆರವಾದನು. ಈತನ ಆಸರೆಯಲ್ಲಿ ಪದ್ಮಬ್ರಹ್ಮ ಮಂದಿರವು ರೂಪು ಪಡೆಯಿತು.[೧೪]

ಬಾದಾಮಿ ಚಲುಕ್ಯ ಅರಸು ಮನೆತನದ ಕೊನೆಯ ದೊರೆ ಎಂದರೆ ಇಮ್ಮಡಿ ಕೀರ್ತಿವರ್ಮ (೭೪೪–೭೫೬). ಈತನ ಆಳ್ವಿಕೆ ದೀರ್ಘಕಾಲದ್ದಾಗಿರಲಿಲ್ಲ. ಈತನು ಕೂಡ ಕಲಾ

೯ Rajasekhara. S. op.cit, P. 13

೧೦ ರಾಜಶೇಖರ ಸಿಂದಗಿ, ಪೂರ್ವೋಕ್ತ, ಪು. ೪೮೯

೧೧ I.A., Vol. X, P.60 ; K, Vol.I, PP 2-4

೧೨ ರಾಜಶೇಖರ ಸಿಂದಗಿ, ಪೂರ್ವೋಕ್ತ, ಪು. ೪೮೦

೧೩ ಅದೇ

೧೪ ಅದೇ

ಚಿತ್ರ ೩. ಎರಡನೆಯ (ವೈಷ್ಣವ) ಗುಹೆ, ಬಾದಾಮಿ



ಚತ್ರ ೪ ಅ. ಮಹಾವಿಷ್ಣು ಗೃಹ (ಹೊರ ನೋಟ) ಬಾದಾಮಿ

ಚಿತ್ರ ೧. ಮೇಲಿನ ಶಿವಾಲಯ, ಬಾದಾಮಿ



ಚಿತ್ರ ೨. ಮಾಲಗಿತ್ತಿ ಶಿವಾಲಯ, ಬಾದಾಮಿ

ಚಿತ್ರ ೧೧. ಹುಚ್ಚಿಮಲ್ಲಿ ಗುಡಿ, ಐಹೊಳೆ



ಚಿತ್ರ ೧೨. ಹುಚ್ಚಪ್ಪಯ್ಯನ ಗುಡಿ, ಐಹೊಳೆ



ಚಿತ್ರ ೧೨. ಪಾಪನಾಥ ದೇವಾಲಯ, ಪಟ್ಟದಕಲ್ಲ

ಪೋಷಕನಾಗಿದ್ದನು. ಈತನಿಂದಾಗಿ ಬಾದಾಮಿಯಲ್ಲಿ ಭೂತನಾಥ ಗುಡಿ ಮತ್ತು ಐಹೊಳೆಯಲ್ಲಿ ಚಕ್ರಗುಡಿ ನಿರ್ಮಾಣವಾದವು.[೧೫] ಪಟ್ಟದಕಲ್ಲಿನ ಪಾಪನಾಥ ದೇವಾಲಯವು ಇವನ ಕಾಲದ್ದು . ಅದು ಗೋಡೆಯ ಮೇಲಿನ ಉಬ್ಬು ಶಿಲ್ಪಗಳಿಗಾಗಿ ಪ್ರಸಿದ್ಧಿ ಪಡೆದಿದೆ. ಈ ಶಿಲ್ಪ ಕಲಾಕೃತಿಗಳು ಪ್ರಧಾನವಾಗಿ ರಾಮಾಯಣದ ಸನ್ನಿವೇಶಗಳ ನಿರೂಪಣೆಯಾಗಿದ್ದರೂ ಅವು ಆನುಷಂಗಿಕವಾಗಿ ಸೌಂದರ್ಯ ವರ್ಧನೆಗೆ ಪೂರಕವಾಗಿದೆ. ಈ ಹಿಂದೆ ಹೇಳಿದಂತೆ ಬಾದಾಮಿ ಚಲುಕ್ಯರ ಗುಹಾಲಯ ಹಾಗೂ ರಾಚನಿಕ ದೇವಾಲಯಗಳಲ್ಲಿ ಮೂಡಿ ಬಂದ ಅಲಂಕಾರ ಶಿಲ್ಪಗಳು ಅಸಂಖ್ಯಾತವಾಗಿವೆ. ಅವುಗಳಲ್ಲಿ ಕಾಣಿಸಿಕೊಂಡ ವೈಶಿಷ್ಟ್ಯ, ವೈವಿಧ್ಯಗಳು ನಮ್ಮನ್ನು ಚಕಿತ ಗೊಳಿಸುತ್ತವೆ. ಹೀಗೆ ಸುಮಾರು ಎರಡು ಶತಮಾನಗಳ ಕಾಲ ಶಿಲ್ಪಕಲೆಗೆ ಪ್ರೋತ್ಸಾಹದ ನೀರುಣಿಸಿ ಕಲಾವೃಕ್ಷವನ್ನು ಬೆಳೆಸಿದ ಅಗ್ಗಳಿಕೆ ಚಲುಕ್ಯ ಅರಸರದು.

**ಶಿಲ್ಪಿಗಳು**

ಶಿಲ್ಪವೆಂದರೆ ಕೌಶಲ್ಯದಿಂದ ಕೂಡಿದ ಕರ್ಮವೆಂದರ್ಥ. ಇಡಿ ವಿಶ್ವವೇ ಒಂದು ಶಿಲ್ಪ, ಅದರ ಶಿಲ್ಪಿ ವಿಶ್ವಕರ್ಮ ಎಂಬುದಾಗಿ ವೇದವಾಙ್ಮಯ ತಿಳಿಸುತ್ತದೆ. ಆದ್ದರಿಂದ ವಿಶ್ವಕರ್ಮನು ಆದಿಶಿಲ್ಪಿ, ಜಗಚ್ಛಿಲ್ಪಿ. ಋಗ್ವೇದೀಯ ವಿಶ್ವಕರ್ಮ ಸೂಕ್ತ ಹಾಗೂ ಯಜುರ್ವೇದೀಯ ವಿಶ್ವಕರ್ಮ ಸೂಕ್ತಗಳು ಈ ಬಗ್ಗೆ ವಿವರ ನೀಡುತ್ತವೆ.[೧೬]

ವೇದಗಳಲ್ಲಿ ರಥಶಿಲ್ಪ, ವಾಸ್ತುಶಿಲ್ಪ, ನಗರ ಶಿಲ್ಪ, ಯಂತ್ರ ಶಿಲ್ಪ ಎಂದು ಮುಂತಾಗಿ ಹಲವು ವಿಧಗಳ ಶಿಲ್ಪಗಳ ವಿವರಣೆ ಇದೆ. ಪ್ರಾಚೀನ ಕಾಲದಲ್ಲಿ ವೇದಾಂಗವಾದ ಈ ಶಿಲ್ಪ ವಿದ್ಯೆಯು ಗುರುವಿನಿಂದ ಶಿಷ್ಯನಿಗೆ ಉಪದೇಶಿಸಲ್ಪಟ್ಟು ಶಿಷ್ಯ, ಪ್ರಶಿಷ್ಯ ಪರಂಪರೆಯಿಂದ ಪ್ರಾಪ್ತವಾಗುತ್ತಿತ್ತು. ಶಿಲ್ಪಜ್ಞಾನ, ತತ್ವಜ್ಞಾನಗಳೆರಡರಲ್ಲೂ ಪರಿಣತಿ ಸಾಧಿಸಿದವರು ಶಿಲ್ಪರ್ಷಿಗಳು. ಇವರೇ ಶಿಲ್ಪಮಂತ್ರಗಳ ದ್ರಷ್ಟಾರರು ಕೂಡ.

ವೈದಿಕ ಸಾಹಿತ್ಯದನ್ವಯ ಸಾನಗ, ಸನಾತನ, ಅಹಭೂನ, ಪ್ರತ್ನ, ಸುವರ್ಣರೆಂಬ ಋಷಿಗಳು ಶಿಲ್ಪಿಕುಲಕ್ಕೆ ಗೋತ್ರಪ್ರವರ್ತಕರು. ಇವರೇ ಇಂದಿನ ಶಿಲ್ಪಿಗಳ ಶಾಖಾಪುರುಷರು. ಶಿಷ್ಯ–ಪ್ರಶಿಷ್ಯ ಮತ್ತು ವಂಶ ಪರಂಪರೆಯಿಂದಾಗಿ ಶಿಲ್ಪವೂ ವೇದವೂ ಇಂದಿಗೂ ಉಳಿದು ಬಂದಿವೆ. ಶಿಲ್ಪಿ ಬ್ರಾಹ್ಮಣ(ವಿಶ್ವಕರ್ಮ)ರಲ್ಲಿ ಈ ಗೋತ್ರಗಳು ಈಗಲೂ ಪ್ರಚಲಿತದಲ್ಲಿವೆ.

ಸ್ಥಪತಿಗಳು ದೇವಾಲಯಗಳ ನಿರ್ಮಾಣಗಳನ್ನು ಕೈಕೊಂಡ ನಂತರ ಮೂರ್ತಿ ಶಿಲ್ಪ ನಿರ್ಮಾಣ ಕಾರ್ಯವು ವಿಪುಲವಾಗಿ ಹರಡಿತು. ಶಿಲ್ಪಶಾಸ್ತ್ರ ಗ್ರಂಥಗಳು ರಚಿತವಾದವು. ಶಿಲ್ಪ ರಚನೆಗೆ ನಿಯಮಗಳನ್ನು ರೂಪಿಸಲಾಯಿತು. ಈ ಶಿಲ್ಪಶಾಸ್ತ್ರದ ಕೃತಿಗಳು ಸುಮಾರು ೧೫೦೦ ವರ್ಷಗಳಷ್ಟು ಪ್ರಾಚೀನವಾದವುಗಳು.

ಈಗ ನಮಗೆ ಲಭ್ಯವಾಗಿರುವ ಶಿಲ್ಪಶಾಸ್ತ್ರ ಗ್ರಂಥಗಳ ಸಂಖ್ಯೆ ೩೦೦ಕ್ಕೂ ಹೆಚ್ಚು. ಅವುಗಳಲ್ಲಿ 'ಮಾನಸಾರ' ಎಂಬುದು ಮಹತ್ವದ ಗ್ರಂಥವೆನಿಸಿದ್ದು ದಕ್ಷಿಣ ಭಾರತದಲ್ಲಿ ಸರ್ವಮಾನ್ಯ ಕೃತಿ ಎನಿಸಿದೆ. ಶಿಲ್ಪಕಲೆಯನ್ನು ಕುರಿತಂತೆ ಪ್ರತಿ ಸಂಗತಿಯನ್ನು ಇಲ್ಲಿ ವಿಶದೀಕರಿಸಲಾಗಿದೆ.

'ಮಾನಸಾರ'ದ ಮೊದಲ ಅಧ್ಯಾಯದಲ್ಲಿ ವಾಸ್ತುಶಾಸ್ತ್ರ, ಮತ್ತು ದಾರುಕರ್ಮ (ಬಡಿಗತನ) ಕುರಿತಾಗಿ ವಿವರಣೆಯಿದೆ. ಎರಡನೆಯ ಅಧ್ಯಾಯದಲ್ಲಿ ಶಿಲ್ಪಗಳ ಅರ್ಹತೆ, ವಿಶ್ವಕರ್ಮಕುಲದ ಉಗಮ ಹಾಗೂ ವಿವಿಧ ಮಾಧ್ಯಮಗಳ ಶಿಲ್ಪಗಳ ಬಗ್ಗೆ ಸ್ಪಷ್ಟನೆಗಳಿವೆ.

"ದೇವತಾ ಮೂರ್ತಿ ನಿರ್ಮಾಣ ಹಾಗೂ ಪ್ರತಿಷ್ಠಾಪನಾ ಕಾರ್ಯವನ್ನು ನಿರ್ವಹಿಸಲು ಶಿಲ್ಪಿಗಳೇ ನಿಯೋಜಿತರಾಗುತ್ತಿದ್ದರೆಂಬುದು 'ಶಿಲ್ಪರತ್ನಾಕರ' ಮೊದಲಾದ ಗ್ರಂಥಗಳಿಂದ ತಿಳಿದುಬರುತ್ತದೆ.[೧೭] ಕಾಶ್ಯಪ ಶಿಲ್ಪದಲ್ಲಿ ವಿಶ್ವಕರ್ಮ ಕುಲೋತ್ಪನ್ನರಾದ ಶಿಲ್ಪಿಗಳೇ ದೇವತಾ ಮೂರ್ತಿ ನಿರ್ಮಾಣಕ್ಕೂ, ಮೂರ್ತಿ ಪ್ರತಿಷ್ಠಾಪನೆಗೂ ಅರ್ಹರೆಂದು ಆದೇಶಿಸಲಾಗಿದೆ.

[೧೫] ರಾಜಶೇಖರ ಸಿಂದಗಿ, ಪೂರ್ವೋಕ್ತ, ಪು. ೪೮೦

[೧೬] ಕೊಂಡೂರು ವೀರ ರಾಘವಾಚಾರ್ಯ 'ವೇದ ವಾಙ್ಮಯದಲ್ಲಿ ಶಿಲ್ಪ ಪರಂಪರೆ' ಆಚಾರ್ಯಾಭಿವಂದನೆ, ಬೆಂಗಳೂರು, ಪಿ.೭೧–೭೨

[೧೭] ಗಂಗಾಧರಮೂರ್ತಿ, 'ಶಿಲ್ಪವೂವೇದವೂ', ಆಚಾರ್ಯಾಭಿವಂದನೆ, ಬೆಂಗಳೂರು. ಪು. ೧೮೬

ಆಗಮಗಳಲ್ಲಿ 'ರಥೇಭ್ಯೋ ನಮಃ, ರಥಕಾರೇಭ್ಯೋ ನಮಃ' ಎಂಬ ವಂದನೆಯ ಮಂತ್ರಗಳಿವೆ. ಇದರಿಂದ ಧಾರ್ಮಿಕ ಸ್ತರದಲ್ಲಿ ಶಿಲ್ಪಿಗೆ ಇರುವ ಸ್ಥಾನ ಎಂತಹದೆಂಬುದು ವ್ಯಕ್ತವಾಗುತ್ತದೆ. ದೇವಾಲಯದ ದೇವ ಪ್ರತಿಮೆಯ ನಿರ್ಮಾಣ, ಪ್ರತಿಮಾ ಪ್ರತಿಷ್ಠಾನ, ಅರ್ಚನೆ ಇವೆಲ್ಲ ವಿಶ್ವಬ್ರಾಹ್ಮಣರ ಪಾಲಿನ ಕರ್ತವ್ಯ. ಸ್ಥಪತಿ, ರಥಕಾರ, ವಿಶ್ವಕರ್ಮ ಮತ್ತು ಕಮ್ಮಾಲರು ಎಂದು ಕರೆದುಕೊಳ್ಳುವ ಈ ವಿಶಿಷ್ಟ ಜಾತಿಯವರಿಗೆ ಮೂರ್ತಿ ಶಿಲ್ಪ ಮಾಡುವುದು ಪರಂಪರಾಗತ ಉದ್ಯೋಗವಾಗಿದ್ದು, ಶಾಸ್ತ್ರಗಳೂ ಇದನ್ನೇ ಸಾರುತ್ತವೆ– ಎಂಬುದಾಗಿ ಓ.ಸಿ.ಗಂಗೂಲಿಯವರು ಸ್ಪಷ್ಟ ಪಡಿಸಿದ್ದಾರೆ. ಕಾಲಾಂತರದಲ್ಲಿ ಶಿಲ್ಪಿಗಳು ಶಿಲ್ಪ ನಿರ್ಮಾಣ ಕಾರ್ಯಭಾರದಿಂದಾಗಿ ವಿಧಿಗಳನ್ನು ಇತರರಿಗೆ ವಹಿಸಿದರೆಂದು ತಿಳಿದು ಬರುತ್ತದೆ.

ಇಂದು ಪ್ರಾಚೀನ ಮಂದಿರಗಳಲ್ಲಿನ ಶಿಲ್ಪಗಳು ವಿಶ್ವಬ್ರಾಹ್ಮಣ (ವಿಶ್ಮಕರ್ಮ)ರ ಶಿಲ್ಪಗಳ ಕೊಡುಗೆ ಎಂಬುದರಲ್ಲಿ ಎರಡು ಮಾತಿರಲಾರದು. ಡಾ. ಸಾಲೆತ್ತೋರೆ, ಡಾ.ಶಂ.ಬಾ.ಜೋಶಿ, ಮೊದಲಾದ ಸಂಶೋಧಕರು ತಮ್ಮ ಬರಹಗಳಲ್ಲಿ ಈ ಕುರಿತಾಗಿ ಸಮರ್ಥನೆ ನೀಡಿದ್ದಾರೆ. ಡಾ. ಎಂ. ಚಿದಾನಂದ ಮೂರ್ತಿಯವರು ತಮ್ಮ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ಮಹಾಪ್ರಬಂಧದಲ್ಲಿ (ಪು ೪೮೫) ವಿಶ್ವಕರ್ಮರ ಜಾತಿಯ ರಕ್ತದಲ್ಲೇ ಕಲೆಯ ಬೀಜಗಳು ಹುದುಗಿರುವಂತೆ ಕಾಣುತ್ತದೆಂದು ನಿರೂಪಿಸಿದ್ದಾರೆ. ಬಾದಾಮಿ ಚಲುಕ್ಯ ಶಿಲ್ಪಕಲೆ ಕೂಡ ವಿಶ್ವಕರ್ಮ ಶಿಲ್ಪಿಗಳ ಕಾಣ್ಕೆಯಾಗಿದೆ. ಹಲವಾರು ಸ್ಥಪತಿ ಹಾಗೂ ಶಿಲ್ಪಿಗಳ ಹೆಸರುಗಳು ಶಿಲಾಶಾಸನಗಳಲ್ಲಿ ಲಭ್ಯವಾಗಿವೆ. ಆ ಕಲಾವಿದರು ವಿಶ್ವಕರ್ಮರೆಂಬುದನ್ನು ಅವು ಸ್ಪಷ್ಟಪಡಿಸುತ್ತವೆ.

ಆಚಾರಿ ಮತ್ತು ಓಜ(ಒವಜ)– ಇವು ವಿಶ್ವಕರ್ಮರ ಉಪನಾಮಗಳಾಗಿರುವುದು ಸರ್ವವಿದಿತ. ಆಚಾರಿ ಎಂಬ ಪದಕ್ಕೆ ಕಿಟ್ಟೆಲ್‌ರ ಕನ್ನಡ – ಇಂಗ್ಲಿಷ ನಿಘಂಟು Idol makers, Smiths, Carpenters, Gold smiths, Artificers ಎಂದು ಅರ್ಥ ನೀಡಿದರೆ, ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಕಮ್ಮಾರ, ಬಡಗಿ, ಅಕ್ಕಸಾಲಿಗ ಮತ್ತು ಶಿಲ್ಪಿ ಎಂದು ವಿವರಿಸಿದೆ. ವಿಶ್ವಕರ್ಮರನ್ನು ಆಚಾರಿಗಳೆಂದು ಈಗಲೂ ಹೇಳಲಾಗುತ್ತದೆ. ಪಟ್ಟದಕಲ್ಲಿನ ಉತ್ಕೃಷ್ಟ ವಾಸ್ತುಕಲಾಕೃತಿಯಾದ ವಿರೂಪಾಕ್ಷ (ಲೋಕೇಶ್ವರ) ದೇವಾಲಯವು ಸರ್ವಸಿದ್ಧಿ ಆಚಾರಿ ಮತ್ತು ಗುಂಡ ಅನಿವಾರಿತಾಚಾರಿಯವರಿಂದ ನಿರ್ಮಿತವೆಂಬುದು ಶಾಸನಗಳಿಂದ ಸ್ಪಷ್ಟವಿದೆ.[೧೮]

ಓಜ (=ವಾಜ) ಎಂಬುದಕ್ಕೆ ಕಿಟ್ಟೆಲ್ ಈ ಮೇಲಿನ ಅರ್ಥಗಳನ್ನು ಕೊಟ್ಟಿದ್ದಾರೆ ಮತ್ತು ಈ ಪದವು ಒವಜ ಒವಜ್ಜ, ಓವಜ, ಓಜ ಎಂಬ ರೂಪಗಳಲ್ಲಿದ್ದುದನ್ನು ತಿಳಿಸುತ್ತಾರೆ. ಬಾದಾಮಿಯಲ್ಲಿ ವಿಜಯ ಓವಜ, ಐಹೊಳೆಯಲ್ಲಿ ಬಿಞ್ಜಡೆ ಒವಜ, ಪಟ್ಟದಕಲ್ಲಿನಲ್ಲಿ ರೇವಡಿ ಒವಜ ಇವರು ಶಾಸನೋಕ್ತ ಶಿಲ್ಪಿಗಳು.

ಓಜ ಎಂಬ ಪದದ ಬಳಕೆ ವಿರಳವಾಗಿರಬಹುದಾದರೂ ಮರೆಯಾಗಿಲ್ಲ . ಚಲುಕ್ಯರ ಕಾಲಾವಧಿಯಲ್ಲಿ ಆಂಧ್ರಪ್ರದೇಶದ ಭಾಗದಲ್ಲಿರುವ ಶಿಲ್ಪಿಗಳಿಗೆ ಮಂಚಿ ಎಂಬ ಉಪನಾಮ ವಿರುವುದು ಕಂಡು ಬರುತ್ತದೆ. ಮಾಲಗಿತ್ತಿ ಶಿವಾಲಯದ ಶಾಸನವು ಆರ್ಯಮಞ್ಚಿ ಎಂಬ ಸ್ಥಪತಿಯು ಆ ದೇಗುಲವನ್ನು ನಿರ್ಮಿಸಿದನೆಂದು ಹೇಳುತ್ತದೆ. ಹಾಗಾಗಿ ಮಂಚಿ ಎಂಬುದು ಸ್ಥಪತಿ(ಅಥವಾ ಶಿಲ್ಪಿ)ಗಳಿಗೆ ಅಂಟಿಕೊಂಡ ಗೌರವಾನ್ವಿತ ಪದ. ಅದರಂತೆ ಸಿಂಗಮಞ್ಚಿ, ಕೋಳಿಮಞ್ಚಿ, ಕೊಂಡಿಮಞ್ಚಿ, ಪೆಲಮಞ್ಚಿ ಎಂದು ಮುಂತಾದವರು ಶಾಸನೋಕ್ತ ಶಿಲ್ಪಿಗಳು. ಕೊನೆಯಲ್ಲಿ ಮಞ್ಚಿ ಪದ ಇರುವ ಹೆಸರುಗಳು ಆಂಧ್ರಪ್ರದೇಶ ಭಾಗದಲ್ಲಿ ಇಂದಿಗೂ ಬಳಕೆಯಲ್ಲಿರುವುದನ್ನು ಡಾ. ಎಸ್. ವಿ. ಪಾಡಿಗಾರ ಅವರು ಗುರುತಿಸಿದ್ದಾರೆ. ಚಲುಕ್ಯ ಮಞ್ಚಿಗಳು ಆಂಧ್ರವರಾಗಿರಬಹುದೆಂದು ಊಹಿಸುತ್ತಾರೆ. ಅಮರಾವತಿ ಶಿಲ್ಪದ ಪ್ರಭಾವವನ್ನು ಚಲುಕ್ಯ ಗುಹಾಶಿಲ್ಪಗಳಲ್ಲಿ ನಿಚ್ಚಳವಾಗಿ ಕಾಣುತ್ತೇವೆ. ಇದು ಮೇಲಿನ ಅನುಮಾನವನ್ನು ದೃಢ ಪಡಿಸುತ್ತದೆ.

[೧೮] I.A. Vol. X, pp 163–165

ಅಧ್ಯಯನದ ಅನುಕೂಲಕ್ಕಾಗಿ ಚಲುಕ್ಯ ಶಿಲ್ಪಿಗಳನ್ನು (ಅ) ಗುಹಾಲಯಗಳ ಶಿಲ್ಪಿಗಳು ಮತ್ತು (ಆ) ರಾಚನಿಕ ಮಂದಿರಗಳ ಶಿಲ್ಪಿಗಳೆಂದು ವಿಂಗಡಿಸಬಹುದು. ಅವೆರಡೂ ವಾಸ್ತು ರಚನೆಗಳಲ್ಲಿ ವಿಭಿನ್ನ ತಂತ್ರಜ್ಞತೆ ಅಡಕವಾಗಿದೆ. ಗುಹಾಲಯದಲ್ಲಿಯ ಶಿಲ್ಪ ರಚನೆಗೆ ಹೆಚ್ಚಿನ ಇತಿಮಿತಿಗಳಿವೆ. ಅಲ್ಲಿನ ಶಿಲ್ಪವು ಕಂಬ ಅಥವಾ ಗೋಡೆಯ ಭಾಗವೇ ಆಗಿರುವುದರಿಂದ ಅದನ್ನು ಅತ್ತಿತ್ತ ಸರಿಸಲು, ಬಾಗಿಸಲು ಸಾಧ್ಯವಿಲ್ಲ. ಶಿಲ್ಪವು ಸ್ಥಿರ, ಅಚಲ. ಹಾಗಾಗಿ ಶಿಲ್ಪಿಯೇ ಆಚೀಚೆ ಸರಿದಾಡುತ್ತ ಕಟೆಯಬೇಕಾಗುತ್ತದೆ. ಆದರೆ ರಾಚನಿಕ ಮಂದಿರದ ಮೂರ್ತಿಯನ್ನು ಕಂಡರಿಸುವಾಗ ಕಲಾವಿದನು ಸ್ಥಿರವಾಗಿ ಕುಳಿತುಕೊಂಡು ಕೆತ್ತಬೇಕಿರುವ ಶಿಲೆಯನ್ನೇ ಹೊರಳಾಡಿಸುತ್ತ ಕಟೆಯಬಹುದು.

ಗುಹಾಲಯದ ಮೂರ್ತಿ ರಚನೆಯಲ್ಲಿ ತೊಡಗಿದಾಗ ಸೂಕ್ಷ್ಮ ಅಂಗಗಳಾದ ಮೂಗು, ಕಿವಿಗಳು ತುಂಡಾದರೆ ತಿದ್ದಿ ಸರಿಪಡಿಸ ಲಾಗದು. ಇನ್ನೊಂದನ್ನು ರೂಪಿಸಿ ಶಿಲ್ಪವನ್ನು ವಿನಿಮಯ ಮಾಡಲೂ ಸಾಧ್ಯವಿಲ್ಲ! ಆದರೆ ರಾಚನಿಕ ದೇಗುಲದ ಶಿಲ್ಪವು ಅಂಗಹೀನವಾದರೆ ಇಡಿಯಾಗಿ ಆ ಶಿಲ್ಪವನ್ನು ತೆಗೆದು ಹಾಕಿ ಬೇರೊಂದು ಶಿಲ್ಪವನ್ನು ಅದರ ಜಾಗದಲ್ಲಿ ನಿಲ್ಲಿಸಬಹುದು.

ಗುಹಾಲಯದ ವಿತಾನಾಲಂಕರಣವು ಇನ್ನೂ ಕಠಿಣತರವಾದ ಕೆಲಸ. ರೂವಾರಿಯು ಗೋಣನ್ನು ಯಾವಾಗಲೂ ಮೇಲೆತ್ತಿಕೊಂಡು ಇಲ್ಲವೇ ಅಂಗಾತ ಮಲಗಿಕೊಂಡು ಕೆತ್ತನೆ ಮಾಡಬೇಕಾಗುತ್ತದೆ. ಹಾಗೆ ಮಾಡುವಾಗ ಕಲ್ಲಿನ ತುಂಡುಗಳು, ಕಣಗಳು ಕಲಾವಿದನ ಕಣ್ಣುಗಳ ಮೇಲೆಯೇ ! ಈ ಸಂಕಷ್ಟದಿಂದ ಪ್ರಾಚೀನ ರೂವಾರಿಗಳು ಪಾರಾದ ಬಗೆ ಹೇಗೆ ಎಂಬುದು ಈಗಲೂ ಒಗಟಾಗಿ ನಮ್ಮನ್ನು ಕಾಡುತ್ತದೆ !

### ಅ. ಗುಹಾಲಯಗಳ ಶಿಲ್ಪಿಗಳು

ಬಾದಾಮಿ ಹಾಗೂ ಐಹೊಳೆಯ ಗುಹಾಲಯಗಳ ಎಡಬಲದ ಮತ್ತು ಮುಂದಿರುವ ಬಂಡೆಗಲ್ಲುಗಳ ಮೇಲೆ ನೂರಾರು ಕಿರು ಶಾಸನಗಳಿವೆ. ಇವೆಲ್ಲ ವ್ಯಕ್ತಿಗಳ ಹೆಸರುಗಳು. ಇವು ಆ ಕಾಲದ ಸಂದರ್ಶಕರ ಹೆಸರುಗಳಾಗಿರಬೇಕೆಂದು ಭಾವಿಸಲಾಗಿತ್ತು. ಆದರೆ ಬಹುಮಟ್ಟಿಗೆ ಅವೆಲ್ಲ ಗುಹಾಲಯದಲ್ಲಿ ಕಲಾಭಿವ್ಯಕ್ತಿ ಮಾಡಿದ ರೂವಾರಿಗಳದ್ದೆಂಬುದು ಅಧ್ಯಯನದಿಂದ ತಿಳಿದುಬಂದಿದೆ.

ಈ ಕಿರು ಶಾಸನಗಳು ಸಹಜವಾಗಿ ಕೈಗೆ ನಿಲುಕಲಾರದಷ್ಟು ಎತ್ತರವಾಗಿದ್ದು ಬಹಳಷ್ಟು ಶಾಸನಗಳನ್ನು ಹತ್ತಿಪ್ಪತ್ತು ಅಡಿಗಿಂತಲೂ ಎತ್ತರದ ಮಟ್ಟದಲ್ಲಿ ಕೆತ್ತಲಾಗಿದೆ. ಹೀಗೆ ಕೆತ್ತಲು ಉಳಿ ಹಾಗೂ ಸುತ್ತಿಗೆಗಳು ಅವಶ್ಯ. ಅಷ್ಟು ಎತ್ತರದಲ್ಲಿ ಬರೆಯಲು ಏಣಿಯಂತಹ ಉಪಕರಣವೂ ಬೇಕು. ಇವೆಲ್ಲವನ್ನೂ ಹೊಂದಿದ್ದ ಶಿಲ್ಪಿಗಳೇ ಈ ಹೆಸರುಗಳನ್ನು ಬರೆದಿರಲು ಸಾಧ್ಯ. ಹೀಗೆ ಕೊರೆಯಲಾದ ಹೆಸರುಗಳ ಕೊನೆಯಲ್ಲಿ ಆಚಾರಿ, ಓಜ ಇಲ್ಲವೆ ಮಂಚಿ ಎಂದಿರುವುದರಿಂದ ಈ ಕಲಾವಿದರು ವಿಶ್ವಕರ್ಮ ಶಿಲ್ಪಿಗಳೆಂಬುದು ಸ್ಪಷ್ಟ.

ಆರು ಮತ್ತು ಏಳನೆಯ ಶತಮಾನಗಳಲ್ಲಿ ಕಲಾವಿದರು ತಮ್ಮ ಕಲಾಕೃತಿಗಳ ಮೇಲೆ ತಮ್ಮ ಹೆಸರುಗಳನ್ನು ಬರೆಯುವುದು ರೂಢಿಯಲ್ಲಿರಲಿಲ್ಲ . ತಮ್ಮ ಹೆಸರಿಗಿಂತ ಕಲಾಕೃತಿ ಹಿರಿದಾದುದು. ಅದು ಉಳಿಯುವಂತಾಗಲಿ ಎಂದು ಆಶಿಸಿದ ಅವರು ತಮ್ಮ ಹೆಸರನ್ನು ಬರೆಯದೆ ಸಜ್ಜನಿಕೆಯನ್ನು, ವಿನೀತ ಭಾವವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಆರನೆಯ ಶತಮಾನದ 'ನೆಲವಳ್ಕೆ' ಎಂಬ ಶಿಲ್ಪಿಯು ತಾನು ಸೃಷ್ಟಿಸಿರುವ ಕಲಾಕೃತಿಯ ಜೊತೆಗೆ ತನ್ನ ಹೆಸರನ್ನೂ ದಾಖಲಿಸಿ ಉಪಕರಿಸಿದ್ದಾನೆ. ಬಾದಾಮಿಯ ವೈಷ್ಣವ ಗುಹಾಲಯದ ಮುಂಜೂರನ್ನು ಅಲಂಕರಿಸಿರುವ ಬೃಹತ್ ಗಾತ್ರದ ಗರುಡ ಶಿಲ್ಪವು ನೆಲವಳ್ಕೆಯ ಕಲಾ ರಚನೆಯಾಗಿದ್ದು, ಅದರ ಬಲ ರೆಕ್ಕೆಯ ಮೇಲೆ ತನ್ನ ಹೆಸರನ್ನು ಕೆತ್ತಿರುವನು. (**ಚಿತ್ರ೧೮**)



ಚಿತ್ರ ೧೮. ಗರುಡ, ನೆಲವಳ್ಕೆಯ ಕೃತಿ


ಚಿತ್ರ ೧೯. ಶಿಲ್ಪಿಗಳ ಗೆರೆಗಳು

ಗುಹಾಲಯದ ಸಮೀಪದಲ್ಲಿ ಕಂಡು ಬರುವ ಕಿರುಶಾಸನಗಳು ಆ ಗುಹಾ ನಿರ್ಮಾಣದಲ್ಲಿ ತೊಡಗಿಕೊಂಡಿದ್ದ ಕಲಾವಿದರ ಹೆಸರುಗಳೆಂದು ಗ್ರಹಿಸಬಹುದು. ಆದಾಗಿ ಶೈವ ಗುಹೆಯ ಹತ್ತಿರ ದೊರೆಯುವ ಅಯ್ಯಸಾಮಿ ಕಲ್ಕುಟ್ಟಿ, ದೋಣ ಸಾಮಿ, ನಾಕಯ್ಯ, ಮಾರುತಿ ಸಾಮಿ, ಶ್ರೀ ಶೋಪಕಾರಿ, ಉಮಾಭಟ, ಅಜ್ಜಕ, ಗಣಸ್ವಾಮಿ, ಮಲ್ಲಿಸಾಮಿ ಮುಂತಾದ ಹೆಸರುಗಳು ಕಲಾವಿದರವಾಗಿವೆ. ಒಂದನೆಯ ಮತ್ತು ಎರಡನೆಯ ಗುಹೆಯ ನಡುವೆ ಒಂದು ಕಲ್ಲಾಸರೆಯಿದ್ದು ಅಲ್ಲಿ ಶರಣಚಂದ್ರ, ಭಮಚಂದ್ರ, ಸಿವಪುತ್ರ, ಯಶದೇವ, ದೇವದಾಸ, ಗಂಗೋಸ್ವಾಮಿ, ಮಹಾರಾಟೆ ಎಂಬವರ ಹೆಸರುಗಳು ಸಿದ್ಧಮಾತೃಕಾ ಲಿಪಿಯಲ್ಲಿವೆ. ಆದ್ದರಿಂದ ಈ ಕಲಾವಿದರು ಉತ್ತರದ ಭಾಗದಿಂದ ಬಂದವರಾಗಿರಬಹುದು. ಎರಡನೆಯ ಗುಹೆಯ ದಾರಿಯಲ್ಲಿ ಇರುವ ಬಂಡೆಗಲ್ಲ ಮೇಲೆ ಕೊಟ್ಟಿಮಂಚಿ, ಹಿಡುಂಭಿ, ಅಜ, ದೋಣಮ್ಮ, ಗೊಟ್ಟಕ ಎಂಬವರ ಹೆಸರುಗಳಿವೆ.

ಎರಡನೆಯ ಗುಹೆಯ ಪೂರ್ವಬದಿಯ ಹೊರಗೋಡೆಯ ಮೇಲೆ ಹೆಸರುಗಳ ಜೊತೆಗೆ ಅಲ್ಲಲ್ಲಿ ಸಣ್ಣಗೆರೆಗಳನ್ನು ಸಾಲಾಗಿ ಕೊರೆಯಲಾಗಿದೆ. ಕೆಲವು ಸಾಲುಗಳು ಭೂಮಿಗೆ ಸಮಾಂತರವಾಗಿಯೂ ಇನ್ನೂ ಕೆಲವು ಲಂಬವಾಗಿಯೂ ಕಾಣಿಸಿಕೊಂಡಿವೆ. ಇವು ಸುಮಾರು ೧ ರಿಂದ ೩ ಸೆಂ.ಮೀ. ಉದ್ದದ ಗೆರೆಗಳು. ಕೆಲವೆಡೆ ಚುಕ್ಕೆಗಳೂ ಇವೆ. (**ಚಿತ್ರ ೧೯**) ಇಂಥ ಗೆರೆ ಮತ್ತು ಚುಕ್ಕೆಗಳು ಶಿಲ್ಪಿಗಳು ಕೆಲಸ ಮಾಡಿದ ದಿನಗಳ ಸಂಖ್ಯೆಯನ್ನು ಸೂಚಿಸುತ್ತಿರಬಹುದು. ಶಿಲ್ಪ ಕೆತ್ತನೆ ನಡೆದ ಸ್ಥಳದ ಪಕ್ಕದಲ್ಲಿಯೇ ಇವು ಕಾಣಿಸಿಕೊಂಡಿರುವುದನ್ನು ಲಕ್ಷಿಸಬಹುದು. ಹೀಗೆ ಗೆರೆಗಳನ್ನು ಬರೆದು ಲೆಕ್ಕ ಇಡುವ ಪದ್ಧತಿ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ. ಗಾಥಾ ಸಪ್ತಶತಿಯ ಗಾಹೆಗಳಲ್ಲಿ ವಿರಹಿಣಿಯು ಪತಿಯ ಪ್ರವಾಸದ ದಿನಗಳನ್ನು ಎಣಿಸಲು ಗುರುತಿನ ಗೆರೆಗಳನ್ನು ಬರೆದಿರುವುದನ್ನು ಹೇಳಲಾಗಿದೆ.[೧೯]

ಎರಡನೆಯ ಗುಹೆಯ ಪರಿಸರದಲ್ಲಿನ ರೂವಾರಿಗಳ ಹೆಸರುಗಳನ್ನು ಹೀಗೆ ಸಂಗ್ರಹಿಸಬಹುದು. ಧರ್ಮಸಿಜ್ಜ, ಮಲ್ಲಿ, ದೋಣ ಸುಪುತ್ರ, ಮಾರಿಕೆ, ನಿದ್ದೆಗ, ದೋಣ, ವಸಂತ ಚೋಳಿ, ಸಿಜ್ಜ, ದುಟ್ಟುಜ, ಶಾನ್ತಿಮೂರ್ತಿ, ಗೊಟ್ಟಿಮೂರ್ಕ, ಏಚ್ಯ, ಅನಂತ, ಆದರ್ಶ, ಅದಮರಿ, ವಾಸುದೇವ, ಯಶೋಮನ್ತ , ಅಳಗೆರೆಯ, ಕೇಸವ, ದುರ್ವಿಟ, ಸಿವಚನ್ದ್ರ, ಬಿಠಮಾರ್ಗ, ಸುರಚಿತ, ಶ್ರೀ ಕೀರ್ತಿ, ಪ್ರತಿವಿಕ್ರಮ, ಅಜ, ಮೂರ್ತ್ತಿಮಾನ್ ಮೊದಲಾದವು.

ವಾಸ್ತು ಅದ್ಭುತವೆನಿಸಿರುವ ಮಹಾವಿಷ್ಣುಗೃಹದ ನಿರ್ಮಾಣ ಕಾರ್ಯದಲ್ಲಿ ನೆಲವಳ್ಕೆಯನ್ನೊಳಗೊಂಡು ಕೊಂಡಿ ಮಂಚಿ, ವಸುದೇವ ಶಕುಲ, ಅಯ್ಯ, ಪಞ್ಚಣ, ಚೋಳ ದೇವೆರೆಯ ಕಲ್ಕುಟ್ಟಿಗ, ಪೊಲಮಂಚಿ, ಆಚಾರಸಿದ್ಧಿ, ರೂಪಶೇಖರ, ಆರ್ಯ್ಯ ಚೆಟ್ಟಿ, ಕೋಳಿಮಂಚಿ, ಪೊಲಮಂಚಿ, ವಿಮಲ, ದೋಣ, ಕಾಂತಿಮಂಚಿ, ಜಯಕೀರ್ತಿ, ವಿಜಯ ಓವಜ, ಶ್ರೀ ಗುಣಪಾಲ, ಕೊಟ್ಟಿಲ, ಪ್ರಸನ್ನ ಬುದ್ಧಿ, ಶ್ರೀ ಭಾದುಕ್ಕೆ, ಶ್ರೀ ಆರಿಕ್ಕೆ, ಶ್ರೀ ಗೆರೆಯನ್, ಶ್ರೀ ಅಣತ್ತ ಮಂಚಿ ಮೊದಲಾದ ಶಿಲ್ಪಿಗಳು ಶ್ರಮಿಸಿರಬಹುದು.

ಕೆಲವು ಕಲಾವಿದರು ಎರಡೂ ವೈಷ್ಣವ ಗುಹೆಗಳಲ್ಲಿ ಸೇವೆ ಸಲ್ಲಿಸಿರುವ ಸಂಭಾವ್ಯವಿದೆ. ಹೀಗೆ ಎರಡೂ ಗುಹೆಗಳ ನಿರ್ಮಾಣ ಕಾರ್ಯದಲ್ಲಿ ತೊಡಗಿರಬಹುದಾದ ರೂವಾರಿಗಳೆಂದರೆ ಕಾಂತಿಮಂಚಿ, ಪೊಲಮಂಚಿ, ಸಿಂಗಮಂಚಿ, ಹಾರಿಕ್ಕೆ, ಭವಸ್ವಾಮಿ ಆರ್ಯ, ಮೊದಲಾದವರು. ಉದಗ್ರ, ಕೇಸವ, ಪಂಚಣ, ವಿಜಮ್ಮ, ಶ್ರೀ ಪ್ರಸನ್ನ ಬುದ್ಧಿ, ಆರಿಕ್ಕೆ, ಭಾದುಕ್ಕೆ, ಸಿರಿಗೆರೆಯ, ಕೋಳಿಮಂಚಿ, ಕದ್ರೆಸಾಮಿ, ಮಾರ್ಗಜ, ನಿಧಿದೇವ, ಅಣತ್ತಮಂಚಿ, ಬೆಣ್ಣೆಯರ ಚಾಳುಗೇಸಿ ಕಲ್ಕುಟ್ಟಿ, ಕಾಂತಿಮಂಚಿ, ಕಣ್ಣ, ಪೆಲಮಂಚಿ, ಸಿಂಗಮಂಚಿ, ಭವಸ್ವಾಮಿ ಆರ್ಯ ಮೊದಲಾದವರು ಜಿನಾಲಯವನ್ನು ನಿರ್ಮಿಸಿರಬಹುದಾಗಿದೆ.

ಬಾದಾಮಿಯ ಅಗಸ್ತ್ಯ ತೀರ್ಥದ ಪೂರ್ವ ದಂಡೆಯ ಮೇಲಿರುವ ಬಂಡೆಗಳ ಮೇಲೆ

[೧೯] ಬಡಿಗೇರ ಪಿ. ಬಿ. ಗಾಹಾಸತ್ತ ಸಈ. ಮೈಸೂರು. ಪು. ೨೯

ಕೆಲವು ಶಿಲ್ಪಗಳಿವೆ. ಇವುಗಳಲ್ಲಿ ಎದ್ದು ಕಾಣುವ ಬ್ರಹ್ಮ, ಈಶ್ವರ ಮತ್ತು ವಿಷ್ಣು ಪ್ರತಿಮೆಗಳನ್ನು ನಿರ್ಮಿಸಿದವ ಎರಂಡ ಗಣಚನೆಂದು ಪಕ್ಕದ ಕಿರು ಶಾಸನವು ಸೂಚಿಸುತ್ತದೆ. ಅದರಂತೆ ಅಲ್ಲಿನ ದುರ್ಗಾದೇವಿಯ ಮೂರ್ತಿಯನ್ನು ಕಡೆದವನು ಚಂದ್ರಕೀರ್ತಿ ಭಟ್ಟನಾಗಿರುವ ಸಂಭಾವ್ಯವಿದೆ. ಸಮೀಪದ ಶಿಬಾರ ಫಡಿಯಲ್ಲಿ ಕುಶಲ ಧರ್ಮಣ ಮತ್ತು ಅಘವಿನಾಸಿಗಳು ರೂಪಿಸಿರುವ ಗಣೇಶ ಮತ್ತು ನಾಗರಾಜ ವಿಗ್ರಹಗಳಿವೆ.

ಐಹೊಳೆಯ ಗುಹಾಲಯಗಳ ಪರಿಸರದಲ್ಲಿಯೂ ಕಿರು ಶಾಸನಗಳು ದೊರೆತಿವೆ. ಅಲ್ಲಿಯ ಗುಹಾಲಯಗಳ ನಿರ್ಮಾಣದಲ್ಲಿ ತೊಡಗಿದ್ದ ಶಿಲ್ಪಿಗಳೆಂದರೆ ಬಿಙ್ಙಡಿ ಓವಜ, ಬಿಣ ಅಮ್ಮ, ಬಿಸಾಟ, ವ್ಯಾಘ್ರಮನ್ತ, ಗುಣಪ್ರಿಯ, ಶ್ರೀಪತಿ ಚಿತ್ರಾಧಿಪ ಮೊದಲಾದವರು.

ಲಿಪಿ ವೈಶಿಷ್ಟ್ಯ, ನಾಮ ವೈಶಿಷ್ಟ್ಯವನ್ನಾಧರಿಸಿ ಚಲುಕ್ಯರ ಗುಹಾ ನಿರ್ಮಾಣದಲ್ಲಿ ಶ್ರಮಿಸಿದ ರೂವಾರಿಗಳಲ್ಲಿ ಕೆಲವರು ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶಗಳಿಂದ ಬಂದಿರಬಹುದು. ಆದರೆ ಬಹುಪಾಲಿನ ಕಲಾವಿದರು ಸ್ಥಳೀಯರಾಗಿದ್ದರೆಂಬುದು ಸ್ಪಷ್ಟ.

## ಆ. ರಾಚನಿಕ ದೇವಾಲಯಗಳ ಶಿಲ್ಪಿಗಳು

ಚಲುಕ್ಯರ ಆಳ್ವಿಕೆಯ ಮೊದಲ ಹಂತದಲ್ಲಿ ಗುಹಾವಾಸ್ತು ನಿರ್ಮಾಣವು ಪ್ರಾಧಾನ್ಯ ಪಡೆದಿತ್ತು . ಕ್ರಮೇಣ ಚಲುಕ್ಯ ರೂವಾರಿಗಳು ರಾಚನಿಕ ಮಂದಿರಗಳ ನಿರ್ಮಾಣದತ್ತ ಹೆಚ್ಚಿನ ಒಲವು ತೋರಿಸಿದರು. ಇದರಿಂದಾಗಿ ಬಾದಾಮಿ, ಮಹಾಕೂಟ, ಐಹೊಳೆ, ಪಟ್ಟದಕಲ್ಲು ಹಾಗೂ ದೂರದ ಸಂಡೂರು, ಆಲಂಪುರಗಳಲ್ಲಿ ಹಲವಾರು ರಾಚನಿಕ ದೇವಾಲಯಗಳು ತಲೆ ಎತ್ತಿದವು. ಈ ದೇವಾಲಯಗಳ ನಿರ್ಮಾಣ ಕಾರ್ಯದಲ್ಲಿ ನಿರತರಾದ ಶಿಲ್ಪಿಗಳು ಸಾವಿರಾರು ಇದ್ದಾರು. ಆದರೆ ನಮಗೆ ಲಭ್ಯವಾಗಿರುವ ಹೆಸರುಗಳು ತೀರ ಕಡಿಮೆ.

ಡಾ. ಎಸ್. ವ್ಹಿ. ವೆಂಕಟೇಶಯ್ಯನವರು ಇತ್ತೀಚೆಗೆ ಪಟ್ಟದಕಲ್ಲ ಬಳಿ ಶೋಧಿಸಿದ ಕಲ್ಗಣಿಯಲ್ಲಿಯ ಬಂಡೆಗಳ ಮೇಲೆ ಕೆಲವು ಶಿಲಾ ಕರ್ಮಿಗಳು ತಮ್ಮ ಹೆಸರನ್ನು ದಾಖಲಿಸಿದ್ದಾರೆ. ಶಿಲಾಲಿಪಿಯೊಂದು ನಿಧಿಪುರುಷನ್ ಎಂಬ ಕಲಾವಿದನನ್ನು ಪರಿಚಯಿಸುತ್ತದೆ. ಶ್ರೀ ಓವಜರರಸನ್ (ಶಿಲ್ಪಿಗಳ ರಾಜ) ಎಂಬ ಲಿಪಿಯು ನಿಧಿಪುರುಷನ ಬಿರುದನ್ನು ಸೂಚಿಸುತ್ತದೆಂಬ ತರ್ಕ ಡಾ. ವೆಂಕಟೇಶಯ್ಯನವರದು. ಇದು ಸ್ವೀಕಾರಾರ್ಹವಾಗಿದೆ. ಆದರೆ ಈ ನಿಧಿ ಪುರುಷನು ಕೆತ್ತನೆ ಮಾಡಿದ ಶಿಲ್ಪ ಯಾವುದೆಂಬುದು ತಿಳಿಯುವುದಿಲ್ಲ. ಪಟ್ಟದಕಲ್ಲಿನ ಪ್ರಧಾನ ದೇವಾಲಯಗಳಲ್ಲಿ ಕೆಲವು ಶಿಲ್ಪಿಗಳ ಹೆಸರುಗಳನ್ನು ಮತ್ತು ಅವರು ರೂಪಿಸಿದ ಮೂರ್ತಿಗಳನ್ನು ಗುರುತಿಸಲಾಗಿದೆ. ಚಲುಕ್ಯ ಕಾಲದ ಅತ್ಯಂತ ಪ್ರಸಿದ್ಧ ಶಿಲ್ಪಿಯೆಂದರೆ ಬಲದೇವ ಎಂಬಾತನು. ಈತನು ದ್ವಾರಪಾಲರ ಮೂರ್ತಿಗಳನ್ನು ನಿರ್ಮಿಸುವಲ್ಲಿ ನಿಷ್ಣಾತನಾಗಿದ್ದನೆಂಬುದು ತಿಳಿದು ಬರುತ್ತದೆ. ವಿರೂಪಾಕ್ಷ ದೇವಾಲಯದ ದಕ್ಷಿಣ ಮುಖ ಮಂಟಪದ ಅರೆಗಂಬದ ಭಾಗವಾಗಿ ನಿಂತಿರುವ ದ್ವಾರಪಾಲನ ಮೂರ್ತಿಯು ಮಾನವ ಸಹಜ ಗಾತ್ರದಲ್ಲಿದ್ದು ಅತ್ಯಂತ ಕಲಾತ್ಮಕವಾಗಿದೆ. ಅದೊಂದು ದುಂಡು ಶಿಲ್ಪ ಎಂಬ ಭಾವನೆ ಉಂಟಾಗುತ್ತದೆ. **(ಚಿತ್ರ ೨೦)** ಈ ಶಿಲ್ಪದ ಮೇಲ್ಭಾಗದಲ್ಲಿ 'ಶ್ರೀ ದುಗ್ಗಿ ಆಚಾರಿಯ ಮಗನ್ ಬಲದೇವ ಕೃತ' ಎಂಬ ಬರಹವಿದೆ. ಬಲದೇವನು ದುಗ್ಗಿ ಆಚಾರಿಯ ಮಗನೆಂಬುದು ಇದರಿಂದ ಸ್ಪಷ್ಟ. ಬಲದೇವನು ಆಚಾರಿಯ ಮಗನಾಗಿದ್ದರೂ 'ಆಚಾರಿ' ಎಂಬ ಉಪನಾಮವನ್ನು ಹೊಂದಿಲ್ಲದಿರುವುದು ಗಮನಾರ್ಹ ಸಂಗತಿ. ಇದರಿಂದ ಕೆಲವರು ಉಪನಾಮವನ್ನು ಬಳಸುತ್ತಿರಲಿಲ್ಲವೆಂದು ತಿಳಿಯಬಹುದು.


ಚಿತ್ರ ೨೦. ದ್ವಾರಪಾಲ, ಬಲದೇವನ ರಚನೆ

ಬಲದೇವನು ಪಾಪನಾಥ ದೇವಾಲಯವನ್ನು ಸಿಂಗರಿಸುವಲ್ಲಿಯೂ ಶ್ರಮಿಸಿದ್ದಾನೆ. ಪೂರ್ವದ ಮುಖ ಮಂಟಪದ ದ್ವಾರಪಾಲ ಶಿಲ್ಪವೂ ಈತನ ಕಲಾಕೃತಿಯೇ ಆಗಿದೆ. ಜೊತೆಗೆ ದಕ್ಷಿಣ ಗೋಡೆಯ ಮೇಲಿರುವ ರಾಮಾಯಣ ದೃಶ್ಯಗಳಲ್ಲಿ ಕೆಲವನ್ನು ಬಲದೇವನು ಕಂಡರಿಸಿರುವನೆಂದು ತಿಳಿಯಬಹುದು. ದೇವಾಲಯದ ಸಭಾಮಂಟಪದ ಮೇಲ್ಗಂಡಿನಲ್ಲಿ

ನಟರಾಜನ ಸುಂದರ ಕಂಡರಣೆಯಿದೆ. ಇದೂ ಕೂಡ ಬಲದೇವನ ರಚನೆಯೇ ಆಗಿದೆ. ಇದೇ ಗುಡಿಯ ಒಂದಂಕಣವು ಅಷ್ಟದಿಕ್ಪಾಲರಿಂದ ಅಲಂಕೃತವಾಗಿದೆ. ಇದು ಬಲದೇವನ ಮತ್ತೊಂದು ಪ್ರೌಢ ಕಲಾಕೃತಿ. ಇಲ್ಲಿನ ದಿಕ್ಪಾಲರು ತಮ್ಮ ನಿರ್ದಿಷ್ಟವಾದ ದಿಕ್ಕುಗಳಲ್ಲಿ ಮೊದಲಬಾರಿ ಕಾಣಿಸಿಕೊಂಡಿದ್ದಾರೆಂಬುದು ಮಹತ್ವದ ಸಂಗತಿ. ಇಲ್ಲಿಯವರೆಗೆ ಚಲುಕ್ಯರ ಯಾವೊಂದು ಶಿಲ್ಪವೂ ಅಷ್ಟದಿಕ್ಪಾಲರನ್ನು ಅವರ ದಿಕ್ಕು(ಸ್ಥಾನ)ಗಳಲ್ಲಿ ಚಿತ್ರಿಸಿರಲಿಲ್ಲ. ಅಲ್ಲಿನ ಲಿಪಿಯು ಬಲದೇವನನ್ನು 'ಭಯ ದೂರನ್' ಎಂದು ಬಣ್ಣಿಸಿದೆ. ಪಾಪನಾಥ ಗುಡಿಯ ಕೆಲವು ಜಾಲಂಧ್ರಗಳನ್ನು ಕಟೆದ ಖ್ಯಾತಿಯೂ ಈತನದಾಗಿದೆ.


ಚಿತ್ರ ೨೧. ಚಂಗಮ್ಮನ ಶಿವಮೂರ್ತಿ

ಬಲದೇವನಂತೆ ಜಾಲಂಧ್ರಗಳ ನಿರ್ಮಾಣಕ್ಕಾಗಿ ಹೆಸರಾಗಿರುವ ಇನ್ನೊಬ್ಬ ಶಿಲ್ಪಿ ಎಂದರೆ ದೇವ ಆರ್ಯ. ಪಾಪನಾಥ ದೇವಾಲಯದ ದಕ್ಷಿಣ ಗೋಡೆಯಲ್ಲಿನ ನಟರಾಜನ ಎಡಬಲಗಳಲ್ಲಿ ಕಲಾತ್ಮಕವಾಗಿ ಜೋಡಿಸಲಾದ ಎರಡೂ ಜಾಲಂಧ್ರಗಳು ದೇವ ಆರ್ಯನ ಕಲಾಕೃತಿಗಳಾಗಿವೆ. ಈತನ ಹೆಸರು ಸಿದ್ಧಮಾತೃಕಾ ಲಿಪಿಯಲ್ಲಿ ಇರುವುದರಿಂದ ಇವನು ವಿಭಿನ್ನ ಪ್ರದೇಶದ ಕಲಾವಿದನಿರಬಹುದು. ಚೆಂಗಮ್ಮ ಎಂಬಾತನು ಬಲದೇವನಂತೆ ವಿರೂಪಾಕ್ಷ ಮತ್ತು ಪಾಪನಾಥ ಮಂದಿರಗಳನ್ನು ಅಲಂಕರಿಸಲು ಶ್ರಮಿಸಿದ್ದಾನೆ. ವಿರೂಪಾಕ್ಷ ಗುಡಿಯ ದಕ್ಷಿಣ ಗೋಡೆಯ ಮೇಲಿರುವ ನರ್ತಿಸುವ ಶಿವನ ಮೂರ್ತಿಯು ಚೆಂಗಮ್ಮನ ಕಾಣ್ಕೆ ಆಗಿದೆ. **(ಚಿತ್ರ ೨೧)** ಕೆಳಗೆ 'ಚೆಂಗಮ್ಮ ಪ್ರತಿಮೆ ಕುಟ್ಟಿದೊನ್' ಎಂಬ ಶಿಲಾ ಬರಹವಿದೆ. ಶಿವನು ತ್ರಿನೇತ್ರನಾಗಿ, ಚತುರ್ಭುಜಿಯಾಗಿ ಬಿಂಬಿತನಾಗಿದ್ದಾನೆ. ಚದುರಿಕೊಂಡ ಕೇಶರಾಶಿಯು ವಿಲಕ್ಷಣವಾದ ಆದರೆ ಚೆಲುವಾದ ರೂಪತಾಳಿದೆ. ಈತನು ವಿರೂಪಾಕ್ಷ ಗುಡಿಯ ಹೊರಗೋಡೆಯನ್ನು ಶಿವನ ಶಿಲ್ಪದಿಂದ ಅಲಂಕರಿಸಿದಂತೆ ಪಾಪನಾಥ ದೇವಾಲಯದ ಒಳಗೋಡೆಯನ್ನು ಮಿಥುನ ಶಿಲ್ಪದಿಂದ ಸಿಂಗರಿಸಿದ್ದಾನೆ.

ವಿರೂಪಾಕ್ಷ ದೇವಾಲಯದ ಪೂರ್ವ ಮುಖಮಂಟಪದ ಮೇಲ್ಗಂಡಿನಲ್ಲಿ ಕೆತ್ತನೆಗೊಂಡ ಸೂರ್ಯ ಪ್ರತಿಮೆಯು ಅಪ್ರತಿಮವಾದುದು. ಸ್ಥಾನಕ ರವಿದೇವ, ಆತನ ರಥ, ಸಪ್ತಾಶ್ವಗಳು, ಅರುಣ ಸಾರಥಿ, ಮೋಡಗಳು, ಉಷೆ, ಪ್ರತ್ಯುಷೆ ಮೊದಲಾದ ವಿವರಗಳಿಂದ ಕೂಡಿ ಅದು ಚಿತ್ತಾಕರ್ಷಕವಾಗಿದೆ. ಇದು ಸಕರೇಸಿವಾದಿಯ ಶಿಷ್ಯನಾದ ದೇವಪುತ್ರನ ಕಂಡರಣೆಯಾಗಿದೆ. **(ಚಿತ್ರ ೨೨)** ಗುರುಶಿಷ್ಯ ಪರಂಪರೆಯಂತೆ ಶಿಲ್ಪ ವಿದ್ಯೆಯನ್ನು ನೀಡಲಾಗುತ್ತಿತ್ತೆಂಬುದನ್ನು ಮನಗಾಣಬಹುದು.


ಚಿತ್ರ ೨೨. ಸೂರ್ಯ ಪ್ರತಿಮೆ, ದೇವಪುತ್ರನ ಶಿಲ್ಪ



ಚಿತ್ರ ೨೩. ಪುಲ್ಲಪ್ಪನ ಕೃತಿ

ವಿರೂಪಾಕ್ಷ ದೇವಾಲಯದ ಉತ್ತರ ಗೋಡೆಯಲ್ಲಿ ಇನ್ನೊಂದು ಶಿವನ ವಿಗ್ರಹವಿದೆ. **(ಚಿತ್ರ ೨೩)** ಇದನ್ನು ಪುಲ್ಲಪ್ಪನೆಂಬ ನಿರ್ಮ್ಮಾಣದೇವ (ಶಿಲ್ಪಿ)ನು ಮಾಡಿದನೆಂದು ಮೇಲಿರುವ ಶಾಸನವು ತಿಳಿಸುತ್ತದೆ. ಈ ಗುಡಿಯ ಪೂರ್ವಮಂಟಪದ ಕಂಬದ ಮೇಲೆ ದಾಮೋದರ ಎಂಬಾತನ ಹೆಸರಿದ್ದು ಪ್ರಾಯಶಃ ಇವನು ಆ ಕಂಬದ ನಿರ್ಮ್ಮಾಣಕಾರನಾಗಿರಬಹುದು. ಪಕ್ಕದ ಸಂಗಮೇಶ್ವರ (ವಿಜಯಾದಿತ್ಯ) ದೇವಾಲಯದ ಎರಡು ಕಂಬಗಳನ್ನು ಪಾಕ ಎಂಬ ರೂವಾರಿಯು ನಿರ್ಮ್ಮಿಸಿದುದು ಅಲ್ಲಿಯ ಶಾಸನದಿಂದ ವೇದ್ಯವಾಗುತ್ತದೆ. ಪಟ್ಟದಕಲ್ಲಿನಲ್ಲಿ



**ಚಿತ್ರ ೨೪. ಶುಭದೇವನ ಸ್ತಂಭ**

ಇಮ್ಮಡಿ ಕೀರ್ತಿವರ್ಮನ ಆಳ್ವಿಕೆಯಲ್ಲಿ ನಿಲ್ಲಿಸಲಾದ ಶಿಲಾಸ್ತಂಭವು ಹಲವು ದೃಷ್ಟಿಯಿಂದ ಮಹತ್ವದ್ದೆನಿಸಿದೆ. **(ಚಿತ್ರ ೨೪)** ಕ್ರಿ.ಶ. ೭೫೪ರಲ್ಲಿ 'ತ್ರಿಶೂಲ ಮುದ್ರಾಂಕಿತ ಈ ಶಿಲಾಸ್ತಂಭವನ್ನು ನಿಲ್ಲಿಸಿದವನು ಜ್ಞಾನ ಶಿವಾಚಾರ್ಯ. ಈತನ ಮೊದಲಿನ ಹೆಸರು ಶುಭದೇವ. ದೀಕ್ಷೆ ಪಡೆದ ನಂತರ ಜ್ಞಾನ ಶಿವಾಚಾರ್ಯನಾಗಿರುವಂತೆ ತೋರುತ್ತದೆ. ಶುಭದೇವನು ಶಾಂಡಿಲ್ಯ ಗೋತ್ರದ ಶಿಲ್ಪಿಯಾಗಿದ್ದು ಶಿಲ್ಪಿ ಶಿವವರ್ಧಮಾನನ ಮೊಮ್ಮಗನೂ, ಶಿಲ್ಪಿ ಶಿವನ ಮಗನೂ ಆಗಿದ್ದುದು ಈ ಶಿಲಾಸ್ತಂಭದ ಶಾಸನದಿಂದ ತಿಳಿದು ಬರುತ್ತದೆ. ಶಿಲ್ಪಿಯ ಗೋತ್ರ ಪರಂಪರೆಯನ್ನು ದಾಖಲಿಸಿರುವುದು ಗಮನಾರ್ಹವಾದುದು. ವಶಿಷ್ಠ ಪುರಾಣದ ಗೋತ್ರಾಧ್ಯಾಯದಲ್ಲಿ ವಿಶ್ವಕರ್ಮ ಕುಲೋದ್ಭವರ ಗೋತ್ರ ಪ್ರವರಗಳ ವಿವರಗಳಿವೆ.

ಐಹೊಳೆಯಲ್ಲಿ ದೇವಾಲಯಗಳು ಹೇರಳವಾಗಿ ಕಂಡು ಬಂದರೂ ಅವನ್ನು ನಿರ್ಮಿಸಿದ ಶಿಲ್ಪಿಗಳ ಹೆಸರುಗಳು ಕಾಣಿಸಿಕೊಂಡದ್ದು ವಿರಳ. ಬಿಜ್ಜಡಿ ಓವಜ್ಜ ಮತ್ತು ಆತನ ಶಿಷ್ಯನಾದ ನರಸೊಬ್ಬ ಪ್ರಮುಖರು. ನರಸೊಬ್ಬನೊಂದಿಗೆ ಕೆತ್ತನೆಯಲ್ಲಿ ತೊಡಗಿದ ಗನಸೊಬ್ಬನು ಹುಚ್ಚಪ್ಪಯ್ಯನ ಗುಡಿಯ ಶಿಲ್ಪಗಳನ್ನು ಕಟೆದಿರುವನು. ಕೃಚುಂಗ ಎಂಬಾತನು ಇನ್ನೊಬ್ಬ

ಪ್ರತಿಭಾನ್ವಿತ ಕಲಾಕಾರ. ಈತನು ಹುಚ್ಚಿಮಲ್ಲಿ ಗುಡಿಯ ಮುಖಮಂಟಪದ ಮೇಲ್ಗಂಡನ್ನು ಕಾರ್ತಿಕೇಯನ ಶಿಲ್ಪದಿಂದ ಅಂದಗೊಳಿಸಿದ್ದಾನೆ. ಮುದ್ದಸಿಲಿ, ಜಿನಾಲಯನ್, ಸುರೇಂದ್ರ ಪಾದ ಮೊದಲಾದವರು ದುರ್ಗಾದೇವಾಲಯವನ್ನು ಶಿಲ್ಪಗಳಿಂದ ಸಿಂಗರಿಸಿದ್ದಾರೆ. ಸುರೇಂದ್ರಪಾದನ ಹೆಸರು ಸಿದ್ಧಮಾತೃಕಾ ಲಿಪಿಯಲ್ಲಿರುವುದು ಕುತೂಹಲಕಾರಿಯಾಗಿದೆ. ಅದರಂತೆ ಜಿನಾಲಯನ್ ಎಂಬಾತನ ಹೆಸರು ಸಂಡೂರಿನ ಪಾರ್ವತಿ ದೇವಾಲಯದಲ್ಲಿ ಕಾಣಿಸಿಕೊಂಡಿರುವ ಸಂಗತಿ ವಿಚಾರಣೀಯವಾಗಿದೆ. ಕಲಾವಿದರು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸ್ಥಳಾಂತರವಾಗುತ್ತಿದ್ದರೆಂಬುದನ್ನು ಇದು ಸೂಚಿಸುತ್ತದೆ. ಇಮ್ಮಡಿ ಪೊಲೆಕೇಶಿಯ ಪೆದ್ದವಡಗೂರಿನ ಶಿಲಾಶಾಸನವನ್ನು ಬರೆದಾತ ಪಲ್ಲವಾಚಾರಿಯಾಗಿದ್ದನೆಂಬ ಸಂಗತಿ ಕೂಡ ಇಲ್ಲಿ ಸ್ಮರಣೀಯ. ಇಟಗಿಯ ತೋರಣವು ಸುಂದರ ಅಲಂಕಾರ ಶಿಲ್ಪ. ಇದನ್ನು ನಿರ್ಮಿಸಿದವರು ಶ್ರೀ ಗೋಣದೇವ, ಶ್ರೀ ಕಣ್ಣಪ್ಪ ಮತ್ತು ಅಣಗಂ ಎಂಬವರು. ಈ ಮೂವರ ಸಂಯುಕ್ತ ನಿರ್ಮಿತಿ ಅದು.

ಆಲಂಪುರದಲ್ಲಿನ ಕಲಾರಾಶಿ ದೊಡ್ಡದು. ಆದರೆ ಶಿಲ್ಪಿಗಳ ವಿವರಗಳು ಇಲ್ಲವೆಂದೇ ಹೇಳಬಹುದು. ಶ್ರೀಕಂಠಾಚಾರಿಯು ಅಲ್ಲಿನ ಮಹಾಶಿಲ್ಪಿಯಾಗಿದ್ದನು. ಶಾಸನದಲ್ಲಿ ಆತನನ್ನು ಮಹೇಶ್ವರ ಎಂದು ಪ್ರಶಂಸಿಸಲಾಗಿದೆ. ಆತನ ಹೆಸರು ಅನೇಕ ದೇವಾಲಯಗಳಲ್ಲಿ ಕಾಣಸಿಗುತ್ತದೆ. ಶ್ರೀಕಂಠಾರ್ಯನ್ ಮತ್ತು ಮರಡಿ ನಯನ ಪ್ರಿಯನ್ ಎಂಬ ಶಿಲ್ಪಿಗಳ ಹೆಸರು ಕನ್ನಡದಲ್ಲಿದ್ದರೆ ತ್ರೈಲೋಕ್ಯ ಹಂಸ ಎಂಬ ಕಲಾವಿದನ ಹೆಸರು ಸಿದ್ಧಮಾತೃಕಾ ಲಿಪಿಯಲ್ಲಿದೆ. ಅಲ್ಲಿಯ ತೆಲಗು ಲಿಪಿಯೊಂದು ಗುರುಶಿಷ್ಯರ ಪವಿತ್ರ ಬಾಂಧವ್ಯವನ್ನು ಪರಿಚಯಿಸುತ್ತದೆ.

**ಶ್ರೀ ದೇವರ ದೀಪ**
**ಸಂಸಾರ ಭೀತ ಶಿಶ್ಲು ಗುರು ಚರಣ ಪ್ರದಕ್ಷಿಣಂಬು ಪೋಯಿರಿ.**[20]

ಪ್ರಾಚೀನ ಕಾಲದಲ್ಲಿ ಶಿಷ್ಯನು ಗುರುವನ್ನು ಪೂಜ್ಯ ಭಾವನೆಯಿಂದ ನಮಿಸುತ್ತಿದ್ದನೆಂಬುದನ್ನು ಶಾಸನವು ಸೊಗಸಾಗಿ ಚಿತ್ರಿಸಿದೆ.

ಚಲುಕ್ಯ ಕಲಾ ನೆಲೆಗಳನ್ನು ಸಮೀಕ್ಷಿಸಿದಾಗ, ಇಲ್ಲಿಯ ರೂವಾರಿಗಳು ವಿವಿಧ ಬಗೆಯಾಗಿ ಶಿಲ್ಪಗಳನ್ನು ರೂಪಿಸಿರುವುದು ಕಂಡು ಬರುತ್ತದೆ. ಉತ್ತರ ಭಾಗದಿಂದ, ಅಮರಾವತಿ ಪರಿಸರದಿಂದ ಮತ್ತು ದಕ್ಷಿಣದಲ್ಲಿದ್ದ ಪಲ್ಲವರ ಕಲಾವಂತಿಕೆಯಿಂದ ಪ್ರೇರಣೆಗೊಂಡ ಪರಿಣಾಮವಾಗಿ ವೈವಿಧ್ಯಮಯವಾದ ಕಲಾಕೃತಿಗಳನ್ನು ಚಲುಕ್ಯ ರೂವಾರಿಗಳು ನಿರ್ಮಿಸಿದರೆಂದು ತಿಳಿಯಬಹುದು. ಇದರಿಂದ ಕನ್ನಡಿಗರು ಕಾವ್ಯಪ್ರಯೋಗ ಪರಿಣತರಾಗಿರುವಂತೆ ಶಿಲ್ಪಪ್ರಯೋಗ ಪರಿಣತರೂ ಆಗಿದ್ದರೆಂದು ಹೇಳಬಹುದು. ಇದೇ ಪ್ರಯೋಗಶೀಲತೆಯು ವಾಸ್ತು ನಿರ್ಮಾಣದಲ್ಲಿಯೂ ಪ್ರಕಟವಾಗಿರುವುದನ್ನು ಕಾಣುತ್ತೇವೆ.

## ಸೂತ್ರಧಾರಿಗಳು

ದೇವಾಲಯ ನಿರ್ಮಾಣ ಕಾರ್ಯದಲ್ಲಿ ಸ್ಥಪತಿ(ಸೂತ್ರಧಾರಿ)ಯೇ ಪ್ರಮುಖನು. ಈತನು ಸಕಲ ಶಾಸ್ತ್ರ ಪಂಡಿತನು. ಸ್ಥಪತಿಗೆ ಸಹಾಯಕರಾಗಿ ಕೆಲಸ ಮಾಡುವವರು ಕ್ರಮವಾಗಿ ಸೂತ್ರಗ್ರಾಹಿ, ವರ್ಧಕಿ, ಮತ್ತು ತಕ್ಷಕರು. ಸೂತ್ರಗ್ರಾಹಿಯು ದೇವಾಲಯದ ವಿನ್ಯಾಸ ರೂಪಿಸುವವನು. ವರ್ಧಕಿಯು ಚಿತ್ರ ಮತ್ತು ಶಿಲ್ಪಗಳನ್ನು ಚಿತ್ರಿಸುವವ. ಅಳತೆಯನ್ವಯ ಕತ್ತರಿಸುವುದು, ಜೋಡಿಸುವುದು ತಕ್ಷಕನ ಕೆಲಸ. ಇವರೆಲ್ಲರಿಗೂ ಮಾರ್ಗದರ್ಶಕ ಸ್ಥಪತಿ.

ಚಲುಕ್ಯರ ಶಾಸನಗಳಲ್ಲಿ ಸ್ಥಪತಿಯನ್ನು ಸೂತ್ರಧಾರಿ ಎಂದು ಕರೆಯಲಾಗಿದೆ. ಸೂತ್ರಧಾರಿ ಎಂದರೆ ಸ್ಥಪತಿಯೇ ಹೊರತು ಸೂತ್ರ ಗ್ರಾಹಿಯಲ್ಲ. ಚಲುಕ್ಯರ ಕಾಲದಲ್ಲಿ ಸೂತ್ರಧಾರಿಯಾಗಿ ಶ್ರಮಿಸಿದವರು ಹಲವರಿದ್ದಾರು. ಆದರೆ ಕೆಲವರ ಮಾಹಿತಿ ಶಾಸನಗಳಿಂದ ಲಭ್ಯವಾಗಿದೆ. ಈ ಸೂತ್ರಧಾರಿಗಳ ಬಗೆಗಿನ ವಿವರಗಳನ್ನು ಹೀಗೆ ಸಂಗ್ರಹಿಸಬಹುದು.

[20] Shrinivas V. Padigar, Inscriptions of the Calukyas of Badami, Bangalore, No. 428

## ಆರ್ಯಮಂಚಿ ಉಪಾಧ್ಯಾಯ

ಈತನು ಬಾದಾಮಿಯಲ್ಲಿರುವ ಮಾಲಗಿತ್ತಿ ಶಿವಾಲಯದ ಸೂತ್ರಧಾರಿ. ಈ ದೇವಾಲಯದ ಪೂರ್ವದ ಗೋಡೆಯ ಮೇಲಿರುವ ಶಾಸನವು ಈ ಸಂಗತಿಯನ್ನು ತಿಳಿಸುತ್ತದೆ. 'ಶ್ರೀ ಆರ್ಯಮಂಚಿ ಉಪಾಧ್ಯಾಯ ಪ್ರಾಸಾದ ನಿರ್ಮ್ಮಿತಂ' ಎಂಬುದು ಶಾಸನದ ಪಠ್ಯ. ಶಿಲ್ಪಿ ಬ್ರಾಹ್ಮಣ (ವಿಶ್ವಕರ್ಮ)ರಿಗೆ ಇರುವ ಎರಡು ಉಪನಾಮಗಳು ಈತನಿಗೆ ಇರುವುದು ಕುತೂಹಲಕಾರಿ ಅಂಶ. ಮಂಚಿ ಹಾಗೂ ಉಪಾಧ್ಯಾಯ (=ಓವಜ, ಓಜ) ಎಂಬವುಗಳು ಶಿಲ್ಪಿಗಳ ಉಪನಾಮಗಳೆಂಬುದನ್ನು ಈ ಹಿಂದೆ ಮನಗಂಡಿದ್ದೇವೆ.

ಮಾಲಗಿತ್ತಿ ಶಿವಾಲಯವು ಮೂಲತಃ ಆದಿತ್ಯ ದೇವಾಲಯ. ಬಾದಾಮಿಯ ಕಲ್ಬೆಟ್ಟದ ಪಕ್ಕದಲ್ಲಿ ಪ್ರತ್ಯೇಕವಾಗಿ ನಿಂತಿರುವ ಬೃಹತ್ ಬಂಡೆಯ ಮೇಲೆ ಇದನ್ನು ನಿರ್ಮಿಸಲಾಗಿದೆ. ಈ ಬಗೆಯ ಸ್ಥಳದ ಆಯ್ಕೆಯು ಆರ್ಯಮಂಚಿಯ ಕಲಾ ಪ್ರತಿಭೆಯನ್ನು ಪ್ರತಿಫಲಿಸುತ್ತದೆ. ದೇವಾಲಯವು ಬೆಟ್ಟದ ಭಾಗವಾಗಿರುವಂತೆ ಭಾಸವಾಗುತ್ತದೆ. ಇದು ನಿರಂಧಾರ ಮಾದರಿಯ ದೇವಾಲಯವಾಗಿದೆ. ಶುದ್ಧ ದ್ರಾವಿಡ ಶೈಲಿಯ ವಿಮಾನವನ್ನು ರಚಿಸಿದ ಖ್ಯಾತಿ ಆರ್ಯಮಂಚಿಯದು. ಗುಡಿಯ ಹೊರಗೋಡೆಗಳನ್ನು ದೇವಶಿಲ್ಪ, ದ್ವಾರಪಾಲರ ಪ್ರತಿಮೆ ಮತ್ತು ಹಿಂಬಣೆ ಮುಂಬಣೆಗಳ ಪಟ್ಟಿಕೆಗಳಿಂದ ಸಿಂಗರಿಸಲಾಗಿದೆ. ಏಳನೆಯ ಶತಮಾನದ ಮೊದಲ ದಶಕಗಳಲ್ಲಿ ನಿರ್ಮಾಣಗೊಂಡ ಮಂದಿರವಿದು.

## ನರಸೊಬ್ಬ

ಈತನು ಐಹೊಳೆಯ ಪ್ರಸಿದ್ಧ ವಾಸ್ತು ವಿಜ್ಞಾನಿ ಮತ್ತು ಶಿಲ್ಪಿ. ಹುಚ್ಚಪ್ಪಯ್ಯನ ಗುಡಿಯು ಈತನ ಸೃಷ್ಟಿ. ಈ ದೇಗುಲದ ಶಾಸನವು ಇವನನ್ನು ಮನಸಾರೆ ಹೊಗಳಿದೆ. ಮಂದಿರ ನಿರ್ಮಾಣ ವಿದ್ಯೆಯಲ್ಲಿ ಈತನಿಗೆ ಸಮನಾದ ವಿದ್ವಾಂಸನು ಹಿಂದೆ ಯಾರೂ ಇರಲಿಲ್ಲ. ಮುಂದೆಯೂ ಇರಲಾರರು ಎಂಬ ಗುಣಗಾನವು ಶಾಸನದ ವಸ್ತು ಆಗಿದೆ.

**ಸ್ವಸ್ತಿ ಜಮ್ಬು ದ್ವೀಪಾನ್ತರೇ ಕಶ್ಚಿ(ದ್)**
**ವಾಸ್ತು ಪ್ರಾಸಾದ ತದ್ಗತಃ**
**ನರಸೊಬ್ಬ ಸಮೋ ವಿದ್ವಾನ್**
**ನಭೂತೋ ನಭವಿಷ್ಯತಿ**[೨೧]

ನರಸೊಬ್ಬನು ಪ್ರತಿಭಾನ್ವಿತ ವಾಸ್ತು ತಜ್ಞನಾಗಿದ್ದನೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಐಹೊಳೆಯ ಮೀನ ಬಸದಿಯ ಬಳಿ ದೊರೆತ ಇನ್ನೊಂದು ಶಾಸನವು ಆತನು ಬಹುಮುಖ ವ್ಯಕ್ತಿತ್ವದ ಕಲಾವಿದನಾಗಿದ್ದನೆಂಬುದನ್ನು ಹೀಗೆ ಬಣ್ಣಿಸಿದೆ–

**ಶ್ರೀ ಬಿಙ್ಜಡಿ (ವಿದ)ರ್ದ್ಧರ ಚಟ್ಟನ್ ವಿಮಾನರಞ್ಜಿತನ್....**
**ಶಾಸ್ತ್ರ ಮಹೇಶ್ವರನ್ ಗುಣರವಿ ರೂಪ ಸಂಘಾತನ್**
**ಪ್ರಮಾಣಭರನ್ ನರಸೊಬ್ಬನ್**[೨೨]

ಬಿಙ್ಜಡಿ ಎಂಬ ಸೂತ್ರಧಾರಿಯ ಶಿಷ್ಯನಾದ ನರಸೊಬ್ಬನು ದೇವಾಲಯದ ವಿಮಾನವನ್ನು ನಿರ್ಮಿಸುವವನಾಗಿದ್ದನು. ಕಟ್ಟಡ ನಿರ್ಮಾಣ ಶಾಸ್ತ್ರದಲ್ಲಿ ಪಂಡಿತನಾಗಿದ್ದನು. ಗುಣದಲ್ಲಿ ರವಿಗೆ ಸಮಾನನಾಗಿದ್ದನು. ಪ್ರಮಾಣ ಬದ್ಧವಾಗಿ ಶಿಲ್ಪವನ್ನು ರೂಪಿಸುವ ಪರಿಣತ ಶಿಲ್ಪಿಯಾಗಿದ್ದನು. ಮಾಲಗಿತ್ತಿ ಶಿವಾಲಯವನ್ನು ಆರ್ಯಮಂಚಿ ಉಪಾಧ್ಯಾಯನು ದಾಕ್ಷಿಣಾತ್ಯ ಶೈಲಿಯಲ್ಲಿ ದೇವಾಲಯವನ್ನು ನಿರ್ಮಿಸಿದರೆ, ನರಸೊಬ್ಬನು ಹುಚ್ಚಪ್ಪಯ್ಯನ ಗುಡಿಯನ್ನು ರೇಖಾನಾಗರ ಶೈಲಿಯಲ್ಲಿ ರೂಪಿಸಿದ್ದಾನೆ. ಇವನು ಗುಹಾ ನಿರ್ಮಾಣದಲ್ಲಿಯೂ ಪರಿಣತನಾಗಿದ್ದನೆಂಬುದು ಸೂಚಿತವಾಗಿದೆ. ಈ ಶಾಸನದ ಹತ್ತಿರ ಗುಹೆ ನಿರ್ಮಿಸಲು ಬಾಹ್ಯ ರೇಖೆಗಳನ್ನು ಕೊರೆದಿರುವುದನ್ನು ಕಾಣಬಹುದು. ಒಟ್ಟಿನಲ್ಲಿ ನರಸೊಬ್ಬನು ದೈತ್ಯ ಪ್ರತಿಭೆಯ ಕಲಾವಿದನಾಗಿದ್ದನೆಂಬುದು ಸ್ಪಷ್ಟ.

[೨೧] ಅಣ್ಣೀಗೇರಿ, ಎಂ. ಎಂ. ಐಹೊಳೆ : ಸಂಸ್ಕೃತಿ ಮತ್ತು ಕಲೆ ಪು. ೧೭೨

[೨೨] ಅದೇ ಪು. ೧೭೭

## ಗುಂಡ ಅನಿವಾರಿತಾಚಾರಿ ಮತ್ತು ಸರ್ವಸಿದ್ಧಿ ಆಚಾರಿ

ಇಂದು ಪಟ್ಟದಕಲ್ಲು ವಿಶ್ವಪರಂಪರೆಯ ಸ್ಮಾರಕಗಳ ತಾಣವಾಗಿ ಪ್ರಸಿದ್ಧಿ ಪಡೆದಿದೆ. ಇಲ್ಲಿನ ಸರ್ವೋತ್ಕೃಷ್ಟ ವಾಸ್ತು ನಿರ್ಮಿತಿ ಎಂದರೆ ವಿರೂಪಾಕ್ಷ ದೇವಾಲಯ. ಇಮ್ಮಡಿ ವಿಕ್ರಮಾದಿತ್ಯನ ಅರಸಿ ಲೋಕ ಮಹಾದೇವಿ ಕಟ್ಟಿಸಿದ ಈ ಮಂದಿರವನ್ನು ನಿರ್ಮಿಸಿದವರು ಗುಂಡ ಅನಿವಾರಿತಾಚಾರಿ ಮತ್ತು ಸರ್ವಸಿದ್ಧಿ ಆಚಾರಿ ಎಂಬ ಸೂತ್ರಧಾರಿ (ಸ್ಥಪತಿ)ಗಳು. ಇಡಿ ದೇವಾಲಯ ನಿರ್ಮಾಣದ ಸ್ಥಾಪತ್ಯವನ್ನು ಗುಂಡನು ವಹಿಸಿಕೊಂಡಿದ್ದರೆ, ದಕ್ಷಿಣ ಭಾಗವನ್ನು ರೂಪಿಸುವ ಹೊಣೆ ಸರ್ವಸಿದ್ಧಿ ಆಚಾರಿಯದಾಗಿತ್ತು. ಸಮಾನ ಹೊಣೆಗಾರಿಕೆಯಿಂದ ಇವರು ಜೊತೆಗೂಡಿ ದೇವಾಲಯವನ್ನು ನಿರ್ಮಿಸಿದ್ದುದರಿಂದ ಇಮ್ಮಡಿ ವಿಕ್ರಮಾದಿತ್ಯ ಅರಸನು ಇವರಿಬ್ಬರಿಗೂ 'ಪೆರ್ಜ್ಜೆಜೆಪು' ಎಂಬ ಪಟ್ಟವನ್ನು ನೀಡಿ ಗೌರವಿಸಿದ್ದಾನೆ. ಗುಂಡ ಅನಿವಾರಿತಾಚಾರಿಗೆ 'ತ್ರಿಭುವನಾಚಾರಿ' ಎಂಬ ಹೊಸ ಅಭಿದಾನವನ್ನು ನೀಡಲಾಯಿತು. ಶಾಸನವೊಂದರಲ್ಲಿ ಈ ವಿಷಯ ಪ್ರಕಟವಾದದ್ದು ಹೀಗೆ–

**ಸ್ವಸ್ತಿ ಶ್ರೀ ವಿಕ್ರಮಾದಿತ್ಯ ಶ್ರೀ**
**ಪ್ರಿಥಿವೀ ವಲ್ಲಭ ಮಹಾದೇವಿಯರ**
**ದೇಗುಲಮಾನ ಮಾಡಿದ ಸೂತ್ರಧಾರಿ**
**ಶ್ರೀ ಗುಂಡನ್ ಅನಿವಾರಿತಾಚಾರಿಗೆ**
**ಮೂಮೆ ಪೆರ್ಜ್ಜೆಜೆಪು ಪಟ್ಟಮು**
**ತ್ರಿಭುವನಾಚಾರಿಯೆಂದು ಪೆಸರಿತ್ತು.....**[೨೩]

ರೂವಾರಿಗಳಿಗೆ ಕೆಲವು ತೆರಿಗೆಗಳನ್ನು ವಿನಾಯತಿ ಮಾಡಿದುದನ್ನು ಈ ಶಾಸನವು ದಾಖಲಿಸಿದೆ.

ವಿರೂಪಾಕ್ಷ ದೇವಾಲಯದ ದಕ್ಷಿಣ ಭಾಗವನ್ನು ನಿರ್ಮಿಸಿದ ಸೂತ್ರಧಾರಿಯಾದ ಸರ್ವಸಿದ್ಧಿ ಆಚಾರಿಯನ್ನು ಮನದುಂಬಿ ಹೊಗಳಲಾಗಿದೆ. ಈತನು ಆಚಾರಿಗಳಲ್ಲಿ ಸಿಂಹನೆನಿಸಿದ್ದಾನೆ. ಶಾಸನದ ಈ ಭಾಗವನ್ನು ಗಮನಿಸಬಹುದು–

**ಆಚಾರಿಯ (ಕೇ)ಸರಿ ವನರಿಷಿ**
**ಸ್ವಸ್ತಿ ಶ್ರೀ ಸರ್ವಸಿದ್ಧಿ ಆಚಾರಿ ಸಕಲ ಗುಣಾಶ್ರಯ**
**ಅನೇಕ ರೂಪು ವಾಸ್ತು ಪಿತಾಮಹನ್ ಸಕಲ ನಿಷ್ಕಲ ಸೂ–**
**ಕ್ಷ್ಮಾತಿ ಭಾಷಿತನ್ ವಸ್ತು ಪ್ರಾಸಾದ ಯೋಗಾಸನ ಸಯ–**
**ನ ಮಣಿ ಮಕುಟ ರತ್ನ ಚೂಡಾಮಣಿ ತೆಂಕಣ ದಿ–**
**ಶೆಯಾ ಸೂತ್ರಧಾರಿ**[೨೪]

ಸಕಲ ಸದ್ಗುಣಗಳ ಈ ಸೂತ್ರಧಾರಿಯು ಅನೇಕ ಶಿಲ್ಪಗಳ ನಿರ್ಮಾಪಕನೂ, ವಾಸ್ತು ಪಿತಾಮಹನೂ ಆಗಿದ್ದನು. ಸೂಕ್ಷ್ಮವಾಗಿ ಮಾತನಾಡುವ ಆತನು ಮಂದಿರ ನಿರ್ಮಾಣ, ಯೋಗಾಸನ, ಪೀಠೋಪಕರಣ, ಕಿರೀಟಾದಿ ಆಭರಣಗಳನ್ನು ರೂಪಿಸಬಲ್ಲವನಾಗಿದ್ದನು. ಹೀಗೆ ಅನೇಕ ಮಾಧ್ಯಮಗಳಲ್ಲಿ ಕಲಾ ಸೃಷ್ಟಿ ಮಾಡಬಲ್ಲ ಈತನಿಗೆ 'ಸರ್ವಸಿದ್ಧಿ' ಎಂಬುದು ಬಿರುದಾಗಿ ಲಭಿಸಿರಬಹುದು.

## ರೇವಡಿ ಓವಜ್ಜ

ರೇವಡಿ ಓವಜ್ಜನು ಪಟ್ಟದಕಲ್ಲಿನ ಇನ್ನೊಬ್ಬ ಮಹತ್ವದ ಸ್ಥಪತಿ. ಈತ ಶ್ರೀ ಶಿಲೆಮುದ್ದನ ಮೊಮ್ಮಗ ಮತ್ತು ಸರ್ವಸಿದ್ಧಿ ಆಚಾರಿಯ ಶಿಷ್ಯ. ಇವನು ಪಾಪನಾಥ ದೇವಾಲಯದ ದಕ್ಷಿಣ ಭಾಗವನ್ನು ನಿರ್ಮಿಸಿದ್ದಾನೆ. ಈ ವಿವರಗಳು ಶಾಸನದಲ್ಲಿ ಕಾಣಿಸಿಕೊಂಡದ್ದು ಹೀಗೆ–

[೨೩] ಅಣ್ಣೀಗೇರಿ, ಎ.ಎಂ., ಪಟ್ಟದಕಲ್ಲ ಗುಡಿಗಳು, ಪು. ೭೯

[೨೪] ಅದೇ ಪು. ೭೮

**ಸ್ವಸ್ತಿ ಶ್ರೀ ಶಿಲೆಮುದ್ಧರ**
**ಮರ್ಮನ್ ಸರ್ವಸಿದ್ಧಿ ಆ**
**ಚಾಜ್ಜ್ಯರ ಚಟ್ಟರ ರೇವ**
**ಡಿ ಓವಜ್ಜರ ತೆಂಕ**
**ಣ ದಿಶೆ ಮಾಡಿದೊರ್**[೨೫]

ರೇವಡಿ ಓವಜ್ಜನು ಪಾಪನಾಥ ದೇವಾಲಯವನ್ನು ರೇಖಾ ನಾಗರ ಶಿಖರದಿಂದ ಅಲಂಕೃತಗೊಳಿಸಿದ್ದಾನೆ. ಇವನು ಸರ್ವಸಿದ್ಧಿ ಆಚಾರಿಯ ಶಿಷ್ಯನು. ಅಂದರೆ ಸರ್ವಸಿದ್ಧಿಯು ಈತನಿಗೆ ರೇಖಾ ನಾಗರ ಶೈಲಿಯನ್ನು ಕಲಿಸಿದ್ದನೆಂಬುದು ಸ್ಪಷ್ಟ. ಇದರಿಂದ ಸರ್ವಸಿದ್ಧಿ ಆಚಾರಿಯು ದ್ರಾವಿಡ ವಿಮಾನ ಶೈಲಿಯ ಮಂದಿರ ಹಾಗೂ ಔತ್ತರೇಯ ಸಂಪ್ರದಾಯದ ರೇಖಾನಾಗರ ಶೈಲಿಯ ದೇವಾಲಯ ನಿರ್ಮಾಣಗಳಲ್ಲಿ ಸಿದ್ಧಿಯನ್ನು ಸಾಧಿಸಿದ್ದನೆಂಬುದು ತಿಳಿದು ಬರುತ್ತದೆ. ಸರ್ವಸಿದ್ಧಿ ಎಂಬ ಆತನ ಹೆಸರು ಹೆಚ್ಚು ಅರ್ಥಪೂರ್ಣವಾದುದು.

ಸರ್ವಸಿದ್ಧಿ ಆಚಾರಿಯು ಎರಡೂ ಬಗೆಯ ವಾಸ್ತುಶೈಲಿಗಳನ್ನು ಬಲ್ಲವನಾದ್ದರಿಂದ ಒಂದು ಶೈಲಿಯ ಕೆಲವೊಂದು ಗುಣ ವೈಶಿಷ್ಟ್ಯಗಳನ್ನು ಇನ್ನೊಂದು ಶೈಲಿಯ ದೇವಾಲಯದಲ್ಲಿ ಹಿತವಾಗಿ ಕಾಣುವಂತೆ ಬೆಸೆಯುವ ಪ್ರಯೋಗ ಮಾಡಿದುದನ್ನು ಕಾಣುತ್ತೇವೆ. ದ್ರಾವಿಡ ವಿಮಾನ ಶೈಲಿಯ ವಿರೂಪಾಕ್ಷ ದೇವಾಲಯದ ಶಿಖರಕ್ಕೆ ಔತ್ತರೇಯ ಶೈಲಿಯ ಗುಣ ವಿಶೇಷತೆಯಾಗಿರುವ ‘ಶುಕನಾಸಿ’ಯನ್ನು ಕಲಾತ್ಮಕವಾಗಿ ಜೋಡಿಸಲಾಗಿದೆ. ಅದರಂತೆ ಮುಖಮಂಟಪದಲ್ಲಿ ‘ಕಕ್ಷಾಸನ’ವನ್ನು ಸೇರಿಸಲಾಗಿದೆ. ಇದು ಕೂಡ ರೇಖಾ ನಾಗರ ಶೈಲಿಯ ವಾಸ್ತು ವಿಶೇಷತೆ.

ಇಲ್ಲಿ ಇನ್ನೊಂದು ವಿಚಾರವನ್ನು ಚರ್ಚಿಸಬಹುದು. ಶಾಸನದಲ್ಲಿ ಸರ್ವಸಿದ್ಧಿ ಆಚಾರಿಯನ್ನು ‘ತೆಂಕಣ ದಿಶೆಯಾ ಸೂತ್ರಧಾರಿ’ ಎಂದು ಹೇಳಿರುವುದನ್ನು ಆಧರಿಸಿ ಕಜಿನ್ಸರಂತಹ ವಿದ್ವಾಂಸರು ಆತನು ದಕ್ಷಿಣದಿಂದ (ಅಂದರೆ ತಮಿಳು ನಾಡಿನಿಂದ) ಬಂದವನೆಂದು ಅರ್ಥೈಸಿದ್ದಾರೆ. ಕಾಂಚಿಯನ್ನು ಗೆದ್ದುಕೊಂಡ ಇಮ್ಮಡಿ ವಿಕ್ರಮಾದಿತ್ಯ ಅರಸನು ಅಲ್ಲಿಯ ರಾಜಸಿಂಹೇಶ್ವರ ದೇವಾಲಯದಿಂದ ಪ್ರಭಾವಿತನಾಗಿ ಅಂಥದೇ ದೇವಾಲಯ ನಿರ್ಮಿಸಲೆಂದು ಅಲ್ಲಿನ ಕಲಾವಿದರನ್ನು ಕರೆತಂದಿರಬೇಕೆಂದು ತರ್ಕಿಸಲಾಗಿದೆ. ಮತ್ತು ಸರ್ವಸಿದ್ಧಿ ಆಚಾರಿಯು ತಮಿಳು ನಾಡಿನಿಂದ ಬಂದವನೆಂದು ಊಹಿಸಲಾಗಿದೆ. ತಮಿಳು ದೇಶದ ಈತನು ತನ್ನ ಶಿಷ್ಯ ರೇವಡಿ ಓವಜ್ಜನಿಗೆ ರೇಖಾನಾಗರ ವಾಸ್ತು ಶೈಲಿಯನ್ನು ಹೇಗೆ ಕಲಿಸಿರಲು ಸಾಧ್ಯ ? ಇಡಿ ತಮಿಳುನಾಡಿನಲ್ಲಿ ಒಂದೂ ರೇಖಾನಗರ ಶೈಲಿಯ ದೇವಾಲಯವಿಲ್ಲ ಎಂಬುದನ್ನು ಲಕ್ಷಿಸಬೇಕು. ಈ ಎಲ್ಲ ಕಾರಣಗಳಿಂದ ಸರ್ವಸಿದ್ಧಿ ಆಚಾರಿಯು ದಕ್ಷಿಣ ಭಾಗದಿಂದ ಬಂದ ಸ್ಥಪತಿಯಾಗಿರದೆ ಆ ದೇವಾಲಯದ ದಕ್ಷಿಣ ಭಾಗವನ್ನು ರೂಪಿಸಿದ ಸೂತ್ರಧಾರಿ ಎಂಬುದು ಸ್ಪಷ್ಟವಾಗುತ್ತದೆ.

[೨೫] ಅದೇ ಪು. ೯೯

ಅಲಂಕರಣ ಕಲೆಯು ಅರವತ್ತನಾಲ್ಕು ಕಲೆಗಳಲ್ಲಿ ಒಂದೆನಿಸಿದೆ. ಇದರ ಹಿಂದಿರುವ ಸೌಂದರ್ಯಾಭಿಲಾಷೆಯು ಆದಿ ಮಾನವನಲ್ಲಿಯೂ ಇದ್ದಿತೆಂಬುದನ್ನು ಶಿಲಾಯುಗದ ಗುಹಾಚಿತ್ರಗಳು ಸ್ಪಷ್ಟಪಡಿಸುತ್ತವೆ. ಸಂಸ್ಕೃತಿ, ನಾಗರಿಕತೆಗಳು ಬೆಳೆದಂತೆ ಅಲಂಕರಣ ಕಲೆಯೂ ಬೆಳೆಯಿತು. ಮನುಷ್ಯ ತನ್ನ ದೇಹವನ್ನೂ, ತಾನಿರುವ ಮನೆಯನ್ನೂ ಅಲಂಕರಿಸಿಕೊಂಡ. ಗೃಹಾಲಂಕರಣ ಜೀವನ ರೀತಿಯೇ ಆಯಿತು. ತಾನಿರುವ ಮನೆ ಗುಡಿಸಲೇ ಆಗಿದ್ದರೂ ಅದನ್ನು ಸಾರಿಸಿ, ಸ್ವಚ್ಛಗೊಳಿಸಿ ರಂಗೋಲಿ, ತೋರಣಗಳಿಂದ ಅಲಂಕರಿಸಿದ. ಮಾನವನ ಈ ಸೌಂದರ್ಯ ಪ್ರಜ್ಞೆಯು ಧಾರ್ಮಿಕ ಜೀವನವನ್ನೂ ಪ್ರವೇಶಿಸಿತು. ಹಾಗಾಗಿ ದೇವಸ್ಥಾನಗಳಲ್ಲಿಯೂ ಹಲವು ಬಗೆಯ ಅಲಂಕರಣಗಳನ್ನು ಕಾಣುತ್ತೇವೆ. ತೋರಣಾದಿ ಅಲಂಕರಣಗಳು ತಾತ್ಪೂರ್ತಿಕವಾದವುಗಳು. ಆದ್ದರಿಂದ ಇಡಿ ದೇಗುಲವನ್ನೇ ಸುಂದರ ಕಲಾಕೃತಿಯನ್ನಾಗಿ ಮಾಡಲು ಹವಣಿಸಿದ.

ಪ್ರಸ್ತುತ ಅಧ್ಯಾಯದಲ್ಲಿ ಚಲುಕ್ಯ ಸ್ಥಪತಿ ಮತ್ತು ರೂವಾರಿಗಳು ದೇವಾಲಯದ ವಾಸ್ತು ಅಂಗಗಳನ್ನು ಅಂದಗೊಳಿಸಿದ ಬಗೆಯನ್ನು ಪರಿಶೀಲಿಸೋಣ. ಈ ಕಲಾವಿದರು ದೇವಾಲಯದ ಒಳಗೂ ಹೊರಗೂ ಚೆಲುವನ್ನು ತುಂಬಿದರು. ಆ ಪ್ರಕ್ರಿಯೆಯಲ್ಲಿ ವಾಸ್ತುಅಂಗಗಳಿಗೆ ವಿವಿಧ ರೂಪು ನೀಡುವದರ ಮೂಲಕ ತಮ್ಮ ಸೌಂದರ್ಯಾಭಿಲಾಷೆಯನ್ನು ಪೂರೈಸಿಕೊಂಡರು. ಇಡಿಯಾಗಿ ವಾಸ್ತು-ಅಂಗವನ್ನೇ ಒಂದು ಕಲಾಕೃತಿಯನ್ನಾಗಿ ರೂಪಿಸಿದ್ದಾರೆ. ಕಲಾಕೃತಿಗಳಾಗಿ ಹೊರಹೊಮ್ಮಿದ ವಾಸ್ತುಅಂಗಗಳನ್ನು ಸ್ಥೂಲವಾಗಿ (ಅ) ದೇವಾಲಯದ ಒಳ ವಾಸ್ತುಅಂಗಗಳು ಮತ್ತು (ಆ) ದೇವಾಲಯದ ಹೊರ ವಾಸ್ತುಅಂಗಗಳು ಎಂದು ವಿಂಗಡಿಸಿ ಅಧ್ಯಯನಕ್ಕೆ ಒಳಪಡಿಸಬಹುದು.

## (ಅ) ದೇವಾಲಯದ ಒಳ ವಾಸ್ತುಅಂಗಗಳು

ಚಲುಕ್ಯ ಸೂತ್ರಧಾರಿಗಳು ಮತ್ತು ರೂವಾರಿಗಳು ಎರಡು ಬಗೆಯ ದೇಗುಲಗಳನ್ನು ನಿರ್ಮಿಸಿದರು. ಕೊರೆದು ಮಾಡಲಾದ ದೇವಾಲಯಗಳು ಒಂದು ರೀತಿಯದ್ದಾದರೆ, ಕಟ್ಟಿ ನಿರ್ಮಿಸಲಾದ ರಾಚನಿಕ ಮಂದಿರಗಳು ಇನ್ನೊಂದು ಪ್ರಕಾರದ್ದು. ಇವೆರಡೂ ಬಗೆಯ ವಾಸ್ತು ನಿರ್ಮಿತಿಗಳ ಪ್ರಧಾನ ಒಳಅಂಗಗಳಾದ ಕಂಬ, ಮೇಲ್ಚಾವಣಿ (ವಿತಾನ), ಬಾಗಿಲುವಾಡ ಮತ್ತು ಸೋಪಾನಗಳು ಅಲಂಕರಣಗೊಂಡು ಒಟ್ಟಾರೆ ದೇವಾಲಯದ ಒಳಭಾಗದ ಚೆಲುವನ್ನು ಹೆಚ್ಚಿಸಿವೆ.

### ಕಂಬ

'ಸ್ತಂಭ್' ಸಂಸ್ಕೃತ ಧಾತುವಿನಿಂದ ನಿಷ್ಪನ್ನಗೊಂಡ ಪದ 'ಸ್ತಂಭ'. ಆಧಾರ ನೀಡು ಎಂದು ಅದರರ್ಥ. 'ಸ್ತಂಭ'ದ ಕನ್ನಡ ರೂಪ ಕಂಬ. ಅದರ ಅರ್ಥವೇ ಸೂಚಿಸುವಂತೆ ಕಂಬದ ಪ್ರಧಾನ ಕಾರ್ಯ ಮೇಲ್ಚಾವಣಿ(ವಿತಾನ)ಯನ್ನು ಎತ್ತಿ ಹಿಡಿಯುವುದು ಅಥವಾ ಆಧಾರ ನೀಡುವುದು.

ರಾಚನಿಕ ಮಂದಿರಗಳಲ್ಲಿ ಕಂಬಗಳು ಅತ್ಯವಶ್ಯಕ. ಇವಿಲ್ಲದೆ ದೇವಾಲಯವಿಲ್ಲ. ಆದರೆ ಗುಹಾ ದೇವಾಲಯಗಳಲ್ಲಿ ಕಂಬಗಳ ಅವಶ್ಯಕತೆ ಅನಿವಾರ್ಯವಲ್ಲ. ಅವು ಏಕಶಿಲಾ ನಿರ್ಮಿತಿಗಳಾದ್ದರಿಂದ ಆ ಕಂಬಗಳ ಪ್ರಧಾನ ಉದ್ದೇಶವು ಆಧಾರ ನೀಡುವುದಾಗಿರದೇ ದೇವಾಲಯವನ್ನು ಹೆಚ್ಚು ಸುಂದರಗೊಳಿಸುವುದಾಗಿದೆ. ಇಲ್ಲಿ ಕಂಬಗಳೇ ಅಲಂಕಾರದ ವಸ್ತುಗಳಾಗಿವೆ. ಮಾನಸಾರ, ಕಶ್ಯಪ ವಾಸ್ತು ಗ್ರಂಥಗಳಲ್ಲಿ ಕಂಬಗಳ ವಿವಿಧ ಆಕೃತಿಗಳು ಮತ್ತು ಅವುಗಳ ಅಲಂಕರಣಗಳು ವರ್ಣಿತವಾಗಿವೆ.

ತಮ್ಮ ಬಗೆ ಬಗೆಯ ಆಕಾರಗಳಿಂದಾಗಿ ಕಂಬಗಳು ದೇವಾಲಯದ ಸೌಂದರ್ಯ ಹೆಚ್ಚಿಸುತ್ತವೆ. ಅವುಗಳ ಆಯಾಮಗಳನ್ನು ಆಧರಿಸಿ ವರ್ಗೀಕರಣ ಮಾಡಲಾಗಿದೆ. ನಾಲ್ಕು ಬದಿಗಳುಳ್ಳ ಕಂಬವನ್ನು ಬ್ರಹ್ಮಕಾಂತ ಎನ್ನುತ್ತಾರೆ.[೧] ಚಲುಕ್ಯರ ಗುಹಾಲಯ ಹಾಗೂ ಕಟ್ಟಡ ಶೈಲಿ ದೇವಾಲಯಗಳಲ್ಲಿ ಸಾಮಾನ್ಯವಾಗಿ ನಾವು ಕಾಣುವುದು ಈ ಬಗೆಯ ಕಂಬಗಳನ್ನೇ.



ಚಿತ್ರ ೨೫. ಹದಿನಾರು ಬದಿಯ ಕಂಭ

ಚಲುಕ್ಯ ರೂವಾರಿಗಳು ರೂಪಿಸಿದ ಕಂಬಗಳಲ್ಲಿ ಬ್ರಹ್ಮಕಾಂತಗಳದ್ದೇ ಸಿಂಹಪಾಲು. ಈ ಕಂಬಗಳ ಕೆಳ ಅರ್ಧದಲ್ಲಿ ಯಾವ ಅಂಕಣವೂ ಇಲ್ಲದೇ ಸಪಾಟಾದ ನಾಲ್ಕು ಬದಿಗಳಿವೆ. ಮೇಲರ್ಧದಲ್ಲಿ ಉಬ್ಬುಶಿಲ್ಪ ಹಾಗೂ ಅಲಂಕಾರ ಪಟ್ಟಿಕೆಗಳಿವೆ. ಈ ಅಲಂಕರಣದಲ್ಲಿ ಕೀರ್ತಿಮುಖಗಳು, ಮುತ್ತಿನಮಾಲೆಗಳು, ಪ್ರಾಣಿಗಳು, ಪುಷ್ಪ ನಕ್ಷೆಗಳು, ಜ್ಯಾಮಿತಿ ನಕ್ಷೆಗಳು ಕೆತ್ತನೆಗೊಂಡಿವೆ.

ಗುಹಾಲಯುಗಳ ಮೊಗಸಾಲೆ ಹಾಗೂ ಮಂಟಪಗಳನ್ನು ಬೇರ್ಪಡಿಸುವ ಕಲಾತ್ಮಕ ಕಂಬಗಳು ವಿಭಿನ್ನ ಬಗೆಯದ್ದಾಗಿವೆ. ಒಂದನೆಯ ಗುಹಾಲಯ ದಲ್ಲಿಯ ಕಂಬಗಳು ಕೆಳಗಿನ ಅರ್ಧಭಾಗದಲ್ಲಿ ಚೌಕಾಕಾರವಾಗಿವೆ. ಮೇಲಿನ ಅರ್ಧ ಭಾಗದಲ್ಲಿ ವೃತ್ತಾಕಾರದ ಬೃಹತ್ ಗಾತ್ರದ ಮುಚ್ಚಳಗಳಿವೆ. ಆದರೆ ಎರಡನೆಯ ಗುಹಾಲಯದ ಕಂಬಗಳಲ್ಲಿ ಚೌಕಾಕಾರದ ಸುಂದರ ಕೆತ್ತನೆಯ ಮುಚ್ಚಳಗಳಿವೆ. ಮೂರನೆಯ ಗುಹಾಲಯದ ಎರಡು ಕಂಬಗಳು ಹದಿನಾರು ಬದಿಗಳನ್ನು ಹೊಂದಿವೆ. ಇವನ್ನು ದ್ವಿವಜ್ರ ಕಂಬಗಳೆನ್ನಬಹುದು. **(ಚಿತ್ರ ೨೫)** ಐಹೊಳೆಯ ರಾವಲಫಡಿಯಲ್ಲಿ ನಟರಾಜನ ಕೋಣೆಯ ಎರಡು ಕಂಬಗಳು ತಗ್ಗು ತಗ್ಗಾಗಿರುವ ಬಹುಪಟ್ಟಿಗಳಿಂದಾಗಿವೆ. ಮೇಲ್ಭಾಗದಲ್ಲಿ ಅಮೃತ ಕಲಶದ ಕೆತ್ತನೆಯಿದೆ. ಹೀಗೆ ತಗ್ಗು ಮೈಯುಳ್ಳ ಪಟ್ಟಿಕೆಗಳಿಂದ (fluted) ಅಲಂಕರಣಗೊಂಡ ಬೃಹದಾಕಾರದ ಕಂಬವೊಂದು ರಾವಲಫಡಿಯ ಮುಂದಿನ ಅಂಗಳದಲ್ಲಿದೆ. ಅದರ ಮೇಲೆ ಕಿರೀಟೋಪಾದಿಯಲ್ಲಿ ಇರಿಸಲಾದ ಆಮಲಕವೂ ಈಗ ಪಕ್ಕದಲ್ಲಿ ಬಿದ್ದುಕೊಂಡಿದೆ. ಇಂಥದೇ ಕಂಬವನ್ನು ಮಹಾಕೂಟದಲ್ಲಿ ನಿಲ್ಲಿಸಲಾಗಿತ್ತು. ಮಂಗಲೇಶನ ಪ್ರಸಿದ್ಧ ಶಾಸನ ಹೊತ್ತ ಈ ಕಂಬವೀಗ ಬಿಜಾಪೂರದಲ್ಲಿ ಪುರಾತತ್ವ ಇಲಾಖೆಯ ವಸ್ತು ಸಂಗ್ರಹಾಲಯದಲ್ಲಿ ಪ್ರದರ್ಶಿತವಾಗಿದೆ. ಅದನ್ನು ಶಾಸನದಲ್ಲಿ 'ಹೂಕಂಬ' ಎಂದು ಕರೆದಿರುವುದು ಸ್ವಾರಸ್ಯಕರ.[೨]

[೧] ಕಂಬವು ಐದು ಮುಖಗಳಿಂದಾಗಿದ್ದರೆ 'ಶಿವಸ್ಕಾಂತ'ವೆಂದೂ, ಆರೂ ಮುಖಗಳಿಂದಾಗಿದ್ದರೆ 'ಸ್ಕಂದಕಾಂತ'ವೆಂದೂ, ವೃತ್ತಾಕಾರವಾಗಿದ್ದರೆ 'ರುದ್ರಕಾಂತ'ವೆಂದೂ ಹೇಳಲಾಗುತ್ತದೆ.

[೨] Shrinivas V. Padigar, op.cit P. 14



ಚಿತ್ರ ೨೬. ರಾಜನಿಕ ಗುಡಿ ಕಂಬದ ಅಲಂಕರಣ



ಚಿತ್ರ ೨೭. ಕಂಬದ ಅಲಂಕರಣ, ರಾಮಾಯಣ ದೃಶ್ಯಗಳು

ಚಲುಕ್ಯರ ರಾಜನಿಕ ದೇವಾಲಯಗಳಲ್ಲಿನ ಕಂಬಗಳನ್ನು ಈಗ ಗಮನಿಸೋಣ. ಈ ಹಿಂದೆಯೇ ಪ್ರಸ್ತಾಪಿಸಿದಂತೆ ಇಲ್ಲಿನ ಕಂಬಗಳು ಪ್ರಧಾನವಾಗಿ ಆಧಾರ ನೀಡಲೆಂದೇ ರಚಿತವಾದವುಗಳು. ಉಪಯುಕ್ತತೆ ಇವುಗಳ ಮುಖ್ಯ ಉದ್ದೇಶ. ಅವುಗಳಲ್ಲಿ ಅಲಂಕರಣ ಆನುಷಂಗಿಕ. ಆದಾಗ್ಯೂ ಶ್ರೇಷ್ಠತಮ ಕೆತ್ತನೆಗಳನ್ನು ರಾಜನಿಕ ದೇಗುಲಗಳಲ್ಲಿನ ಕಂಬಗಳು ಪ್ರದರ್ಶಿಸುತ್ತವೆ. ಅವನ್ನು ಸ್ಥೂಲವಾಗಿ ಹೀಗೆ ಪರಿಶೀಲಿಸಬಹುದು.

ಇಲ್ಲಿನ ಕಂಬಗಳೂ ಕೂಡ ಗುಹಾಲಯದ ಕಂಬಗಳಂತೆ ಮೂಲತಃ ಚೌಕಾಕಾರವಾಗಿವೆ. ದಂಡವು ಸಮಾಂತರ ಪಟ್ಟಿಕೆಗಳಿಂದ ಅಲಂಕೃತವಾಗಿರುವುದು ಸಾಮಾನ್ಯ. ಕೆಲವೆಡೆಗಳಲ್ಲಿ ಈ ಪಟ್ಟಿಕೆಗಳ ಮೇಲೆ ವೃತ್ತಾಕಾರದ ಇಲ್ಲವೆ ಅರ್ಧವೃತ್ತಾಕಾರದ ಪದಕಗಳು ಹೊಂದಿಕೊಂಡಂತೆ ಸಪಾಟಾದ ಉಬ್ಬು ಮೈಯನ್ನು ರಚಿಸಲಾಗಿರುತ್ತದೆ. ಕೆಲವು ಸಲ ಇವುಗಳ ಮೇಲೆ ನಕ್ಷೆ ಇಲ್ಲವೆ ಚಿತ್ರಗಳನ್ನು ಬಿಡಿಸಿರುವುದೂ ಉಂಟು. ಈ ಅಲಂಕರಣಕ್ಕಾಗಿ ಬಳಸಿದ ವಿನ್ಯಾಸಗಳಲ್ಲಿ ಮುತ್ತಿನ ಸರಗಳು, ಸಿಂಹಮುಖ, ಸಂಗೀತಕಾರರು, ನರ್ತಕರು ಇಲ್ಲವೆ ಮಿಥುನ ದಂಪತಿಗಳನ್ನು ಕಂಡರಿಸಲಾಗಿದೆ. **(ಚಿತ್ರ ೨೬)**

ಚಲುಕ್ಯರ ಶಿಲ್ಪಕಲಾ ಗಿರಿಯ ಉತ್ತುಂಗ ಶಿಖರವೆಂದರೆ ಪಟ್ಟದಕಲ್ಲು. ಅಲ್ಲಿ ಶಿಲ್ಪಕಲೆ ಲಾಸ್ಯವಾಡಿದೆ. ಅಲ್ಲಿನ ವಿರೂಪಾಕ್ಷ ಹಾಗೂ ಮಲ್ಲಿಕಾರ್ಜುನ ಮಂದಿರಗಳಲ್ಲಿ ಈ ಕಲೆಯ ದರ್ಶನವಾಗುತ್ತದೆ. ಇಲ್ಲಿನ ಕಂಬಗಳಲ್ಲಿ ಎರಡು ಪ್ರತ್ಯೇಕ ಪದಕಗಳು ಸಮಾಂತರವಾಗಿರುವ ಎರಡು ಪಟ್ಟಿಕೆಗಳೊಂದಿಗೆ ಕೆತ್ತನೆಗೊಳ್ಳುವದರ ಜೊತೆಗೆ ಅವನ್ನು ಜೋಡಿಸುವ ಇನ್ನೊಂದು ಪಟ್ಟಿಕೆಯು ಲಂಬವಾಗಿ ಜೋಡಿಸಲ್ಪಟ್ಟಿರುತ್ತದೆ. ಇವೆಲ್ಲವೂ ವಿವಿಧ ಬಗೆಯ ಉಬ್ಬುಶಿಲ್ಪಗಳಿಂದ ಅಲಂಕೃತವಾಗಿದೆ. ಅಡ್ಡಪಟ್ಟಿಕೆಗಳಲ್ಲಿ ರಾಮಾಯಣ ಮಹಾಭಾರತದ ಕಥಾ ನಿರೂಪಣೆಗಳನ್ನು ಪಂಚತಂತ್ರ ಕಥಾ ಪ್ರಸಂಗಗಳನ್ನು ಶಿಲ್ಪಿಸಲಾಗಿದೆ. **(ಚಿತ್ರ ೨೭)**

ಇವುಗಳಿಗಿಂತ ಭಿನ್ನಬಗೆಯ ವಿನ್ಯಾಸವಿರುವ ಕಂಬಗಳನ್ನು ಆಲಂಪುರ ಗುಡಿಗಳಲ್ಲಿ ಕಾಣಬಹುದಾಗಿದೆ.ಕಂಬದ ತಳಭಾಗ ಹಾಗೂ ಮೇಲ್ಭಾಗದಲ್ಲಿ ಕುಂಭಗಳಿದ್ದು ಮಧ್ಯದಲ್ಲಿ ತಗ್ಗಾದ ಮೇಲ್ಮೈಯಿರುವ ಲಂಬಪಟ್ಟಿಕೆಗಳು, ಹಾಗೂ ಪುಷ್ಪನಕ್ಷೆಗಳಿರುವ ಅಡ್ಡಪಟ್ಟಿಕೆಗಳು ಕಂಬದ ಚೆಲುವನ್ನು ಹೆಚ್ಚಿಸಿವೆ.

ಇನ್ನೊಂದು ಬಗೆಯ ಕಂಬಗಳನ್ನು ನಾಗರಾಳದ ನಾಗನಾಥ ದೇವಾಲಯ, ಐಹೊಳೆಯ ಲಾಡಖಾನ, ದುರ್ಗಾಗುಡಿ, ಹುಚ್ಚಪ್ಪಯ್ಯನ ಗುಡಿ ಮತ್ತು ಪಟ್ಟದಕಲ್ಲಿನ ವಿರೂಪಾಕ್ಷ, ಮಲ್ಲಿಕಾರ್ಜುನ ಹಾಗೂ ಪಾಪನಾಥ ದೇವಾಲಯಗಳಲ್ಲಿ ಕಾಣುತ್ತೇವೆ. ಈ ಕಂಬಗಳ ಮೇಲೆ ಮಧ್ಯಮ ಗಾತ್ರದ ಮಿಥುನ ಇಲ್ಲವೇ ನದೀ ದೇವತೆ ಮೊದಲಾದ ಅರೆ ದೈವ ಶಿಲ್ಪಗಳನ್ನು ಕಂಡರಿಸಲಾಗಿದೆ. **(ಚಿತ್ರ ೨೮)**

ಬೋದಿಗೆಗಳು ವಿಶೇಷ ಆಕರ್ಷಣೆಗಳು. ಚಲುಕ್ಯ ಗುಹಾಲಯಗಳ ಕಂಬಗಳಿಗೆ ಬೋದಿಗೆಗಳ ಅಲಂಕಾರವಿದ್ದು ಅವು ತರಂಗಾಕೃತಿಯಲ್ಲಿವೆ. ಈ ತೆರನಾದ ವಾಸ್ತು ಅಲಂಕರಣವನ್ನು ರಾಚನಿಕ ಮಂದಿರಗಳಲ್ಲಿ ಮುಂದುವರೆಸಿ ಕೊಂಡು ಹೋಗಲಾಗಿದೆ. ಇಲ್ಲಿ ರೂವಾರಿಗಳು ಮುಖ್ಯವಾಗಿ ಎರಡು ಬಗೆಯ ಬೋದಿಗೆಗಳನ್ನು ರಚಿಸಿರುವುದು ಕಂಡು ಬರುತ್ತದೆ. ಅರ್ಧವೃತ್ತಾಕಾರದ ಬೋದಿಗೆಗಳು ಒಂದು ಬಗೆಯವಾಗಿದ್ದರೆ ಇನ್ನೊಂದು ನೀರಿನ ತೆರೆಯಂತೆ ಕಾಣುವ ಇಲ್ಲವೆ ಕಾಗದದ ಸುರುಳಿಗಳಂತೆ ಗೋಚರಿಸುವ ಬೋದಿಗೆಗಳಾಗಿವೆ. ಇವನ್ನು ಕ್ರಮವಾಗಿ ವೃತ್ತ ಬೋದಿಗೆ ಮತ್ತು ತರಂಗ ಬೋದಿಗೆ ಎಂದು ಹೇಳುವುದು ವಾಡಿಕೆ.

ಮೇಲಿನ ಶಿವಾಲಯ ಮತ್ತು ಮಾಲಗಿತ್ತಿ ಶಿವಾಲಯಗಳಲ್ಲಿ ವೃತ್ತದಂಚಿನ ಬೋದಿಗೆಗಳಿವೆ. **(ಚಿತ್ರ ೨೯)** ಗುಹಾಲಯಗಳಲ್ಲಿ ಮತ್ತು ಬಾದಾಮಿಯ ಜಂಬುಲಿಂಗ ದೇವಾಲಯ, ಭೂತನಾಥ ದೇವಾಲಯ, ಮಹಾಕೂಟದ ಮಲ್ಲಿಕಾರ್ಜುನ ದೇವಾಲಯ, ಐಹೊಳೆಯ ಲಾಡಖಾನಗುಡಿ,



**ಚಿತ್ರ ೨೮. ಕಂಬದ ಅಲಂಕರಣ, ಮಿಥುನ ಶಿಲ್ಪ**



**ಚಿತ್ರ ೨೯. ವೃತ್ತ ಬೋದಿಗೆಗಳು**



ಚಿತ್ರ ೩೦. ತರಂಗ ಬೋದಿಗೆ

ದುರ್ಗಾಗುಡಿ, ಮತ್ತು ಪಟ್ಟದಕಲ್ಲಿನ ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ದೇವಾಲಯಗಳಲ್ಲಿ ತರಂಗ ಬೋದಿಗೆಗಳ ಅಲಂಕಾರವಿದೆ. (**ಚಿತ್ರ ೩೦**) ಪಟ್ಟದಕಲ್ಲಿನ ಈ ವಿಕಸಿತ ಮಂದಿರಗಳ ಬೋದಿಗೆಗಳು ಇನ್ನೂ ಸಂಕೀರ್ಣಗೊಂಡು ಲತಾ ನಕ್ಷೆ, ಕೀರ್ತಿಮುಖಗಳಿಂದ ಕೂಡಿ ಹೆಚ್ಚು ಕಲಾತ್ಮಕವಾಗಿವೆ. ಕ್ರಿ.ಶ. ೬೪೨ರಲ್ಲಿ ಬಾದಾಮಿಯನ್ನು ವಶಪಡಿಸಿಕೊಂಡ ಪಲ್ಲವರು ಗುಹಾಲಯಗಳ ಬೋದಿಗೆಗಳಿಂದ ಪ್ರಭಾವಿತರಾಗಿ ತಮ್ಮ ವಾಸ್ತು ರಚನೆಗಳಲ್ಲಿ ಅವನ್ನು ಅಳವಡಿಸಿದುದು ಕಂಡು ಬರುತ್ತದೆ.

### ಮೇಲ್ಭಾವಣಿ (ವಿತಾನ)

ಚಲುಕ್ಯರ ಶಾಸನಗಳಲ್ಲಿ ಇದನ್ನು 'ಮೇಲ್ಗಂಡು' ಎಂದು ಕರೆಯಲಾಗಿದೆ. ಇದನ್ನು 'ವಿತಾನ' ಎಂದೂ ಕರೆಯುವುದುಂಟು. ಜನಪದರ ಮಾತಿನಲ್ಲಿ ಇದು ಛತ್ತು ಅಥವಾ ಚತ್ತು . ಗುಹಾಲಯಗಳಲ್ಲಿ ಮೇಲ್ಭಾವಣಿಗಳು ಬಗೆಬಗೆಯ ಶಿಲ್ಪಗಳಿಂದ ಅಲಂಕರಣಗೊಂಡಿವೆ. ಐಹೊಳೆಯ ರಾವಲಫಡಿಯ ಮೇಲ್ಗಂಡು ಒಂದು ಉತ್ಕೃಷ್ಟ ಕಲಾಕೃತಿ. (**ಚಿತ್ರ ೩೧**) ಮಂಟಪದ ಚತ್ತನ್ನು ಇಡಿಯಾಗಿ ಚಾಚಿಕೊಂಡಿರುವ ಇದು ಸೂಕ್ಷ್ಮ ಕೆತ್ತನೆಗಳ ರಾಶಿ. ಇದು ಅಜಂತಾದ ಚತ್ತಿನ ವರ್ಣಕಲೆಯನ್ನು ನೆನಪಿಸುವಂತಹದು. ಮೀನಬಸದಿಯ ಮಂಟಪದ ಮೇಲ್ಭಾವಣಿಯು ಸ್ವಸ್ತಿಕ, ಪತ್ರವಿನ್ಯಾಸ ಹಾಗೂ ಪದ್ಮಾಲಂಕರಣಗಳಿಂದಾಗಿದೆ. ಮಕರ ಮುಖಗಳಿಂದ ಮಾನವರು ಹೊರಬರುತ್ತಿರುವಂತೆ ಉಬ್ಬು ಶಿಲ್ಪವನ್ನು ಬಿಡಿಸಲಾಗಿದೆ. ಇಂಥ ನಕ್ಷೆಗಳ ಔಚಿತ್ಯ ಹಾಗೂ ತಾತ್ವಿಕತೆಯನ್ನು ಪ್ರತ್ಯೇಕವಾಗಿ ಚರ್ಚಿಸಲಾಗುವುದು. ಬಾದಾಮಿಯ ಮೇಣಬಸದಿಗಳ ಮೇಲ್ಗಂಡಿನಲ್ಲಿ ನಾಗರಾಜ, ದಿಕ್ಪಾಲರು, ವಿದ್ಯಾಧರರು ಮೊದಲಾದ

ಚಿತ್ರ ೩೧. ರಾವಲ ಫಡಿ ಚತ್ತು

ಅರೆದೈವಿಕ ಶಿಲ್ಪಗಳು ಪ್ರಾಧಾನ್ಯ ಪಡೆದಿವೆ. ಅವು ಪುಷ್ಪ, ಲತಾಬಳ್ಳಿ ಹಾಗೂ ಸುರುಳಿಯಾಕಾರಾದ ವಿನ್ಯಾಸಗಳಿಂದ ಕೂಡಿಕೊಂಡು ಅಂಕಣಗಳ ಸೌಂದರ್ಯವನ್ನು ಇಮ್ಮಡಿಗೊಳಿಸಿವೆ.**(ಚಿತ್ರ ೩.೨)**

ಈ ಗುಹಾಲಯಗಳ ಮೇಲ್ಛಾವಣಿಯ ಅಲಂಕರಣದಲ್ಲಿ ರೂವಾರಿಗಳ ಶಿಲ್ಪ ನೈಪುಣ್ಯದ ಪರಮ ಸಾಧನೆಯನ್ನು ಗುರುತಿಸಬಹುದು. ೧೬ನೆಯ ಶತಮಾನದ ಶ್ರೇಷ್ಠ ಕಲಾವಿದನಾದ ಮೈಕಲ್ ಎಂಜೆಲೋ ರೋಮ್ ನಗರದ ಸಿಸ್ಟೈನ್ ಚರ್ಚದ ಛಾವಣಿಯಲ್ಲಿ ಚಿತ್ರಿಸಿದ ವರ್ಣಚಿತ್ರಗಳು ಕಲಾವಿಮರ್ಶಕರನ್ನು ಬೆರಗುಗೊಳಿಸಿವೆ. ಇದಕ್ಕೆ ಮುಖ್ಯ ಕಾರಣವೆಂದರೆ ಆತನು ಗುರುತ್ವಾಕರ್ಷಣೆಗೆ ವಿರುದ್ಧವಾದ ದಿಕ್ಕಿನಲ್ಲಿ ಕುಂಚದಿಂದ ಬಣ್ಣವನ್ನು ಲೇಪಿಸಿದ್ದು. ಆದರೆ ಚಲುಕ್ಯ ಶಿಲ್ಪಿಗಳ ಕೈಚಳಕದೊಂದಿಗೆ ಹೋಲಿಸಿದಾಗ ಅದೇನೂ ಅಷ್ಟು ಕಷ್ಟದಾಯಕವಾದದ್ದಲ್ಲ. ಮೇಲ್ಛಾವಣಿಯಲ್ಲಿ ಕೆತ್ತನೆ ಮಾಡುವ ಕಲಾವಿದ ತನ್ನ ಕಣ್ಣುಗಳ ಮೇಲೆಯೇ ಬೀಳುವ ಕಲ್ಲಿನ ಚಕ್ಕೆ ಹಾಗೂ ಕಣಗಳಿಂದ ರಕ್ಷಿಸಿಕೊಂಡಿದ್ದು ಹೇಗೆಂಬುದು ಇಂದಿಗೂ ನಮ್ಮನ್ನು ಕಾಡುವ ಪ್ರಶ್ನೆಯಾಗಿದೆ. ಪಾರದರ್ಶಕವಾದ(ರೇಶ್ಮೆ ?) ಬಟ್ಟೆಯನ್ನು ಮುಖದ ಮೇಲೆ ಹಾಕಿಕೊಂಡು, ಕಣಗಳು ಬೀಳದಂತೆ ಆದರೆ ಶಿಲ್ಪವು ಕಾಣುವಂತೆ ಮಾಡಿರಬಹುದೇ? ಮೈಕಲ್ ಎಂಜೆಲೋನಿಗಿಂತ ಸುಮಾರು ಸಾವಿರ ವರ್ಷಗಳ ಹಿಂದೆ ಮಹಾವಿಷ್ಣು ಗೃಹದ ಚತ್ತನ್ನು ವರ್ಣಗಳಿಂದ ಅಲಂಕರಿಸಿದ್ದರೆಂಬುದು ಇಲ್ಲಿ ಸ್ಮರಣೀಯ.

ಚಲುಕ್ಯ ರಾಚನಿಕ ಮಂದಿರಗಳಲ್ಲಿಯ ಮೇಲ್ಛಾವಣಿಯು ವಿಶಿಷ್ಟ ಬಗೆಯದು. ಮುಖಮಂಟಪದ ಮೇಲ್ಛಾವಣಿಯಂತೆ ಸಭಾಮಂಟಪದ ಮಧ್ಯಭಾಗದ ಚತ್ತು ಭೂಮಿಗೆ ಸಮಾಂತರವಾಗಿರುತ್ತದೆ. ಆದರೆ ಎಡಬಲದ ಚತ್ತುಗಳು ಇಳಿಜಾರಾಗಿರುತ್ತವೆ. ಸಾಮಾನ್ಯವಾಗಿ ಇಳಿಜಾರಾಗಿರುವ ಮೇಲ್ಮೈನಲ್ಲಿ ಅಲಂಕರಣವಿರುವದಿಲ್ಲ. ಸಭಾಮಂಟಪದ ಮಧ್ಯದ ವಿತಾನದ ಅಂಕಣಗಳು ಶಿಲ್ಪಗಳಿಂದ ಅಲಂಕೃತವಾಗಿರುತ್ತದೆ. ಇವುಗಳಲ್ಲಿ ದೈವಶಿಲ್ಪಗಳಿಗೆ ಪ್ರಾಧಾನ್ಯವಿದ್ದರೂ ಅಲಂಕರಣ ಶಿಲ್ಪಗಳಿಗೆ ಕೊರತೆಯಿಲ್ಲ. ಹುಚ್ಚಪ್ಪಯ್ಯಮಠದ ವಿತಾನದಲ್ಲಿ ವಿಷ್ಣು, ಶಿವ, ಬ್ರಹ್ಮರ ಅಪರೂಪದ ಕಂಡರಣೆಯಿದ್ದು ಈ ಶಿಲ್ಪಗಳನ್ನು ಬೇರ್ಪಡಿಸುವ ಪಟ್ಟಿಕೆಗಳ ಮೇಲೆ ಕಮಲಗಳು ಒಂದರಿಂದ ಒಂದು ಹೊರಬಿದ್ದಂತೆ ತೋರುತ್ತವೆ. ಶಿವನ ವಾಹನವಾದ ನಂದಿ ಅತ್ಯಂತ ಶಕ್ತಿಯುತವಾಗಿ ಶಿಲ್ಪಿತವಾಗಿದೆ. ಆಲಂಪುರದ ದೇವಾಲಯಗಳ ವಿತಾನಗಳಲ್ಲಿ ಪದ್ಮ ಹಾಗೂ ನಾಗರಾಜನ ಕೆತ್ತನೆಗಳಿವೆ. ವಿಶೇಷತ: ಬಾಲಬ್ರಹ್ಮ ದೇವಾಲಯದ ಮೇಲ್ಗಂಡು ಪುಷ್ಪನಕ್ಷೆ, ಲತಾಬಳ್ಳಿಗಳ ಸೂಕ್ಷ್ಮ ಚಿತ್ರಣಗಳಿಂದ ಸಾಂದ್ರಗೊಂಡಿದೆ. ನಾಗರಾಳದ ನಾಗನಾಥ ದೇವಾಲಯದ ಚತ್ತಿನಲ್ಲಿನ ಅಷ್ಟದಿಕ್ಪಾಲರ ಶಿಲ್ಪವು ವಿಶಿಷ್ಟ ಬಗೆಯದು.


ಚಿತ್ರ ೩.೨. ಲತಾ ನಕ್ಷೆ

## ಬಾಗಿಲುವಾಡ

ಇದು ಪ್ರವೇಶದ್ವಾರ. ಬಾಗಿಲಿನ ಚೌಕಟ್ಟು. ಈ ದ್ವಾರಬಂಧವನ್ನು ಸಿಂಗರಿಸುವಲ್ಲಿ ಶಿಲ್ಪಿಗಳು ಹೆಚ್ಚಿನ ಆಸಕ್ತಿ ವಹಿಸಿದ್ದಾರೆ. ಈ ದ್ವಾರಬಂಧಕ್ಕೆ ಎಡಬಲಗಳಲ್ಲಿ ಲಂಬ ಪಟ್ಟಿಕೆಗಳಿವೆ. ಮೇಲ್ಭಾಗದ ಅಡ್ಡಪಟ್ಟಿಕೆಯನ್ನು ಲಲಾಟ ಎಂದು ಕರೆಯಲಾಗುತ್ತದೆ.

ಗುಹಾಲಯಗಳ ಬಾಗಿಲುವಾಡಗಳು ಅಧ್ಯಯನ ಯೋಗ್ಯವಾಗಿವೆ. ಒಂದನೆಯ ಗುಹೆಯ ಬಾಗಿಲು ಚೌಕಟ್ಟು ಸರಳವಾಗಿದ್ದರೆ ಮೂರನೆಯ ಗುಹೆಯದ್ದು ತುಂಬಾ ಸಂಕೀರ್ಣವಾಗಿದೆ. ಇದು ಶಿಲ್ಪಕಲಾ ವಿಕಾಸವನ್ನು ಸೂಚಿಸುತ್ತದೆ. ಒಂದನೆಯ ಗುಹೆಯ ದ್ವಾರ ಪಟ್ಟಿಕೆಗಳಲ್ಲಿ ದಳಗಳು, ಪುಷ್ಪನಕ್ಷೆ ಮೊದಲಾದವುಗಳಿವೆ. ಆದರೆ ಲಲಾಟವು ಶಿಲ್ಪರಹಿತವಾಗಿದೆ. ಎರಡನೆಯ ಗುಹೆಯ ಬಾಗಿಲು ಚೌಕಟ್ಟು ಹೆಚ್ಚು ಅಲಂಕೃತವಾಗಿದೆ. ಪಟ್ಟಿಯ ಕೆಳಭಾಗದಲ್ಲಿ ದ್ವಾರಪಾಲಕ ಮೂರ್ತಿಗಳು ಚೌಕಟ್ಟಿನ ಸೌಂದರ್ಯವನ್ನು ಹೆಚ್ಚಿಸಿದರೆ, ಮೇಲ್ಭಾಗದಲ್ಲಿ ರೇಖಾ ನಾಗರ ಶಿಖರಗಳ ಮಾದರಿಗಳು ಗಮನಾರ್ಹ ಕೆತ್ತನೆ

ಎನಿಸಿವೆ. ಮೂರನೆಯ ಗುಹಾಲಯದ ಬಾಗಿಲುವಾಡವು ಸೂಕ್ಷ್ಮ ಕೆತ್ತನೆಗಳಿಂದಾಗಿದೆ. ಇದಕ್ಕೆ ಏಳು ಶಾಖೆಗಳಿವೆ. ಕೆಳಭಾಗದಲ್ಲಿ ದೇವದಂಪತಿಗಳ ಕಂಡರಣೆ, ಮೇಲ್ಭಾಗದಲ್ಲಿ (ಉತ್ತರಾಂಗದಲ್ಲಿ) ದ್ರಾವಿಡ ಶಿಖರ ಮಾದರಿಗಳ ಕೆತ್ತನೆಗಳು ವಿಶೇಷವೆನಿಸಿವೆ.

ಈ ಕಾಲದ ರಾಚನಿಕ ಮಂದಿರಗಳಲ್ಲಿ ಬಾಗಿಲುವಾಡವು ಇದೇ ರೀತಿಯ ಸಂಸ್ಕರಣೆ ಹೊಂದಿದ್ದು ಚೌಕಟ್ಟಿನ ಕೆಳಭಾಗದಲ್ಲಿ ನದೀ ದೇವತೆಗಳು ಇಲ್ಲವೆ ಮಿಥುನ ಶಿಲ್ಪಗಳು ಜೊತೆಗಿರುವುದು ಹೊಸತನವಾಗಿದೆ. (ಉದಾ : ಐಹೊಳೆಯ ದುರ್ಗಾಭಗವತಿ). ಮಾಲಗಿತ್ತಿ ಶಿವಾಲಯದ ಗರ್ಭಗೃಹದ ಬಾಗಿಲುವಾಡದಲ್ಲಿ ಕಾಮರತಿ ಶಿಲ್ಪಗಳ ಅಲಂಕರಣೆಯಿದೆ. ಲಲಾಟ ಪಟ್ಟಿಕೆಯ ಮಧ್ಯಭಾಗದಲ್ಲಿ ಗರುಡ ಶಿಲ್ಪದ ಕೆತ್ತನೆ ಈ ಕಾಲದ ವಿಶಿಷ್ಟತೆಯಾಗಿದೆ. ಈ ಗರುಡನ ಸರ್ಪಗಳ ಬಾಲಗಳನ್ನು ಕೈಯಲ್ಲಿ ಹಿಡಿದಿರುವಂತೆ ಮತ್ತು ಆ ಸರ್ಪಗಳು ಬಾಗಿಲುವಾಡದ ಪಟ್ಟಿಕೆಗೆ ಹೊಂದಿಕೊಂಡು ಕೆಳಗೆ ಹೆಡೆಯನ್ನೆತ್ತಿರುವಂತೆ ಬಿಡಿಸಲಾಗಿರುತ್ತದೆ. ಗೌಡರ ಗುಡಿಯಲ್ಲಿ ಲಲಾಟಬಿಂಬದ ಮೇಲೆ ಗರುಡನಿರುವುದನ್ನು ಗುರುತಿಸಿದ ಹೆನ್ರಿ ಕಜಿನ್ಸ ಅವರು ಅದನ್ನು ವಿಷ್ಣುದೇವಾಲಯವೆಂದು ಭಾವಿಸಿದರು. ವಾಸ್ತವದಲ್ಲಿ ಚಲುಕ್ಯರ ಕಾಲದಲ್ಲಿ ಈ ಲಲಾಟ ಬಿಂಬವು ಅರ್ಪಣಾ ಶಿಲ್ಪ (dedicatory image) ಆಗಿರದೆ ಕೇವಲ ಅಲಂಕರಣ ಶಿಲ್ಪವೆಂಬುದು ಸುಸ್ಪಷ್ಟ. ಗೌಡರ ಗುಡಿಯು ದುರ್ಗಾಭಗವತಿಯ ಮಂದಿರವೆಂಬುದು ಅಲ್ಲಿನ ಶಾಸನದಿಂದ ಖಚಿತವಾಗುತ್ತದೆ. ಅದರ ಬಾಗಿಲುವಾಡದಲ್ಲಿ ಕೂಡ ಗರುಡನ ಈ ಬಿಂಬವಿದೆ. ಮೂಲತಃ ಸೂರ್ಯದೇವಾಲಯವಾಗಿದ್ದ ದುರ್ಗಾ ಗುಡಿಯಲ್ಲೂ ಈ ಅಲಂಕರಣವನ್ನು ಕಾಣಬಹುದು. ಇದರ ಮಂಟಪದ ಬಾಗಿಲುವಾಡವು ಒಂದು ಅದ್ಭುತ ಕಲಾಸೃಷ್ಟಿ. ಲಲಾಟದಲ್ಲಿ ಗರುಡನು ಸರ್ಪಗಳ ಬಾಲಗಳನ್ನು ಹಿಡಿದುಕೊಂಡಂತೆ ಚಿತ್ರಿತನಾಗಿದ್ದಾನೆ, ಈ ಸರ್ಪಗಳು ದ್ವಾರ ಶಾಖೆಗುಂಟ ಇಳಿದು ಬಂದು ಅಲ್ಲಲ್ಲಿ ನಿಂತು ಕೊಂಡು ನಮಿಸುವಂತೆ ಕಂಡರಿಸಲಾಗಿದೆ. **(ಚಿತ್ರ ೩೩)** ಇಲ್ಲಿ ಶಿಲ್ಪಿಯ ಕಲ್ಪನೆ ಹೂವಾಗಿ ಅರಳಿದೆ. ಪಕ್ಕದಲ್ಲಿ ಹೂವಿನ ಸುಳುವುಗಳ ಅಲಂಕರಣವಿದೆ. ದ್ವಾರಪಾಲರು, ನದೀದೇವತೆಗಳು, ರಸಿಕ ದಂಪತಿಗಳು ಶಾಖೆಗಳ ಕೆಳಭಾಗದಲ್ಲಿ ಶಿಲ್ಪಿತರಾಗಿದ್ದಾರೆ. ಜೊತೆಗೆ ಪೂರ್ಣಕಲಶಗಳ ಕಂಡರಣೆಯಿದೆ.



**ಚಿತ್ರ ೩೩. ದುರ್ಗಾ ದೇವಾಲಯದ ಬಾಗಿಲು ವಾಡ**

ಗುಪ್ತರ ದೇವಾಲಯಗಳಲ್ಲಿನ ಈ ಬಗೆಯ ಅಲಂಕರಣದಿಂದ ಪ್ರಭಾವಿತರಾದ ಚಲುಕ್ಯ ಕಲಾವಿದರು ಬಾಗಿಲುವಾಡಗಳಲ್ಲಿ ಸುಂದರವಾದ ಕೆತ್ತನೆಗಳನ್ನು ಅಳವಡಿಸಿಕೊಂಡರೆಂದು ತೋರುತ್ತದೆ. ಮೇಲಿನ ಉತ್ತರಾಂಗದಲ್ಲಿಯೂ ಉಬ್ಬುಶಿಲ್ಪಗಳ ಅಲಂಕಾರವನ್ನು ಕಾಣುತ್ತೇವೆ. ಅದರ ನಡುವೆ ಇರುವ ಚೈತ್ಯಕೂಡು ಅರ್ಪಣಾ ಶಿಲ್ಪವನ್ನು ಪ್ರದರ್ಶಿಸುವುದುಂಟು. ಬಾದಾಮಿಯ ಜಂಬುಲಿಂಗ ದೇವಾಲಯದ ಮಂಟಪದ ಬಾಗಿಲುವಾಡದ ಮೇಲೆ ಮೂರು ಚೈತ್ಯಕೂಡುಗಳಲ್ಲಿ ಬ್ರಹ್ಮ, ಈಶ್ವರ ಮತ್ತು ವಿಷ್ಣು ಇವರ ಕಿರು ಶಿಲ್ಪಗಳಿವೆ. ಈ ಗುಡಿಯು ತ್ರಿಮೂರ್ತಿಗಳಿಗೆ ಅರ್ಪಿತವಾದ ಸಂಗತಿಯು ಆ ದೇವಾಲಯದ ಶಾಸನದಿಂದ ನಿಶ್ಚಿತವಾಗಿ ತಿಳಿದುಬರುತ್ತದೆ.[1]

[1] IA, Vol. X, P. 60



**ಚಿತ್ರ ೩೪. ಜಿನಾಲಯದ ಸೋಪಾನ**

## ಸೋಪಾನ

ಬಾಗಿಲುವಾಡವು ನೆಲಮಟ್ಟದಿಂದ ಎತ್ತರದಲ್ಲಿದ್ದಾಗ ಅದಕ್ಕೆ ಮೆಟ್ಟಿಲುಗಳನ್ನು ಕಟ್ಟಲಾಗುತ್ತದೆ. ಇದನ್ನು ಸೋಪಾನ ಎಂದು ಕರೆಯುತ್ತಾರೆ. ಈ ಮೆಟ್ಟಿಲುಗಳನ್ನು ಹತ್ತಲು ಅನುಕೂಲವಾಗಲೆಂದು ಎಡಬಲಗಳಲ್ಲಿ ಚಿಕ್ಕ ಕಟ್ಟೆ ಅಥವಾ ಕಟಾಂಜನವನ್ನು ನಿರ್ಮಿಸುತ್ತಾರೆ. ಈ ಸೋಪಾನದಿಂದಾಗಿ ಬಾಗಿಲುವಾಡದ ಸೌಂದರ್ಯ ಹೆಚ್ಚುತ್ತದೆ. ಈ ಕಟ್ಟೆಯ ಮೇಲ್ತುದಿಯಲ್ಲಿ ಸಿಂಹದ ಮುಖವನ್ನು ಕೆತ್ತನೆಮಾಡಿ ಅಲ್ಲಿಂದ ಆನೆಯ ಸೊಂಡಿಲು ಚಾಚಿ ಇಳಿದಿರುವಂತೆ ವಿನ್ಯಾಸ ಮಾಡಲಾಗಿರುತ್ತದೆ. ಇದನ್ನು ಶಾಸ್ತ್ರಗ್ರಂಥಗಳು 'ಹಸ್ತಿಹಸ್ತ' ಎಂದು ನಿರ್ದೇಶಿಸಿವೆ.

ಚಲುಕ್ಯರ ಗುಹಾ ದೇವಾಲಯಗಳಲ್ಲಿ ಮುಖಮಂಟಪವನ್ನು ಪ್ರವೇಶಿಸಲು ಮೆಟ್ಟಿಲುಗಳಿದ್ದರೂ ಈ ಬಗೆಯ ಅಲಂಕಾರವಿಲ್ಲ. ಆದರೆ ಗರ್ಭಗೃಹದ ಮುಂದೆ ಚಿಕ್ಕದಾದ ಸೋಪಾನಗಳ ಕಂಡರಣೆಯಿದೆ. ಬಾದಾಮಿಯ ಜಿನಾಲಯದ ಗರ್ಭಗೃಹದ ಸೋಪಾನದ 'ಹಸ್ತಿಹಸ್ತ' ವಿನ್ಯಾಸದಿಂದಾಗಿ ದ್ವಾರಬಂಧಕ್ಕೆ ಹೆಚ್ಚಿನ ಚೆಲುವು ಬಂದಿದೆ **(ಚಿತ್ರ ೩೪)** ಐಹೊಳೆಯ ರಾವಲಫಡಿಯ ಮೂರು ಸೋಪಾನಗಳು ಚಿಕ್ಕವಾಗಿದ್ದರೂ, ಅಂದವಾಗಿವೆ.

ರಾಚನಿಕ ಮಂದಿರಗಳಲ್ಲಿ ಸೋಪಾನಗಳ ನಿರ್ವಹಣೆಗೆ ಚಲುಕ್ಯ ಕಲಾವಿದರು ಹೆಚ್ಚಿನ ಆಸಕ್ತಿ ತೋರಿಲ್ಲ. ಅವು ತುಂಬಾ ಬಡವಾಗಿ ಕಾಣುತ್ತವೆ. ಐಹೊಳೆಯ ಮಲ್ಲಿಕಾರ್ಜುನ ಮಂದಿರ ಸಮುಚ್ಚಯದಲ್ಲಿ ಹಾಳಾದ ಸ್ಥಿತಿಯಲ್ಲಿರುವ ಸೋಪಾನ-ವೊಂದು




**ಚಿತ್ರ ೩೫ ಹೊರ ವಾಸ್ತು ಅಂಗಗಳು**

ಗಮನಾರ್ಹವಾಗಿದೆ. ಹುಚ್ಚಿಮಲ್ಲಿಗುಡಿಯ ಮುಖಮಂಟಪದ ಸೋಪಾನವು ದೊಡ್ಡದಾಗಿದ್ದರೂ ಕಲಾತ್ಮಕವಾಗಿಲ್ಲ.

## ಆ. ದೇವಾಲಯದ ಹೊರ ವಾಸ್ತುಅಂಗಗಳು

ಗುಹಾ ದೇವಾಲಯಗಳಲ್ಲಿ ಒಳಗಿನ ವಾಸ್ತುಅಂಗಗಳ ಅಲಂಕರಣ ಮಾತ್ರ ಸಾಧ್ಯ ! ಆದರೆ ರಾಚನಿಕ ದೇವಾಲಯಗಳಲ್ಲಿ ಒಳಗೂ ಹೊರಗೂ ಶಿಲ್ಪಾಲಂಕಾರಕ್ಕೆ ಅವಕಾಶವಿದೆ. ಈ ಸುಸಂಧಿಯನ್ನು ಚಲುಕ್ಯ ಸೂತ್ರಧಾರಿಗಳು ತಪ್ಪಿಸಿಕೊಳ್ಳಲಿಲ್ಲ. ಅವರು ದೇವಾಲಯದ ಹೊರ ಭಾಗಗಳನ್ನೂ ವಿವಿಧಬಗೆಯ ಶಿಲ್ಪಗಳಿಂದ ಸಿಂಗರಿಸಿದರು. ಹೀಗೆ ಅಲಂಕರಣಗೊಂಡ ಹೊರಭಾಗಗಳೆಂದರೆ ; ಅಧಿಷ್ಠಾನ, ಭಿತ್ತಿ , ಪ್ರಸ್ತರ, ಗ್ರೀವ ಮತ್ತು ಶಿಖರ. **(ಚಿತ್ರ ೩೫)** ಷಡ್ವರ್ಗ ದೇವಾಲಯಗಳಲ್ಲಿ ಕೊನೆಯ ಭಾಗವಾಗಿರುವ ಸ್ತೂಪಿಯಲ್ಲಿ ಶಿಲ್ಪಾಲಂಕರಣಕ್ಕೆ ಹೆಚ್ಚಿನ ಅವಕಾಶವಿಲ್ಲ .

## ಅಧಿಷ್ಠಾನ

ದೇವಾಲಯದ ಹೊರಗೆ ನಿಂತು ವೀಕ್ಷಿಸಿದರೆ ಕಣ್ಣಿಗೆ ಬೀಳುವ ಅತ್ಯಂತ ಕೆಳಗಿನ ವಾಸ್ತು ಅಂಗವೆಂದರೆ ಅಧಿಷ್ಠಾನ. ದೇಗುಲಕ್ಕೆ ಭದ್ರ ಬುನಾದಿಯನ್ನು ಒದಗಿಸುವುದು ಮತ್ತು ಅದರ ಭಾರವನ್ನು ಎತ್ತಿ ಹಿಡಿಯುವುದು ಅದರ ಪ್ರಧಾನ ಕಾರ್ಯ. ಆದರೆ ರೂವಾರಿಗಳು ಅಧಿಷ್ಠಾನದ ಕೆಲವು ಭಾಗಗಳನ್ನು ವಿವಿಧ ಬಗೆಯ ವಿನ್ಯಾಸಗಳಿಂದ ಸಿಂಗರಿಸಿ, ಅಲಂಕರಣವು ತಮ್ಮ ಆನುಷಂಗಿಕ ಉದ್ದೇಶವಾಗಿದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಅಧಿಷ್ಠಾನದಿಂದಾಗಿ ದೇವಾಲಯವು ಎತ್ತರದಲ್ಲಿ ನಿಲ್ಲುವುದರಿಂದ ಇಡೀ ಕಟ್ಟಡವು ಸುಂದರವಾದ ನಿಲುವನ್ನು ಪಡೆಯುತ್ತದೆ.

ಚಲುಕ್ಯ ದೇವಾಲಯಗಳಲ್ಲಿ ಕಾಣಸಿಗುವ ಅಧಿಷ್ಠಾನದ ಅಂಗಗಳೆಂದರೆ ಉಪಾನ, ಜಗತಿ, ಖುರ, ಕುಂಭ, ಪದ್ಮ, ಕುಮುದ, ಗಳ, ಕಂಪ, ಆಲಿಂಗ, ಅಂತರಿತ, ಪ್ರತೀ, ವಾಜನ, ಕಪೋತ ಮತ್ತು ಪಟ್ಟಿಕಾ. ಎಲ್ಲ ಅಧಿಷ್ಠಾನಗಳಲ್ಲಿ ಇವೆಲ್ಲವೂ ಇರಲೇಬೇಕೆಂಬ ನಿಯಮವಿಲ್ಲ. ಪ್ರಧಾನ ಭಾಗಗಳಾದ ಉಪಾನ, ಗಳ, ಹಾಗೂ ಕಪೋತಗಳು ಇರುವುದು ಸಾಮಾನ್ಯ. ಅಧಿಷ್ಠಾನದ ಕೆಳಗಿನ ಭಾಗ ಉಪಾನ; ಮೇಲಿನ ಭಾಗ ಕಪೋತ. ಪ್ರಧಾನವಾಗಿ ಎದ್ದು ಕಾಣವ ಅಂಗಗಳೆಂದರೆ ಜಗತಿ, ಕುಮುದ, ಗಳ ಮತ್ತು ಕಪೋತ. **(ಚಿತ್ರ ೩೬)** ಕೆಳಗಿರುವ ಜಗತಿಯಲ್ಲಿ ವಿಶೇಷ ಅಲಂಕರಣ ಕಂಡುಬರುವದಿಲ್ಲ. ಕುಮುದ-ವೈವಿಧ್ಯವು ಗಮನಾರ್ಹವಾಗಿದೆ. ಮಹಾಕೂಟೇಶ್ವರ ದೇವಾಲಯ, ಪಟ್ಟದಕಲ್ಲಿನ ಗಳಗನಾಥಗಳಲ್ಲಿ ವೃತ್ತಾಕಾರದ ಕುಮುದಗಳಿರುವ ಅಧಿಷ್ಠಾನಗಳಿವೆ. ಅಲ್ಲಿಯ ಸಂಗಮೇಶ್ವರ, ಕಾಶಿವಿಶ್ವನಾಥ ಗುಡಿಗಳಲ್ಲಿ ಕುಮುದಗಳು ಮೂರು ಪಟ್ಟಿಗಳಂತಿದ್ದು ತ್ರಿಪಟ್ಟ ಕುಮುದ ಎನಿಸಿವೆ. ಚಲುಕ್ಯ ದೇವಾಲಯಗಳಲ್ಲಿ ತ್ರಿಪಟ್ಟ ಕುಮುದಗಳು ಸಾಮಾನ್ಯ. ಹೆಚ್ಚಿನ ಸಂಖ್ಯೆಯಲ್ಲಿ ಪಟ್ಟಿಗಳಿರುವ ಬಹುಮುಖ ಕುಮುದಗಳನ್ನು ಐಹೊಳೆಯ ದುರ್ಗಾ ದೇವಾಲಯ, ಮತ್ತು ನಾಗರಾಳದ ನಾಗನಾಥ ದೇವಾಲಯಗಳ ಅಧಿಷ್ಠಾನಗಳಲ್ಲಿ ಕಾಣಬಹುದು.



**ಚಿತ್ರ ೩೬. ಅಧಿಷ್ಠಾನದ ಭಾಗಗಳು**

ಅಧಿಷ್ಠಾನದ 'ಗಳ' ಭಾಗವು ಬಳ್ಳಿ, ವ್ಯಾಳಿ, ಕುಬ್ಜ ಗಣಗಳು ಮೊದಲಾದ ಕೆತ್ತನೆಗಳಿಂದ ಅಲಂಕೃತಗೊಂಡಿರುತ್ತದೆ. ಮೇಲಿನ ಶಿವಾಲಯದ 'ಗಳ'ದಲ್ಲಿ ಕೃಷ್ಣಲೀಲೆಯ ಸನ್ನಿವೇಶ ಮತ್ತು ಪಾಪನಾಥ, ದುರ್ಗಾ ದೇವಾಲಯಗಳಲ್ಲಿ ರಾಮಾಯಣದ ದೃಶ್ಯಗಳು ಶಿಲ್ಪಿತವಾಗಿವೆ. ಆಲಂಪುರದ ದೇಗುಲಗಳಲ್ಲಿ ಪುಷ್ಪನಕ್ಷೆ, ನವಿಲು, ಸಿಂಹ ಮೊದಲಾದ ಪ್ರಾಣಿಗಳ ಚಿತ್ರಣವಿದೆ. ಐಹೊಳೆಯ ಲಾಡಖಾನ, ಮೇಗುತಿ ದೇವಾಲಯಗಳ ಅಧಿಷ್ಠಾನಗಳಲ್ಲಿ ಪ್ರಾಣಿ ಮತ್ತು ಯಕ್ಷರ ಮೂರ್ತಿಗಳನ್ನು ಕಂಡರಿಸಲಾಗಿದೆ.

ಕಪೋತವು ಅಧಿಷ್ಠಾನದ ಮೇಲ್ಭಾಗದಲ್ಲಿರುವ ಅಂಗವಾಗಿದ್ದು ಇದರಲ್ಲಿ ವಿಶೇಷ ಅಲಂಕರಣಗಳಿರುವುದುಂಟು. ಅವುಗಳಲ್ಲಿ 'ನಾಸಿ' ಪ್ರಧಾನ ಅಲಂಕರಣ. ಇದನ್ನು ಕಪೋತನಾಸಿ ಎಂದು ಹೇಳಲಾಗುತ್ತದೆ. ಪಟ್ಟದಕಲ್ಲಿನ ವಿರೂಪಾಕ್ಷ ಗುಡಿಯಲ್ಲಿ ಇವನ್ನು ಕಾಣಬಹುದು. ಬಾದಾಮಿಯ ಮಾಲಗಿತ್ತಿ ಶಿವಾಲಯದಲ್ಲಿ 'ರತ್ನಪಟ್ಟ'ಯ ಅಲಂಕಾರವಿದೆ.

## ಭಿತ್ತಿ

ಅಧಿಷ್ಠಾನದ ರಚನೆಯನ್ನನುಸರಿಸಿ ದೇವಾಲಯದ ಭಿತ್ತಿಯನ್ನು ರಚಿಸಲಾಗಿರುತ್ತದೆ. ಮೂಲದೇವರ ರಕ್ಷಣಾ ಕವಚದಂತೆ ನಿರ್ಮಾಣಗೊಂಡ ಭಿತ್ತಿಯು ಹಲವಾರು ವಾಸ್ತು ರಚನೆಗಳಿಂದ ಅಲಂಕೃತವಾಗಿರುತ್ತದೆ. ಇಂತಹ ಅಂಗಗಳೆಂದರೆ ವೇದಿ, ಕುಡ್ಯಸ್ತಂಭ, ಕೋಷ್ಠ, ತೋರಣ ಮತ್ತು ಜಾಲಂಧ್ರಗಳು.

ವೇದಿ, ಭಿತ್ತಿಯ ಮೊದಲ ಅಂಗ. ಇದು ಅಧಿಷ್ಠಾನದ ಮೇಲೆ, ಭಿತ್ತಿಯ ಕೆಳಗೆ ಇರುವಂತಹದು. ಅಲಂಕೃತವಾದ ವೇದಿಯನ್ನು ಮಹಾಕೂಟೇಶ್ವರ, ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯಗಳಲ್ಲಿ ಕಾಣುತ್ತೇವೆ.

ಕುಡ್ಯಸ್ತಂಭಗಳು ಭಿತ್ತಿಯಿಂದ ಸ್ವಲ್ಪ ಹೊರಗೆ ಚಾಚಿರುವ ಅರೆಗಂಬಗಳು. ಇವುಗಳಿಂದಾಗಿ ಗೋಡೆಯಲ್ಲಿ ಹಿಂಬಣೆ ಮುಂಬಣೆಗಳುಂಟಾಗಿ ಗೋಡೆಯು ಏಕತಾನತೆಯಿಂದ ದೂರಾಗಿ ನೋಡಲು ಹೆಚ್ಚು ಅಂದವಾಗಿ ಕಾಣುತ್ತದೆ. ಪೂರ್ಣಕಂಬಗಳಂತೆ ಇವೂ ಕೆತ್ತನೆಗಳಿಂದ ಕೂಡಿವೆ.

ಕುಡ್ಯಸ್ತಂಭಗಳ ನಡುವೆ 'ಕೋಷ್ಠ'ಗಳೆಂಬ ಗೂಡುಗಳಿರುತ್ತವೆ. ಇವುಗಳ ಮೇಲೆ ಕಮಾನಿನಾಕಾರದಲ್ಲಿ ತೋರಣಗಳ ಅಲಂಕಾರವಿರುತ್ತದೆ. ಭಿತ್ತಿಯಲ್ಲಿನ ತೋರಣಗಳನ್ನು 'ಕುಡ್ಯತೋರಣ' ಎಂದು ಕರೆಯುತ್ತಾರೆ. ತೋರಣಗಳಲ್ಲಿ ಹಲವು ಪ್ರಕಾರಗಳಿವೆ. ಮಕರಗಳ



**ಚಿತ್ರ ೩.೭. ಮಕರ ತೋರಣ**

ಮುಖದಿಂದ ಬಳ್ಳಿಯು ಹೊರಚಾಚಿದಂತೆ ರಚಿತವಾದಲ್ಲಿ ಅದು ಮಕರತೋರಣವೆನಿಸುತ್ತದೆ. **(ಚಿತ್ರ ೩.೭)** ಅದು ವ್ಯಾಳ, ಸಿಂಹಗಳಿಂದಾಗಿದ್ದರೆ ಚಿತ್ರ ತೋರಣ ಎಂದು ಮತ್ತು ಎಲೆ, ಬಳ್ಳಿಗಳಿಂದ ಅಲಂಕೃತವಾಗಿದ್ದರೆ ಪತ್ರತೋರಣ ಎಂದು ಕರೆಯಲಾಗುತ್ತದೆ. ಈ ಎಲ್ಲ ಬಗೆಯ ತೋರಣ ವಿನ್ಯಾಸಗಳನ್ನು ಚಲುಕ್ಯ ದೇಗುಲಗಳಲ್ಲಿ ಕಾಣುತ್ತೇವೆ.



**ಚಿತ್ರ ೩೮. ವೃತ್ತಾಕಾರದ ಜಾಲಂಧ್ರ, ಮೇಲಿನ ಶಿವಾಲಯ, ಬಾದಾಮಿ**

ವಾತಾಯನ ಅಥವಾ ಜಾಲಂಧ್ರಗಳು ಭಿತ್ತಿಯ ಭಾಗಗಳು. ಇವುಗಳಿಂದಾಗಿ ಸಭಾಮಂಟಪದಲ್ಲಿ ಗಾಳಿ ಮತ್ತು ಬೆಳಕು ಲಭ್ಯ. ಹೀಗೆ ಉಪಯುಕ್ತತೆಯ ದೃಷ್ಟಿಯಿಂದ ಮಹತ್ವದ ವಾಸ್ತು ಅಂಗವಾದ ಜಾಲಂಧ್ರಗಳಿಗೆ ಶಿಲ್ಪಿಗಳು ಸೌಂದರ್ಯದ ಸಂಸ್ಕಾರ ನೀಡಿದ್ದಾರೆ. ಇವುಗಳ ಆಕಾರ, ಅಳತೆ ಹಾಗೂ ನಕ್ಷೆಗಳಲ್ಲಿ ವೈವಿಧ್ಯವಿದೆ.

ಬಾದಾಮಿಯ ಮೇಲಣ ಶಿವಾಲಯದ ಜಾಲಂಧ್ರವೊಂದು ವೃತ್ತಾಕಾರವಾಗಿದೆ. **(ಚಿತ್ರ ೩೮)** ಹದಿನಾರು ಅರಗಳಿರುವ ಮತ್ಸ್ಯಚಕ್ರವಿದು. ಇಲ್ಲಿನ ಎರಡನೆಯ ಗುಹಾಲಯದ ಮೇಲ್ಗಂಡಿನಲ್ಲಿರುವ ಮತ್ಸ್ಯಚಕ್ರದ ನಕ್ಷೆ ಇದಕ್ಕೆ ಪ್ರೇರಣೆಯಾದಂತಿದೆ. ಈ ನಕ್ಷೆಯು ಚಲುಕ್ಯರಿಗೆ ಹೆಚ್ಚು ಪ್ರಿಯವಾಗಿರುವಂತೆ ತೋರುತ್ತದೆ. ಮಹಾಕೂಟದ ಮಲ್ಲಿಕಾರ್ಜುನ, ಪಟ್ಟದಕಲ್ಲಿನ ಸಂಗಮೇಶ್ವರ, ಐಹೊಳೆಯ ಲಾಡಖಾನ ಹಾಗೂ ದುರ್ಗಾ ದೇವಾಲಯಗಳಲ್ಲೂ ಈ ನಕ್ಷೆಯ ಜಾಲಂಧ್ರಗಳಿವೆ. ಸ್ವಸ್ತಿಕವು ಇನ್ನೊಂದು ಪ್ರಿಯ ನಕ್ಷೆಯಾಗಿದೆ. ಬಾದಾಮಿಯ ಎರಡನೆಯ ಗುಹಾಲಯದ ಚತ್ತಿನ ಎರಡು ಅಂಕಣಗಳು ಈ ನಕ್ಷೆಯಿಂದ ಅಲಂಕೃತವಾಗಿವೆ. ಸ್ವಸ್ತಿಕ ನಕ್ಷೆಯ ಜಾಲಂಧ್ರವೊಂದು ಮಹಾಕೂಟೇಶ್ವರ ಗುಡಿಯಲ್ಲಿದೆ. ಇನ್ನೊಂದನ್ನು ಐಹೊಳೆಯ ದುರ್ಗಾಗುಡಿಯಲ್ಲಿ ಕಾಣಬಹುದು. ಹುಚ್ಚಿಮಲ್ಲಿಯ ಗುಡಿಯ ವಾತಾಯನದಲ್ಲಿ ಪುಷ್ಪಬಂಧದ ಅಲಂಕಾರವಿದೆ.

ಆಲಂಪುರದ ಗರುಡಬ್ರಹ್ಮ ಗುಡಿ ಮತ್ತು ಐಹೊಳೆಯ ಲಾಡಖಾನಗುಡಿಯ ಜಾಲಂಧ್ರಗಳು ಬೃಹದಾಕಾರದ ಆಯತಗಳಲ್ಲಿ ರೂಪುಗೊಂಡು ಚಿತ್ತಾಕರ್ಷಕವಾಗಿವೆ.



**ಚಿತ್ರ ೩೯. ಜಾಲಂಧ್ರಗಳು, ಲಾಡಖಾನ ಗುಡಿ**

**(ಚಿತ್ರ ೩೯)** ಇಲ್ಲಿನ ಅತಿದೊಡ್ಡ ಜಾಲಂಧ್ರವು ೨.೯ಮೀx೧.೧೭ಮೀ ವಿಸ್ತೀರ್ಣದ್ದಾಗಿದೆ. ಹೀಗೆ ವಾತಾಯನಗಳು ಅವಶ್ಯಕತೆಗೆ ತಕ್ಕಂತೆ ಹಿಗ್ಗಿಕೊಂಡಿವೆ. ಜೊತೆಗೆ ಕಲಾತ್ಮಕವಾಗಿ ಬಗೆಬಗೆಯಾಗಿ ಪ್ರಕಟಗೊಂಡಿವೆ.

## ಪ್ರಸ್ತರ

ಇದು ಭಿತ್ತಿಯ ಮೇಲೆ ಇರುವ ಭಾಗ. ಕಂಬದಿಂದ ಕಂಬಕ್ಕೆ ಸಂಪರ್ಕವನ್ನು ಒದಗಿಸುವಂತಹದು. ಇದು ಕೂಡ ಅನೇಕ ಅಂಗಗಳಿಂದ ರಚಿತವಾಗಿದ್ದು ಬಹುವಿಧವಾಗಿ ಅಲಂಕರಣಗೊಂಡಿದೆ.

ಅಧಿಷ್ಠಾನದಲ್ಲಿರುವಂತೆ ಪ್ರಸ್ತರದಲ್ಲೂ ಕಪೋತ ಭಾಗವಿದ್ದು ಅದರ ಕೆಳಗಿರುವ 'ವಲಭೀ' ಎಂಬ ಅಂಗದಲ್ಲಿ ಹಂಸಮಾಲಾ ಇಲ್ಲವೆ ಭೂತಮಾಲಾಗಳ ಕೆತ್ತನೆ ಇರುವುದು. **(ಚಿತ್ರ ೪೦)** ಇದು ವಿಕಸಿತ ಚಲುಕ್ಯ ದೇವಾಲಯಗಳ ವಿಶಿಷ್ಟ ವಾಸ್ತು ಲಕ್ಷಣವೆನಿಸಿದೆ. ಶಿಖರವನ್ನು ಈ ಹಂಸಪಕ್ಷಿಗಳು ಎತ್ತಿ ಹಿಡಿದಿವೆ ಎಂಬ ಕಲ್ಪನೆ ಮೂಡುವಂತೆ ಇದರ ವಿನ್ಯಾಸ ಇರುತ್ತದೆ. ಬಾದಾಮಿಯ ಜಂಬುಲಿಂಗ, ಮಹಾಕೂಟದ ಮಹಾಕೂಟೇಶ್ವರ ದೇವಾಲಯಗಳು ಈ ಬಗೆಯ ಹಂಸಮಾಲೆಯಿಂದ ಅಲಂಕೃತವಾಗಿವೆ. ಮಹಾಕೂಟದ ಮಲ್ಲಿಕಾರ್ಜುನ, ನಾಗರಾಳದ ನಾಗನಾಥ ಮಂದಿರಗಳಲ್ಲಿ ಈ ಹಂಸಗಳು ಜೋಡಿಯಾಗಿ ಕೆತ್ತನೆಗೊಂಡಿದ್ದು ಒಂದು ವಿಶೇಷ ಅಲಂಕರಣೆ. ಪಟ್ಟದಕಲ್ಲಿನ ಸಂಗಮೇಶ್ವರ ಮತ್ತು ವಿರೂಪಾಕ್ಷ ದೇಗುಲಗಳಲ್ಲಿ ವಲಭೀ ಭಾಗವು ಗಣರ ಸಾಲುಗಳಿಂದ ಶಿಲ್ಪಿತವಾಗಿರುವುದು ಹೊಸತನವನ್ನು ಒದಗಿಸಿದೆ.



ಚಿತ್ರ ೪೦. ಹಂಸಮಾಲಾ

## ಗ್ರೀವ

ಗರ್ಭಗೃಹದ 'ಪ್ರಸ್ತರದ' ಮೇಲೆ ಕಟ್ಟಡವು ಮುಂದುವರೆಯುತ್ತದೆ. ಇದನ್ನು 'ಮೇಲ್ಕಟ್ಟಡ' ಎಂದು ಹೇಳಲಾಗುತ್ತದೆ.[*] ಗ್ರೀವವು ಷಡಂಗಗಳಲ್ಲಿ ನಾಲ್ಕನೆಯ ಭಾಗ. ಇದರ ಮೇಲೆ ಶಿಖರ. ಅದಾದ ಬಳಿಕ ಕೊನೆಯದಾದ ಸ್ತೂಪಿ. ಔತ್ತರೇಯ ಶೈಲಿಯ ದೇವಾಲಯಗಳಲ್ಲಿ ಇಡಿಯಾಗಿ ಈ ಮೇಲ್ಕಟ್ಟಡವನ್ನು ಶಿಖರ ಎಂದು ಕರೆಯುವುದುಂಟು.

ಗ್ರೀವವು ದೇವಾಲಯದ ಪ್ರಸ್ತರ ಮತ್ತು ಶಿಖರದ ನಡುವಿನ ಭಾಗವಾಗಿದೆ. ಇದನ್ನು ಕಂಧರ ಇಲ್ಲವೆ ಕಂಠ ಎಂದೂ ಹೇಳಲಾಗುತ್ತದೆ. ಗ್ರೀವದ ಗ್ರೀವಕೋಷ್ಠಗಳು ಗ್ರೀವದೇವತಾ ಶಿಲ್ಪಗಳಿಂದ ಅಲಂಕೃತವಾಗಿರುತ್ತವೆ. ಪಟ್ಟದಕಲ್ಲಿನ ಸಂಗಮೇಶ್ವರ ದೇವಾಲಯದಲ್ಲಿ ಗ್ರೀವಕೋಷ್ಠದ ಭಾಗದಲ್ಲಿ ಶಾಲಾ ಕೋಷ್ಠದ ಅಲಂಕರಣವಿದೆ.

## ಶಿಖರ

ದೇವಾಲಯದ ಮೇಲ್ಕಟ್ಟಡದ ಗ್ರೀವ ಮತ್ತು ಸ್ತೂಪಿಗಳ ನಡುವೆ ಇರುವ ಭಾಗವಿದು. ತನ್ನ ವಿವಿಧ ವಿನ್ಯಾಸಗಳಿಂದ ದೇವಾಲಯಕ್ಕೆ ಅಂದವನ್ನು ತಂದುಕೊಡುವಂತಹದು. ಶಿಖರವು ಚೌಕಾಕಾರವಾಗಿ, ಬಹುಭುಜಾಕೃತಿಯಾಗಿ ಇಲ್ಲವೆ ವೃತ್ತಾಕಾರವಾಗಿ ವಿನ್ಯಾಸಗೊಂಡಿರಬಹುದು. ಚಲುಕ್ಯರ ದೇವಾಲಯಗಳಲ್ಲಿ ಈ ಎಲ್ಲ ವಿಧಗಳು ಕಾಣಸಿಗುತ್ತವೆ. ಶಿಖರವು ಚೌಕಾಕಾರವಾಗಿದ್ದರೆ ನಾಗರ, ಷಡ್ಭುಜ ಇಲ್ಲವೆ ಅಷ್ಟಭುಜಗಳಿಂದಾಗಿದ್ದರೆ ದ್ರಾವಿಡ ಮತ್ತು ವೃತ್ತಾಕಾರವಾಗಿದ್ದರೆ ವೇಸರವೆಂದು 'ಮಾನಸಾರ'ದಲ್ಲಿ ವಿವರಿಸಲಾಗಿದೆ. ಬಾದಾಮಿ ಮೇಲಣ ಶಿವಾಲಯದಲ್ಲಿ ಚೌಕಾಕಾರ ಶಿಖರವಿದೆ. ಮಹಾಕೂಟದ ಬಾಣಂತಿಗುಡಿಯಲ್ಲಿ ಅದು ಅಷ್ಟಭುಜಕೃತಿಯದ್ದಾಗಿದೆ. ಪಟ್ಟದಕಲ್ಲಿನ ಮಲ್ಲಿಕಾರ್ಜುನ ಗುಡಿಯು ವೃತ್ತಾಕಾರದ ಶಿಖರದಿಂದ ಅಲಂಕೃತವಾಗಿದೆ.

ಶುಕನಾಸಿವೆಂಬುದು ಔತ್ತರೇಯ ಶೈಲಿಯ ವಿಶಿಷ್ಟ ವಾಸ್ತು ಅಂಶ. ಇದನ್ನು ದ್ರಾವಿಡ ಶೈಲಿಯ ದೇವಾಲಯಗಳಲ್ಲಿ ಚಲುಕ್ಯ ಸ್ಥಪತಿಗಳು ಅಳವಡಿಸಿದರು. ಪಟ್ಟದಕಲ್ಲಿನ ಜಂಬುಲಿಂಗ, ಐಹೊಳೆಯ ಸೂರ್ಯದೇವಾಲಯ, ಮಹಾಕೂಟದ ಮಹಾಲಿಂಗ, ಆಲಂಪುರದ ತಾರಕ ಬ್ರಹ್ಮ, ಸಂಡೂರಿನ ಪಾರ್ವತೀ ದೇವಾಲಯಗಳಲ್ಲಿ ಈ ಪ್ರಯೋಗಶೀಲತೆಯನ್ನು ಕಾಣಬಹುದು. ಶುಕನಾಸಿಯು ಬೃಹದಾಕಾರದ ನಾಸಿಕದಿಂದ

[*] ಗೋಪಾಲ್ ಬಾ.ರಾ. ವಾಸ್ತು, ಕನ್ನಡ ಸಾಹಿತ್ಯ ಪರಿಷತ್ತು . ಬೆಂಗಳೂರು ಪು. ೩೦.

ಕೂಡಿದ್ದು ಅದರಲ್ಲಿ ಅರ್ಪಣ ದೇವತೆಯ ಮೂರ್ತಿಯನ್ನು ಕೂಡಿಸಿರುವರು. ಶುಕನಾಸಿಯು ನಕ್ಷೆ ವಿನ್ಯಾಸಗಳಿಂದ ಹೆಚ್ಚು ಕಲಾತ್ಮಕವಾಗಿರುತ್ತದೆ.

**ಕಲಶ**

ಷಡ್ವರ್ಗ ದೇವಾಲಯಗಳಲ್ಲಿ ಕೊನೆಯ ವಾಸ್ತು ಅಂಗವಾದ ಕಲಶದಲ್ಲಿ ಶಿಲ್ಪಾಲಂಕರಣಕ್ಕೆ ಅವಕಾಶವಿಲ್ಲ. ಅಲ್ಲಿ ಶಿಲ್ಪಗಳನ್ನು ವಿನ್ಯಾಸಗೊಳಿಸಿದರೆ ಅವು ನೋಡುಗನ ಕಣ್ಣಿಗೆ ಬೀಳದಷ್ಟು ದೂರವೂ ಎತ್ತರವೂ ಇರುವ ಕಾರಣ ಸಹೃದಯನಿಗೆ ಕಲಾದರ್ಶನದ ಅನುಭವವನ್ನು ಒದಗಿಸಲಾರವು. ಆದಾಗ್ಯೂ ಕಲಶದ ಮಾಟದಲ್ಲಿ ವೈವಿಧ್ಯ ತರುವಲ್ಲಿ ಕಲಾವಿದರು ಪ್ರಯೋಗ ನಡೆಸಿರುವುದು ಸ್ಪಷ್ಟ. ಇಲ್ಲಿಯೂ ಸೂತ್ರಧಾರಿಯ ಸೌಂದರ್ಯ ಪ್ರಜ್ಞೆ ಸುಪ್ತವಾಗಿ ಪ್ರೇರಣೆ ನೀಡಿದೆ. ಇಡೀ ದೇವಾಲಯದ ಚಿಕಣಿ ರೂಪವನ್ನು ಶಿಲ್ಪರೂಪದಲ್ಲಿ ಬಳಸಿರುವುದು ಕುತೂಹಲಕಾರಿ ಸಂಗತಿ. ದೇವಾಲಯದ ಗೋಡೆ ಇಲ್ಲವೆ ಮೇಲ್ಕಟ್ಟಡದ ಪಟ್ಟಿಕೆಗಳಲ್ಲಿ ಇಂತಹ ಚಿಕಣಿ ಮಂದಿರಗಳನ್ನು ಕಿರು ಶಿಲ್ಪಗಳ ರೂಪದಲ್ಲಿ ನಿರೂಪಿಸಲಾಗಿದೆ. ದೇವಾಲಯದ ಭಾಗವೊಂದು ಇಡೀ ದೇವಾಲಯದ ಕಿರು ಶಿಲ್ಪದಿಂದ ಅಲಂಕೃತವಾಗಿರುವುದು ಚಕಿತಗೊಳಿಸುವಂತಹದು. ಈ ಬಗೆಯ ಶಿಲ್ಪಗಳು ವಾಸ್ತು ಬೆಳವಣಿಗೆಯ ಅಧ್ಯಯನದಲ್ಲಿ ನೆರವಾಗಬಲ್ಲವು.

ಬಾದಾಮಿಯ ಮೂರನೆಯ ಗುಹಾಲಯದ ಗರ್ಭಗೃಹದ ಬಾಗಿಲುವಾಡದ ಉತ್ತರಾಂಗದಲ್ಲಿ ದ್ರಾವಿಡ ವಿಮಾನ ಶೈಲಿಯ ಶಿಖರಗಳನ್ನೊಳಗೊಂಡ ಅಲಂಕರಣ ಪಟ್ಟಿ ಇದೆ. ಇದು ಮೂರು ಶಿಖರಗಳಿಂದ ಅಲಂಕೃತವಾಗಿದೆ. ಈ ಗುಹಾದೇವಾಲಯದ ನಿರ್ಮಾಣ ಕಾರ್ಯವು ಕ್ರಿ.ಶ. ೫೭೮ರಲ್ಲಿ ಪೂರ್ಣಗೊಂಡಿತೆಂಬುದು ಅಲ್ಲಿಯ ಶಾಸನದಿಂದ ಸ್ಪಷ್ಟವಿದೆ. ಅಂದರೆ ಈ ವೇಳೆಗೆ ದ್ರಾವಿಡ ಶಿಖರ ವಿನ್ಯಾಸದ ದೇವಾಲಯಗಳ ಪರಿಕಲ್ಪನೆ ಈ ರೂವಾರಿಗಳಿಗೆ ಚೆನ್ನಾಗಿ ಗೊತ್ತಿತ್ತು ಎಂಬುದಕ್ಕೆ ಈ ಮಾದರಿ ಕಿರು ಶಿಲ್ಪಗಳು ಸಾಕ್ಷಿಯಾಗಿವೆ. ಇದರಿಂದ ಗುಹಾಲಯ ವಾಸ್ತುವಿನ ಜೊತೆಗೆ ಕಟ್ಟಡ ನಿರ್ಮಾಣ ವಾಸ್ತುಗಳನ್ನು ಈ ಸ್ಥಪತಿಗಳು ರೂಢಿಸಿಕೊಂಡಿರುವುದು ದೃಢಪಡುತ್ತದೆ.

ಚಲುಕ್ಯರ ರಾಚನಿಕ ಮಂದಿರಗಳ ಬಾಗಿಲುವಾಡಗಳ ಮೇಲೂ, ಮೇಲ್ಕಟ್ಟಡದ ಹೊರಗೋಡೆಯ ಅಲಂಕರಣ ಪಟ್ಟಿಕೆಗಳಲ್ಲಿಯೂ ನಕ್ಷೆಯ ಕಿರುಶಿಲ್ಪಗಳು ಬಿಂಬಿತವಾಗಿವೆ.

ದೇವಾಲಯಗಳು ಧಾರ್ಮಿಕ ಉದ್ದೇಶಗಳಿಗಾಗಿ ನಿರ್ಮಿತವಾದವುಗಳು. ಹಾಗಾಗಿ ಅವುಗಳಲ್ಲಿ ಧಾರ್ಮಿಕ ಶಿಲ್ಪಗಳಿಗೆ ಹೆಚ್ಚಿನ ಪ್ರಾಧಾನ್ಯ. ನಮ್ಮ ಪ್ರಾಚೀನ ಕಲಾವಿದರ ಚಿಂತನೆಯಲ್ಲಿ ಧಾರ್ಮಿಕದ ಜೊತೆಗೆ ಲೌಕಿಕವೂ ಸಂಗಮಿಸಿರುವುದು ಗಮನಾರ್ಹ ಸಂಗತಿ. ದೇವಾಲಯದ ಪರಿಕಲ್ಪನೆಗೆ ತಕ್ಕುದಾದ ರೀತಿಯಲ್ಲಿ ದೇವ ಶಿಲ್ಪಗಳನ್ನು ಬೃಹದಾಕಾರವಾಗಿ, ಮತ್ತು ಮಾನವ ಶಿಲ್ಪಗಳನ್ನು ಸಣ್ಣ ಪ್ರಮಾಣದಲ್ಲಿ ರೂಪಿಸಲಾಗಿದೆ. ಮನುಷ್ಯ ಸಣ್ಣವನಲ್ಲವೇ?

ತಮ್ಮ ಜೀವನದಲ್ಲಿ ಶಿಲ್ಪಿಗಳು ಕಂಡ ಹಲವಾರು ಸಂದರ್ಭ, ಸನ್ನಿವೇಶಗಳು ಲೌಕಿಕ ಶಿಲ್ಪ ನಿರೂಪಣೆಗೆ ವಸ್ತುಗಳಾಗಿವೆ. ಸಮಾಜದ ವಿವಿಧ ವರ್ಗಗಳ ಸ್ತ್ರೀಪುರುಷರು ರಾಜರಾಣಿಯರು, ಯೋಧರು, ನರ್ತಕರು, ಸಂಗೀತಗಾರರು, ಕುಸ್ತಿಪಟುಗಳು, ಹಾವಾಡಿಗರು ಮೊದಲಾದ ಶ್ರೀಸಾಮಾನ್ಯರು ಚಲುಕ್ಯ ದೇವಾಲಯಗಳಲ್ಲಿ ಹೇರಳವಾಗಿ ಶಿಲ್ಪರೂಪ ತಾಳಿದ್ದಾರೆ. ಅಧ್ಯಯನದ ಅನುಕೂಲತೆಗಾಗಿ ಮಾನವ ಶಿಲ್ಪಗಳನ್ನು ಈ ಉಪಶೀರ್ಷಿಕೆಗಳಲ್ಲಿ ಅಭ್ಯಸಿಸಬಹುದು.

೧) ಮಿಥುನ ಶಿಲ್ಪಗಳು
೨) ಸಾಲಭಂಜಿಕೆಗಳು
೩) ಇತರ ಮಾನವ ಶಿಲ್ಪಗಳು

ಇವುಗಳ ಪ್ರಧಾನ ಉದ್ದೇಶವು ದೇವಾಲಯದ ಸೌಂದರ್ಯವನ್ನು ಹೆಚ್ಚಿಸುವುದೇ ಆಗಿದೆ. ಈ ಉದ್ದೇಶವು ಫಲಿಸಿದ ಬಗೆಯನ್ನು ಅರಿತುಕೊಳ್ಳೋಣ.

### ೧.೦ ಮಿಥುನ ಶಿಲ್ಪಗಳು

೧೯೨೬ರಷ್ಟು ಹಿಂದೆಯೇ ಓ.ಸಿ. ಗಂಗೂಲಿ ಅವರು ಹಿಂದೂ ದೇವಾಲಯಗಳಲ್ಲಿ ಮೈಥುನ ದೃಶ್ಯಗಳನ್ನು ಕಂಡರಿಸಲು ಕಾರಣವೇನೆಂಬುದನ್ನು ವಿವರಿಸಿದ್ದಾರೆ[1]. ಭಾರತದಲ್ಲಿ ಅತಿ ಪ್ರಾಚೀನಕಾಲದಿಂದಲೂ ಬಾಗಿಲುವಾಡಗಳ ಮೇಲೆ ಮಿಥುನಶಿಲ್ಪವು ಮಂಗಳಕಾರಿ ಚಿಹ್ನೆಯಾಗಿ ರೂಢಿಯಲ್ಲಿದ್ದುದನ್ನು ಅವರು ತೋರಿಸಿಕೊಟ್ಟಿದ್ದಾರೆ. ಈ ಕುರಿತಾಗಿ 'ಅಗ್ನಿ ಪುರಾಣ'ದಲ್ಲಿ ವಿವರಣೆಯಿದೆ. ವರಾಹ ಮಿಹಿರನ 'ಬೃಹತ್‌ಸಂಹಿತೆ'ಯು ಆರನೆಯ ಶತಮಾನದ ಮಧ್ಯಭಾಗದಲ್ಲಿ ರಚಿತವಾದುದೆಂದು ವಿದ್ವಾಂಸರು ನಿರ್ಣಯಿಸಿದ್ದಾರೆ. ಅದರ 'ಪ್ರಾಸಾದ ಲಕ್ಷಣ' ಅಧ್ಯಾಯದಲ್ಲಿ "ದ್ವಾರ ಬಂಧದ ಶಾಖೆಗಳು ಮಂಗಲ ಚಿಹ್ನೆಗಳಾದ ಪಕ್ಷಿಗಳು, ಸ್ವಸ್ತಿಕ ನಕ್ಷೆಗಳು, ಕುಂಭಗಳು, ಮಿಥುನಗಳು, ಲತೆಗಳು ಮತ್ತು ಎಲೆಗಳಿಂದ ಅಲಂಕೃತವಾಗಿರಬೇಕು" ಎಂದು ಆದೇಶಿಸಲಾಗಿದೆ.[2] ಬಾದಾಮಿಯ ಶೈವ ಗುಹಾಲಯದ ಕಾಲ ಆರನೆಯ ಶತಮಾನದ ಮಧ್ಯಭಾಗವೇ ಆಗಿದೆ. ಪ್ರಾಯಶಃ ಇಲ್ಲಿ ನಿರೂಪಿತಗೊಂಡಿರುವ ಮಿಥುನ ಶಿಲ್ಪಗಳು ಆ ಪೂರ್ವದಲ್ಲಿ ಪ್ರಚಲಿತದಲ್ಲಿದ್ದ ಸಂಪ್ರದಾಯದಂತೆ ಕೆತ್ತನೆಗೊಂಡಿರಬಹುದಾಗಿದೆ.

[1] Tarapada Bhattacharya, The canons of Indian Art or A Study on Vasturvidya, Calcutta, 1986, P. 229

[2] Ibid, P. 230.

ಭಾರತದಲ್ಲಿ ಕಾಣ ಸಿಗುವ ಅತಿ ಪ್ರಾಚೀನ ಮಿಥುನ ಶಿಲ್ಪಗಳು ಶುಂಗರ ಕಾಲದವು. ಸುಮಾರು ಕ್ರಿ.ಶ. ಎರಡನೆಯ ಶತಮಾನದವು. ಕಾರ್ಲೆ ಮತ್ತು ನಾಸಿಕದ ಗುಹಾಲಯಗಳ ಬಾಗಿಲುವಾಡಗಳಲ್ಲಿ ಈ ಅಲಂಕರಣಗಳಿವೆ. ದಕ್ಷಿಣ ಭಾರತದಲ್ಲಿ ಅಮರಾವತಿ ಹಾಗೂ ನಾಗಾರ್ಜುನ ಕೊಂಡಗಳ ಸ್ತೂಪಗಳ ಅಲಂಕಾರಗಳಲ್ಲೂ ಮಿಥುನ ಶಿಲ್ಪಗಳು ಮೂಡಿಬಂದಿವೆ. ಈ ಬಗೆಯ ಮೂರ್ತಿಗಳ ಕಂಡರಣೆ ಕರ್ನಾಟಕದಲ್ಲಿ ಮೊದಲ ಬಾರಿಗೆ ಗೋಚರಿಸುವುದು ಸನ್ನತಿ(ಜಿ.ಗುಲಬರ್ಗಾ)ಯಲ್ಲಿ. ಇಲ್ಲಿನ ಹಲವಾರು ದಂಪತಿ ಶಿಲ್ಪಗಳು ಆಲಿಂಗನ ಭಂಗಿಯಲ್ಲಿವೆ. ಕದಂಬರ ಕಾಲದ ದಂಪತಿಶಿಲ್ಪಗಳು ಲಭ್ಯವಾಗಿಲ್ಲ.

ಭಾರತೀಯರ ಜೀವನ ಸಿದ್ಧಾಂತದಲ್ಲಿ ಧರ್ಮ ಸಮ್ಮತವಾದ ಕಾಮವು ಪವಿತ್ರವಾದುದು. ಅದು ಸೃಷ್ಟಿಕ್ರಿಯೆ. ವಂಶಾಭಿವೃದ್ಧಿಗೆ ಕಾರಣವಾದುದು. ಬದುಕಿಗೆ ಸಾರ್ಥಕ್ಯವನ್ನು ತಂದು ಕೊಡುವಂತಹದು. ಮಾನವನ ಪುರುಷಾರ್ಥಗಳಲ್ಲಿ ಕಾಮವೂ ಒಂದು. ರಸಿಕ ದಂಪತಿಗಳ ಶಿಲ್ಪ ನಿರೂಪಣೆ ಐಹಿಕ ಜೀವನದ ಧ್ಯೇಯವನ್ನು ಸಮರ್ಥಿಸುತ್ತದೆ. ಇದು ಪ್ರಕೃತಿ, ಪುರುಷರ ಸಂಗಮದ ಸಂಕೇತ.

ಆಧ್ಯಾತ್ಮಿಕ ದರ್ಶನದ ತಾಣವಾದ ದೇವಾಲಯದಲ್ಲಿ ಮಿಥುನ ಶಿಲ್ಪಗಳ ಔಚಿತ್ಯವೇನೆಂದು ನೋಡುಗನಲ್ಲಿ ಪ್ರಶ್ನೆ ಉದ್ಭವಿಸಿದರೆ ಅಚ್ಚರಿಯೇನಲ್ಲ. ಆದರೆ ಅದು ಜೀವನದ ಅವಿಭಾಜ್ಯ ಭಾಗವಾಗಿರುವುದನ್ನು ನೆನೆದಾಗ ಅದೊಂದು ಸಹಜ ಪ್ರಾಪಂಚಿಕ ಬದುಕಿನ ಚಿತ್ರಣವೆಂಬುದನ್ನು ಮನದಟ್ಟಾಗುತ್ತದೆ. ಕಲಾವಿದ ತನ್ನ ಜೀವನದ ಎಲ್ಲ ಸನ್ನಿವೇಶ, ಸಂದರ್ಭ, ಘಟನೆಗಳನ್ನು ಶಿಲ್ಪದಲ್ಲಿ ಮೂರ್ತಗೊಳಿಸುತ್ತಾನೆ. ಮೈಥುನ ಅದಕ್ಕೆ ಹೊರತಾಗಿಲ್ಲ.

ಚಲುಕ್ಯರ ದೇವಾಲಯಗಳ ಮಿಥುನ ಶಿಲ್ಪಗಳು ಪಾಶವೀ ಕಾಮಾತಿರೇಕದ ಅಭಿವ್ಯಕ್ತಿಯಲ್ಲ. ಮಾನವರ ಸಹಜ ಕಾಮಭಾವನೆಗಳ ಉದಾತ್ತೀಕರಣದ ದೃಶ್ಯಗಳವು. ಸ್ತ್ರೀಯ ಮೈಮಾಟದಲ್ಲಿನ ಪ್ರಕೃತಿದತ್ತ ಚೆಲುವನ್ನು ಶಿಲ್ಪಿ ಕಲ್ಲಿನಲ್ಲಿ ಕಂಡರಿಸಿದ್ದಾನೆ. ಹೆಣ್ಣು ಗಂಡಿನ ಪ್ರೇಮದ ಭಾವನೆಗಳನ್ನು ಅವರ ಅಂಗಾಂಗಗಳಲ್ಲಿ ತುಂಬಿದ್ದಾನೆ. ಕಾಮ ಬದುಕಿನಲ್ಲಿ ನಿಷಿದ್ಧವಲ್ಲ. ಅದು ಕೌಟುಂಬಿಕ ಜೀವನದ ಸತ್ವ. ನಿತ್ಯ ಜೀವನದ ಹಲವಾರು ದೃಶ್ಯಗಳನ್ನು ಕಲ್ಲಿನಲ್ಲಿ ಸೆರೆಹಿಡಿದ ಶಿಲ್ಪಿಗಳು ಜೀವನದ ಅವಿಭಾಜ್ಯ ಅಂಗವಾದ ಲೈಂಗಿಕ ಜೀವನದ ಚಟುವಟಿಕೆಗಳನ್ನು ಈ ಮೂರ್ತಿಗಳಲ್ಲಿ ಬಿಂಬಿಸಿದ್ದಾರೆ. ಲೈಂಗಿಕತೆ ಮಾನವನ ಜೀವಶಕ್ತಿ. ಆ ಬಗೆಗೆ ಪ್ರೇರಣೆ, ಆಸಕ್ತಿಯನ್ನು ಉದ್ದೀಪನಗೊಳಿಸುವಲ್ಲಿ ಈ ಶಿಲ್ಪಗಳು ನೆರವಾಗುತ್ತವೆ. ಸಂಸಾರದ ದಾಂಪತ್ಯ ಜೀವನವನ್ನು ಕುರಿತು ತಿಳುವಳಿಕೆ ನೀಡುವುದರ ಜೊತೆಗೆ ಮಿಥುನ ಶಿಲ್ಪಗಳು ದೇವಾಲಯದ ವಾಸ್ತುಅಂಗಗಳಿಗೆ ಸೌಂದರ್ಯದ ದೀಕ್ಷೆ ನೀಡಿವೆ. ಮಿಥುನ ಶಿಲ್ಪಗಳ ಉದ್ದೇಶವು ಲೈಂಗಿಕ ಚಟುವಟಿಕೆಗಳ ಬಗೆಗೆ ಶಿಕ್ಷಣ ನೀಡುವುದೆಂದೂ, ದುಷ್ಟ ದೃಷ್ಟಿಗಳಿಂದ ದೇವಾಲಯವನ್ನು ರಕ್ಷಿಸುವುದೆಂದೂ ವ್ಯಾಖ್ಯಾನಿಸಲಾಗಿದೆ.

'ಅಗ್ನಿಪುರಾಣ' ಮತ್ತು 'ಬೃಹತ್ ಸಂಹಿತೆ'ಗಳು ಮಂದಿರಗಳ ಬಾಗಿಲುವಾಡದ ಅಲಂಕಾರಕ್ಕಾಗಿ ಮಿಥುನ ಶಿಲ್ಪಗಳನ್ನು ಬಳಸಲು ಸೂಚಿಸಿವೆ. ವಾತ್ಸಾಯನ ವಿರಚಿತ 'ಕಾಮಸೂತ್ರ'ವು ಪ್ರೇಮ, ಕಾಮಗಳ ಬಗ್ಗೆ ಮಾರ್ಗದರ್ಶನ ಮತ್ತು ವಿವರಣೆ ನೀಡುತ್ತದೆ. ಪ್ರಾಚೀನ ಸಾಹಿತ್ಯದಲ್ಲಿ ಕಾಮ ಭಾವನೆಗಳು ಹೇರಳವಾಗಿ, ವಿವಿಧ ಬಗೆಯಾಗಿ ಮೂಡಿಬಂದಿವೆ. ಕಾಳಿದಾಸಾದಿ ಪ್ರಾಚೀನ ಕವಿಗಳು ತಮ್ಮ ಕಾವ್ಯಗಳಲ್ಲಿ ಭೋಗ ಜೀವನದ ಚಿತ್ರಣ ನೀಡಿದ್ದಾರೆ. ಇದು ಶಿಲ್ಪಿಗಳಿಗೆ ಪ್ರೇರಣೆ ನೀಡಿರುವುದು ಸಹಜವೇ ಆಗಿದೆ. ಹಾಗಾಗಿ ಪ್ರೇಮ ಮತ್ತು ಕಾಮಗಳು ಶಿಲ್ಪಗಳ ವಸ್ತು ಆಗಿವೆ. ಕಾಳಿದಾಸ ಕವಿಯ 'ಮೇಘದೂತ' ಹಾಗೂ 'ರಘುವಂಶ' ಕೃತಿಗಳಲ್ಲಿ ದಂಪತಿಗಳ ಮಧುಪಾನ, ಚುಂಬನ ದೃಶ್ಯಗಳು ವರ್ಣಿತವಾಗಿವೆ. ಚಲುಕ್ಯ ರೂವಾರಿಗಳು ಈ ದೃಶ್ಯಗಳನ್ನು ಶಿಲೆಯಲ್ಲಿ ಘನೀಕರಿಸಿದ್ದಾರೆ.

ಮಿಥುನ ಅಥವಾ ರಸಿಕದಂಪತಿಗಳ ಅತ್ಯುತ್ತಮ ಕಲಾಕೃತಿಗಳನ್ನು ಬಾದಾಮಿ

ಪರಿಸರದಲ್ಲಿ ಕಾಣುತ್ತೇವೆ. ಅಧ್ಯಯನದ ಅನುಕೂಲತೆಗಾಗಿ ಚಲುಕ್ಯರ ಕಾಲದ ಮಿಥುನ ಶಿಲ್ಪಗಳನ್ನು (೧.೧) ಮಧ್ಯಮಾಕಾರದ ಮಿಥುನ ಶಿಲ್ಪಗಳು ಮತ್ತು (೧.೨) ಕಿರು ಗಾತ್ರದ ಮಿಥುನ ಶಿಲ್ಪಗಳೆಂದು ವಿಂಗಡಿಸಬಹುದು. ಮೊದಲನೆಯ ಗುಂಪಿನ ಶಿಲ್ಪಗಳನ್ನು ಬಾದಾಮಿಯ ಮೂರನೆಯ ಗುಹಾಲಯದ ಬೋದಿಗೆಗಳಲ್ಲಿ ಮತ್ತು ನಾಗರಾಳ, ಪಟ್ಟದಕಲ್ಲ, ಐಹೊಳೆಯ ದೇಗುಲಗಳ ಕಂಬ ಇಲ್ಲವೆ ಅರ್ಧಕಂಬಗಳಲ್ಲಿ ಕೆತ್ತಲಾಗಿದೆ. ಅವಾವೂ ಮೈಥುನ ಶಿಲ್ಪಗಳಲ್ಲ ಎಂಬುದು ಗಮನಾರ್ಹ ಸಂಗತಿ. ಇಲ್ಲಿ ಕಂಡುಬರುವ ದಂಪತಿಗಳೆಲ್ಲ ಕಾಮಾಸಕ್ತ ದಂಪತಿಗಳು ಅಷ್ಟೆ.

**೧.೧. ಮಧ್ಯಮಾಕಾರದ ಮಿಥುನ ಶಿಲ್ಪಗಳು :**

ಇವನ್ನು ಬೋದಿಗೆಯಲ್ಲಿನ ಮಿಥುನ ಶಿಲ್ಪಗಳು ಮತ್ತು ಕಂಬಗಳಲ್ಲಿನ ಮಿಥುನ ಶಿಲ್ಪಗಳು–ಎಂಬ ಉಪಶೀರ್ಷಿಕೆಗಳಲ್ಲಿ ವಿವರವಾಗಿ ಪರಿಶೀಲಿಸಬಹುದು.

**೧.೧.೧ ಬೋದಿಗೆಯಲ್ಲಿನ ಮಿಥುನ ಶಿಲ್ಪಗಳು**

ಬಾದಾಮಿಯಲ್ಲಿ ಮಂಗಲೇಶನು ಕೊರೆಯಿಸಿದ ಮಹಾವಿಷ್ಣುಗೃಹದ ಬೋದಿಗೆಗಳಲ್ಲಿ ಪ್ರಕಟಗೊಂಡ ಮಿಥುನ ಶಿಲ್ಪಗಳು ಅತ್ಯಂತ ವೈಶಿಷ್ಟಪೂರ್ಣ ರಸಿಕದಂಪತಿ ಶಿಲ್ಪಗಳೆನಿಸಿವೆ. ಅವನ್ನು ಪ್ರತ್ಯೇಕವಾಗಿ ಅಭ್ಯಸಿಸಬಹುದು. ಒಟ್ಟು ಒಂಬತ್ತು ರಸಿಕ ದಂಪತಿಗಳು ಬೋದಿಗೆಗಳನ್ನು ಅಲಂಕರಿಸಿದ್ದಾರೆ. ಇವುಗಳಿಂದಾಗಿ ಇಡೀ ಗುಹಾಲಯವು ಅತ್ಯಂತ ಮನೋಹರವಾಗಿ ರೂಪುಗೊಂಡಿದೆ. ಕ್ರಿ.ಶ.೫೭೮ರಲ್ಲಿ ಕೆತ್ತನೆಗೊಂಡ ಈ ಶಿಲ್ಪಗಳು ದಕ್ಷಿಣ ಭಾರತದಲ್ಲಿಯೇ ಅತೀ ಪ್ರಾಚೀನ ಬೋದಿಗೆ ಶಿಲ್ಪಗಳೆಂಬ ಹೆಗ್ಗಳಿಕೆಗೆ ಪಾತ್ರವಾಗಿವೆ. ಕಲಾ ಪ್ರೌಢಿಮೆಯ ದೃಷ್ಟಿಯಿಂದಲೂ ಇವು ಮೌಲಿಕ ಕೆತ್ತನೆಗಳಾಗಿವೆ. ಅವನ್ನು ಒಂದೊಂದಾಗಿ ಇಲ್ಲಿ ಅವಲೋಕಿಸೋಣ.



ಚಿತ್ರ ೪೧. ಮಹಾವಿಷ್ಣು ಗೃಹ, ಬೋದಿಗೆ, ರಸಿಕ ದಂಪತಿ

**ಪೂರ್ವದ ಅರೆಗಂಬ, ಪಶ್ಚಿಮ ಬದಿ**

ಈ ಬೋದಿಗೆಯಲ್ಲಿ ರಸಿಕ ದಂಪತಿಗಳಿಬ್ಬರು ಗಿಡದ ಅಡಿಯಲ್ಲಿ ನಿಂತಿದ್ದಾರೆ. ಗಿಡದ ತುಂಬ ಹೂಗಳಿವೆ. ಕಿರೀಟಧಾರಿಗಳಾದ್ದರಿಂದ ಅರಸು ದಂಪತಿಗಳಿರಬಹುದು. ಒಬ್ಬರಿಗೊಬ್ಬರು ತೋಳನ್ನು ಬಳಸಿಕೊಂಡು ಸಾಮೀಪ್ಯವನ್ನು ಸುಖಿಸುತ್ತಿದ್ದಾರೆ. ಮುಗುಳ್ನಗೆಗಳು, ಮೇಲಿನ ಕುಸುಮಗಳು ಅವರ ಬದುಕಿನ ಮಾಧುರ್ಯವನ್ನು ಬಿಂಬಿಸುತ್ತಿವೆ.

**ಪೂರ್ವದ ಅಂಚಿನಿಂದ ಕಂಬ ೨. ಪಶ್ಚಿಮ ಬದಿ**

ಶ್ರೀಮಂತ ಕುಲದ ದಂಪತಿಗಳು ಮಾವಿನ ಮರದ ಅಡಿಯಲ್ಲಿ ನಿಂತಿರುವಂತೆ ಶಿಲ್ಪವನ್ನು ಕಂಡರಿಸಲಾಗಿದೆ. ಮಾವಿನ ಹಣ್ಣುಗಳು ಅವರ ಬದುಕಿನ ವಸಂತಕಾಲವನ್ನು ಸೂಚಿಸುತ್ತಿವೆ. ಪ್ರೇಮ ಸಲ್ಲಾಪದಲ್ಲಿ ನಿಷ್ಣಾತನಾದ ಈ ಪುರುಷನು ಸ್ತ್ರೀಯ ಸ್ತನ ಸ್ಪರ್ಶವನ್ನು ಆನಂದಿಸುತ್ತಿರುವಂತೆ ಶಿಲ್ಪಿಸಲಾಗಿದೆ. ಅವಳ ನಡುಪಟ್ಟಿ ಸಡಿಲಗೊಂಡಿದೆ. ಪ್ರತಿಯಾಗಿ ಅವಳೂ ಕಾಮಾಸಕ್ತಳಾದುದನ್ನು ಶಿಲ್ಪಿಯು ಸಂಕೇತಿಸಿದ್ದಾನೆ. ಆತನ ಅಧೋವಸ್ತ್ರವನ್ನು ಆಕೆ ಸಡಿಲಿಸುತ್ತಿರುವಂತೆ ತೋರಿಸಲಾಗಿದೆ. ಶಿಲ್ಪಿಯು ಕಾಮ ಭಾವನೆಯನ್ನು ದೃಶ್ಯರೂಪಕ್ಕೆ ತಂದ ಜಾಣ್ಮೆ ಪ್ರಶಂಸನೀಯವಾಗಿದೆ.**(ಚಿತ್ರ ೪೧)**

**ಕಂಬ ೩, ಪೂರ್ವ ಬದಿ**

ಮರದ ತುಂಬೆಲ್ಲ ಕುಸುಮಗಳಿವೆ. ಅರಸು ದಂಪತಿಗಳು ಗಂಭೀರ ಸಂಭಾಷಣೆಯಲ್ಲಿ ತೊಡಗಿದ್ದಾರೆ. ತನ್ನ ಕೆನ್ನೆಯ ಮೇಲೆ ಬೆರಳನ್ನಿಟ್ಟುಕೊಂಡು

ಮಹಿಳೆ ಏನೋ ಸಮಸ್ಯೆಯೊಂದನ್ನು ಮುಂದಿಡುತ್ತಿದ್ದಾಳೆ. ಭಾರತೀಯ ನಾರಿಯ ವಿಶಿಷ್ಟ ಆಂಗಿಕ ಅಭಿವ್ಯಕ್ತಿ ಇದು. ಶಿಲ್ಪಿಯ ವೀಕ್ಷಣಾ ಕೌಶಲ್ಯವನ್ನು ಮನಗಾಣಬಹುದು. ಅವಳನ್ನು ಸಂತೈಸುವ ಹಾಗೆ ಆತ ಭರವಸೆಯ ಕೈಯನ್ನು ಎತ್ತಿದ್ದಾನೆ. ಒಬ್ಬ ಪರಿಣಿತ ರೂವಾರಿಯ ಕಲಾಕೃತಿ ಇದಾಗಿದೆ. ಎತ್ತರ ನಿಲುವಿನ, ತಿಳು ದೇಹದ ಆ ಹೆಣ್ಣಿನ ಮೈಮಾಟದ ಮಾರ್ದವ ನಯವಾಗಿ ವ್ಯಕ್ತವಾಗಿದೆ. **(ಚಿತ್ರ ೪೨)**

**ಕಂಬ ೩, ಪಶ್ಚಿಮ ಬದಿ**

ಗಿಡದಡಿಯಲ್ಲಿ ಪುರುಷನೊಬ್ಬ ಪುಷ್ಪವೊಂದನ್ನು ಬಲಗೈಯಲ್ಲಿ ಹಿಡಿದುಕೊಂಡು ನಿಂತಿದ್ದಾನೆ. ಪಕ್ಕದಲ್ಲಿರುವ ಪತ್ನಿಯ ಹೆಗಲಮೇಲೆ ಎಡಗೈಯನ್ನರಿಸಿದ್ದಾನೆ. ಅದನ್ನು ಆಕೆ ತನ್ನ ಎಡಗೈಯಿಂದ ಹಿಡಿದುಕೊಂಡಿದ್ದಾಳೆ. ಬಲಗೈಯಿಂದ ಆತನ ಅಧೋವಸ್ತ್ರವನ್ನು ಸಡಿಲಿಸಲು ಹವಣಿಸುತ್ತಿದ್ದಾಳೆ. ಆಕೆಯ ಆಶೆಯು ಕಣ್ಣುಗಳಲ್ಲಿ ಅಭಿವ್ಯಕ್ತವಾಗಿದೆ. ಅವಳ ಭಾವ ಸೂಕ್ಷ್ಮತೆಯನ್ನು ರೂವಾರಿಯು ಸೂಕ್ಷ್ಮವಾಗಿಯೇ ಬಿಡಿಸಿ ತೋರಿಸಿದ್ದಾನೆ. **(ಚಿತ್ರ ೪೩)**

**ಕಂಬ ೫, ಪೂರ್ವ ಬದಿ**

ಈ ಬೋದಿಗೆ ಶಿಲ್ಪದಲ್ಲಿ ವ್ಯಕ್ತಿಯೊಬ್ಬ ಸ್ತ್ರೀಯನ್ನು ತಬ್ಬಿಕೊಂಡು ಎಡಗೈಯನ್ನು ಆಕೆಯ ಬೆನ್ನಿನ ಹಿಂದಿನಿಂದ ಚಾಚಿ ಆಕೆಯ ಎಡಸ್ತನವನ್ನು ಸ್ಪರ್ಶಿಸುವಲ್ಲಿ ಆತನ 'ಕಳ್ಳತನ' ವ್ಯಕ್ತವಾಗಿದೆ. ಒಲವಿನಿಂದ ಇದಕ್ಕೆ ಸ್ಪಂದಿಸುತ್ತ ಸ್ತ್ರೀಯು ಬಲಗೈಯಿಂದ ಆತನನ್ನು ಹುಸಿಕೋಪದಿಂದ ನಸು ತಳ್ಳುತ್ತಿರುವಂತೆ ಶಿಲ್ಪಿಯು ಚಿತ್ರಿಸಿದ್ದಾನೆ. ಸ್ತ್ರೀ–ಪುರುಷರ ಅಮೂರ್ತ ಕಾಮಭಾವನೆಗಳು ಕಲ್ಲಿನಲ್ಲಿ ಘನರೂಪ ಪಡೆದಿವೆ. ಇಲ್ಲಿ ಶಿಲ್ಪಿಯ ಕಲಾ ಘನತೆ ಹಾಗೂ ರಸಿಕ ದಂಪತಿಗಳ ಭಾವ ಸೂಕ್ಷ್ಮತೆ ವ್ಯಕ್ತವಾಗಿವೆ.

**ಕಂಬ ೫, ಪಶ್ಚಿಮ ಬದಿ**

ಶಿಲ್ಪ ನಿರ್ವಹಣೆಯ ದೃಷ್ಟಿಯಿಂದ ಗಮನಾರ್ಹವಾದ ಬೋದಿಗೆ ಇದು. ವಾಡಿಕೆಯಂತೆ ಈ ಬೋದಿಗೆಯಲ್ಲಿ ಕೂಡ ಮರದಡಿಯಲ್ಲಿ ರಸಿಕ ದಂಪತಿಗಳ ಶಿಲ್ಪವನ್ನು ಕಂಡರಿಸಲಾಗಿದೆ. ಶಿಲ್ಪದ ಮೇಲರ್ಧವು ಒಬ್ಬ ನಿಷ್ಣಾತ ಕಲಾವಿದನ ಕೈವಾಡವೆನಿಸಿದರೆ ಕೆಳ ಅರ್ಧಭಾಗವು ಬಡ ಶಿಲ್ಪಿಯ ವಿಫಲ ಪ್ರಯತ್ನವೆನಿಸುತ್ತದೆ. ಒಂದು ಶಿಲ್ಪದ ಕಂಡರಣೆಯಲ್ಲಿ ಇಬ್ಬರು ಶಿಲ್ಪಿಗಳು ತೊಡಗಿರುವ ಸಾಧ್ಯತೆ ಇದೆ. ಅದಕ್ಕೆ ಇದೊಂದು ಉದಾಹರಣೆ. ಈ ಪ್ರೇಮಿಗಳೀರ್ವರ ಮುಖಗಳನ್ನು ರೂಪಿಸುವಲ್ಲಿ ರೂವಾರಿ ತೋರಿದ ಕೌಶಲ ಅಗಾಧವಾದುದು. ಈರ್ವರ ಕಣ್ಣು, ಮೂಗು, ತುಟಿಗಳು ಕಲಾತ್ಮಕವಾಗಿ ಮೂಡಿ ಬಂದಿವೆ. ಈ ಬಗೆಯ ಕೆತ್ತನೆ ಅಪರೂಪವಾದದ್ದು. ಶಿಲ್ಪದ ಕಂಡರಣೆ ಮೇಲಿನಿಂದ ಪ್ರಾರಂಭಗೊಂಡು ಪಾದ, ಪೀಠವನ್ನು ಪೂರ್ಣಗೊಳಿಸುವುದರೊಂದಿಗೆ ಕೊನೆಗೊಳ್ಳುತ್ತದೆ. ಈ ಶಿಲ್ಪದ ಕೆತ್ತನೆಯನ್ನು ಅರ್ಧ ಮಾಡಿದ ರೂವಾರಿ ಕಾರಣಾಂತರದಿಂದ ಬಿಟ್ಟುಕೊಟ್ಟಂತೆ ತೋರುತ್ತದೆ. ಒಬ್ಬ ಸಾಧಕ ಶಿಲ್ಪಿಯು ಮುಂದುವರಿಸಿದನೆಂದು ಭಾವಿಸಬಹುದು. ಶಿಲ್ಪದ ಪ್ರಮಾಣವನ್ನು ಉಳಿಸಿಕೊಳ್ಳುವಲ್ಲಿ ಶಿಲ್ಪಿ ಎಡವಿದ್ದಾನೆ. ಕಾಲುಗಳ ನಿರೂಪಣೆಯಲ್ಲಿಯೂ ಅಯಶಸ್ವಿಯಾಗಿದ್ದಾನೆ.

ಮಧುಪಾನವು ಶಿಲ್ಪದ ವಸ್ತುವಾಗಿದೆ. ಸ್ತ್ರೀಯು ಮಧುಪಾತ್ರೆಯನ್ನು ಹಿಡಿದುಕೊಂಡು ಪ್ರಿಯಕರನ ಪಕ್ಕದಲ್ಲಿ ನಿಂತಿರುವಳು. ಅಂದಿನ ಕೌಟುಂಬಿಕ



ಚಿತ್ರ ೪೨, ಕಂಬ ೩, ಪೂರ್ವಬದಿ



ಚಿತ್ರ ೪೩. ಕಂಬ ೩, ಪಶ್ಚಿಮ ಬದಿ

ಜೀವನದಲ್ಲಿ ಮಧುಸೇವನೆ ಸಹಜವೆನಿಸಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಇಂತಹ ಹಲವಾರು ಸನ್ನಿವೇಶಗಳನ್ನು ಚಲುಕ್ಯರ ಶಿಲ್ಪಗಳಲ್ಲಿ ಕಾಣುತ್ತೇವೆ. **(ಚಿತ್ರ ೪೪)**



**ಚಿತ್ರ ೪೪. ಕಂಬ ೫, ಪಶ್ಚಿಮ ಬದಿ**

**ಕಂಬ ೬, ಪೂರ್ವ ಬದಿ**

ಈ ಬೋದಿಗೆಯಲ್ಲಿ ಪಾಣಿಗ್ರಹಣದ ದೃಶ್ಯವನ್ನು ಕಂಡರಿಸಲಾಗಿದೆ. ನವ ದಂಪತಿಗಳು ಶ್ರೀಮಂತ ವೇಷ ಭೂಷಣಗಳಿಂದ ಅಲಂಕೃತರಾಗಿದ್ದಾರೆ. ವಧು ಕಸೂತಿಯ ಚಿತ್ತಾರವುಳ್ಳ ಸೀರೆ ಧರಿಸಿ ಬಗೆಬಗೆಯ ಆಭರಣಗಳಿಂದ ಸಿಂಗಾರಗೊಂಡಿದ್ದಾಳೆ. ಪತಿ ಬಲಗೈಯಿಂದ ಪತ್ನಿಯ ಬಲಗೈಯನ್ನು ಸ್ವೀಕರಿಸುತ್ತಿದ್ದಾನೆ. ಎಡಗೈಯನ್ನು ಆಕೆಯ ಎಡ ಹೆಗಲಮೇಲೆ

ಇರಿಸಿದ್ದಾನೆ. ಪತ್ನಿಯ ಇನ್ನೊಂದು ಕೈಯಲ್ಲಿ ಪುಟ್ಟ ಹೂಬುಟ್ಟಿ ಇದೆ. ತನ್ನ ಹೊಸ ಮನೆಗೆ ಆಕೆ ಸೌರಭವನ್ನು ತರುವುದನ್ನು ಶಿಲ್ಪಿ ಕಾವ್ಯಮಯವಾಗಿ ಸೂಚಿಸಿದ್ದಾನೆ. **(ಚಿತ್ರ ೪೫)**



ಚಿತ್ರ ೪೫. ಕಂಬ ೬, ಪೂರ್ವ ಬದಿ

**ಪಶ್ಚಿಮದ ಅರೆಗಂಬ ಪೂರ್ವಬದಿ**

ವಾತ್ಸಾಯನನು ತನ್ನ ಕೃತಿಯಲ್ಲಿ ಲತಾವೇಷ್ಟಿತಕ ಎಂಬ ಕಾಮಕ್ರೀಡೆಯ ಭಂಗಿಯನ್ನು ವಿವರಿಸುತ್ತಾನೆ. ಆತ ಬಣ್ಣಿಸುವ ಹನ್ನೆರಡು ಬಗೆಯ ಆಲಿಂಗನಗಳಲ್ಲಿ ಲತಾವೇಷ್ಟಿತಕ ಒಂದು. ನಿಂತಿರುವ ಪುರುಷನನ್ನು ಸ್ತ್ರೀಯು ಮರವನ್ನು ಹತ್ತುವ ಬಳ್ಳಿಯಂತೆ ಆತನನ್ನು ಬರಸೆಳೆದು ತಬ್ಬಿಕೊಳ್ಳುತ್ತಾಳೆ. ಇದು ಲತಾವೇಷ್ಟನ ಎಂಬ ಆಲಿಂಗನ. ಇದರ ದೃಶ್ಯರೂಪವೇ ಈ ಬೋದಿಗೆಯ ಶಿಲ್ಪವಾಗಿದೆ. **(ಚಿತ್ರ ೪೬)**

ಈ ಶಿಲ್ಪದ ನಿರೂಪಣೆ ಹೀಗಿದೆ– ಕಾಮಾಸಕ್ತಳಾದ ಸ್ತ್ರೀಯು ಪುರುಷನ ಮುಖವನ್ನು ತನ್ನತ್ತ ಸೆಳೆಯುತ್ತಾ ಚುಂಬನಕ್ಕಾಗಿ ಹಾತೊರೆಯುತ್ತಿದ್ದಾಳೆ. ಅವಳ ಅಂಗಾಂಗಗಳಲ್ಲಿ ಭೋಗಾಸಕ್ತಿಯ ರಭಸ ವ್ಯಕ್ತವಾಗಿದೆ. ಸ್ತ್ರೀಯು ತನ್ನ ಎಡಗಾಲನ್ನು ಆತನ ಟೊಂಕದ ವರೆಗೆ ಎತ್ತಿ ಕಾಮಕ್ರೀಡೆಗಾಗಿ ಆಗ್ರಹಿಸುತ್ತಿದ್ದಾಳೆ. ಆಕೆ ಸಹನೆಯ ಎಲ್ಲೆಯನ್ನು ದಾಟಿದ್ದಾಳೆ. ಚದುರಿದ ತಲೆಗೂದಲು ಅವಳ ಭಾವನೆಯ ತೀವ್ರತೆಯನ್ನು ಚೆನ್ನಾಗಿ ಚಿತ್ರಿಸುತ್ತದೆ. ಶಿಲ್ಪ ನಿರೂಪಣೆಯ ಚಾತುರ್ಯ ಹಾಗೂ ಸಂಯೋಜನಾ ಜಾಣ್ಮೆಯಿಂದಾಗಿ ಇದೊಂದು ಶ್ರೇಷ್ಠ ಕಲಾಕೃತಿಯಾಗಿದೆ; ಆ ಅನಾಮಿಕ ರೂವಾರಿಯ ಪ್ರಾವೀಣ್ಯದ ಪ್ರತೀಕವಾಗಿದೆ.

**ವರಾಹ ಶಿಲ್ಪದ ಎಡಬದಿಯ ಅರೆಗಂಬ**

ಗಿಡದ ಅಡಿಯಲ್ಲಿ ರಾಜದಂಪತಿಗಳನ್ನು ಶಿಲ್ಪಿಸಲಾಗಿದೆ. ಇಬ್ಬರೂ ನಿರುತ್ಸಾಹ ಭಾವದಲ್ಲಿದ್ದಾರೆ. ಅರಸಿ ಹೆಚ್ಚು ಖಿನ್ನಳಾಗಿರುವಂತೆ ತೋರುತ್ತದೆ. ಬಾಯಿಯ ಹತ್ತಿರ ಕೈಯನ್ನು ಹಿಡಿದು ದುಃಖದ ಸಮಾಚಾರವನ್ನು ಹೇಳುವಂತೆ ಭಾಸವಾಗುತ್ತದೆ. ಅವಳ ಪಕ್ಕದಲ್ಲಿರುವ ಸೇವಕಿ ಆಶ್ಚರ್ಯದಿಂದ ಕಣ್ಣರಳಿಸಿ ಕೇಳುತ್ತಿದ್ದಾಳೆ. ಅದು ಸಖೇದಾಶ್ಚರ್ಯಕರ ಸಮಾಚಾರವಿರಬಹುದು. ವಿಭಿನ್ನ ಬಗೆಯ ಭಾವಾಭಿವ್ಯಕ್ತಿಗೆ ಈ ಶಿಲ್ಪವನ್ನು ಬಳಸಿಕೊಂಡಿರುವುದೊಂದು ವಿಶೇಷ.

ಹೀಗೆ ಈ ಬೋದಿಗೆಗಳು ವಾಸ್ತು ಅಂಗಗಳಾಗಿರುವುದರ ಜೊತೆಗೆ ಅಲಂಕಾರ ಶಿಲ್ಪಗಳಾಗಿ ಮೂಡಿಬಂದಿವೆ. ಸಮಕಾಲೀನ ಜೀವನ ಚಿತ್ರಣದ ಪ್ರತಿಬಿಂಬಗಳಾಗಿವೆ. ಉಡುಗೆ ತೊಡುಗೆಗಳಲ್ಲಿ ಪ್ರಾಚೀನರು ತೋರ್ಪಡಿಸಿದ ಮನೋವಿಲಾಸಗಳ ಶಿಲ್ಪಿತ ದಾಖಲೆಗಳಾಗಿ ಈ ಕಲಾಕೃತಿಗಳು ಇತಿಹಾಸ ರಚನೆಗೆ ನೆರವಾಗಿವೆ. ಈ ಹಿಂದೆ ಪ್ರಸ್ತಾಪಿಸಲಾದಂತೆ ಬೋದಿಗೆಗಳಲ್ಲಿ ಮೂಡಿಬಂದ ರಸಿಕ ದಂಪತಿಗಳು ಮಧ್ಯಮ ಗಾತ್ರದವಾಗಿವೆ. ಇವುಗಳು ಪರಿಮಿತ ಸಂಖ್ಯೆಯಲ್ಲಿವೆ. ಕಿರುಗಾತ್ರದ ಮಿಥುನ ಶಿಲ್ಪಗಳು ಚಲುಕ್ಯ ಗುಹಾಲಯಗಳಲ್ಲಿ ಅಪರಿಮಿತ ಸಂಖ್ಯೆಯಲ್ಲಿ ಚಿತ್ರಣಗೊಂಡಿವೆ. ಇವು ಗುಹಾಲಯದ ಕಂಬ, ರಾಚನಿಕ ಮಂದಿರಗಳ ಕಂಬ, ಮೇಲ್ಗಂಡು ಇಲ್ಲವೆ ಬಾಗಿಲುವಾಡಗಳಲ್ಲಿ ಬಿಂಬಿತವಾಗಿವೆ. ಪ್ರಾತಿನಿಧಿಕವಾಗಿ ಕೆಲವನ್ನು ಇಲ್ಲಿ ಗಮನಿಸಬಹುದು.

**೧.೧.೨. ಕಂಬಗಳಲ್ಲಿನ ಮಿಥುನ ಶಿಲ್ಪಗಳು**

ಚಲುಕ್ಯರ ವಾಸ್ತುಕಲೆಯಲ್ಲಿ ಮಧ್ಯಮಕಾರದ ಮಿಥುನ ಶಿಲ್ಪಗಳು ಗುಹಾಲಯದ ಬೋದಿಗೆಗಳನ್ನು ಅಲಂಕರಿಸಿದರೆ, ರಾಚನಿಕ ಮಂದಿರಗಳಲ್ಲಿ ಕಂಬಗಳನ್ನು ಸಿಂಗರಿಸಿರುವುದು ಕಂಡುಬರುತ್ತದೆ. ಚಲುಕ್ಯ ಪೂರ್ವದ ಗುಪ್ತಕಾಲೀನ ದೇವಾಲಯಗಳ ಮಿಥುನ ಶಿಲ್ಪಗಳು ಈ ರೂವಾರಿಗಳಿಗೆ ಪ್ರೇರಣೆ ನೀಡಿರಬಹುದು. ಭಾರ್ಹುತ್, ಸಾಂಚಿಯ ಶಿಲ್ಪಗಳು ಮಿಥುನ ಶಿಲ್ಪಗಳ ಪರಂಪರೆಯ ಪ್ರಾಚೀನತೆಗೆ ಸಾಕ್ಷಿಯಾಗಿವೆ.



ಚಿತ್ರ ೪೬. 'ಲತಾ ವೇಷ್ಟೀತಕ'



ಚಿತ್ರ ೪೭. ಕಂಬ, ನಾಗನಾಥ ದೇವಾಲಯ

ಚಲುಕ್ಯರ ರಾಚನಿಕ ದೇವಾಲಯದ ಕಂಬಗಳ ಮೇಲೆ ಮಿಥುನ ಶಿಲ್ಪಗಳು ಕೆತ್ತನೆಗೊಂಡಿವೆ. ನಾಗನಾಥ ಕೊಳ್ಳದಲ್ಲಿ ಏಕಾಕಿಯಾಗಿ ನಿಂತಿರುವ ನಾಗನಾಥ ದೇವಾಲಯದ ಮುಖ ಮಂಟಪದ ಕಂಬಗಳ ಮೇಲೆ ಮಧ್ಯಮ ಗಾತ್ರದ ಮಿಥುನ ಶಿಲ್ಪಗಳಿವೆ. ಪ್ರಾಯಶಃ ಇವುಗಳ ಮುಂಚೆಯೇ ಆಲಂಪುರದ ಸ್ವರ್ಗಬ್ರಹ್ಮ ಮತ್ತು ವಿಶ್ವಬ್ರಹ್ಮ ದೇಗುಲಗಳಲ್ಲಿ ಮಿಥುನ ಶಿಲ್ಪಗಳು ಸೃಷ್ಟಿಗೊಂಡಿವೆ. ಅವುಗಳ ಪೋಷಕರೂ ಚಲುಕ್ಯರೇ. ಅಲ್ಲಿ ಅವು ಕಾಣಿಸಿಕೊಂಡದ್ದು ಸಭಾಮಂಟಪದ ಗೋಡೆಗಳ ಮೇಲೆ, ಕಂಬಗಳಲ್ಲಿ ಅಲ್ಲ. ಅದಾಗಿ ಕರ್ನಾಟಕದಲ್ಲಿ ಕಂಬಗಳನ್ನು ಮಿಥುನ ಶಿಲ್ಪಗಳಿಂದ ಅಲಂಕರಣ ಮಾಡುವ ಮೊದಲ ಪ್ರಯೋಗ ನಡೆದದ್ದು ನಾಗನಾಥ ದೇವಾಲಯದಲ್ಲಿ ಎಂದೆನ್ನಬಹುದು. (**ಚಿತ್ರ ೪೭**) ಆ ಬಳಿಕ ಐಹೊಳೆ ಪಟ್ಟದಕಲ್ಲಿನ ದೇಗುಲಗಳೂ ಕೂಡ ಇಂಥ ಶಿಲ್ಪಗಳಿಂದ ಶೋಭಿತವಾದವು.

ಈ ದೇವಾಲಯದ ಮುಖಮಂಟಪದ ನಾಲ್ಕುಕಂಬಗಳಲ್ಲಿ ಒಟ್ಟು ಆರು ಕಾಮಾಸಕ್ತ ದಂಪತಿಗಳ ಉಬ್ಬುಶಿಲ್ಪಗಳಿವೆ. ಅವುಗಳಲ್ಲಿ ಉತ್ತರ ದಿಕ್ಕಿನ ಎರಡು ಕಂಬಗಳಲ್ಲಿ ಎರಡು ಜೋಡಿಗಳ ಕೆತ್ತನೆ ಅಪೂರ್ಣವಾಗಿದೆ. ಉಳಿದ ನಾಲ್ಕು ಮಿಥುನ ದಂಪತಿ ಮೂರ್ತಿಗಳು ಗಮನಾರ್ಹವಾಗಿದೆ. ಆದಾಗ್ಯೂ ಗುಹಾದೇವಾಲಯದ ಮಿಥುನ ಶಿಲ್ಪಗಳ ನಯಗಾರಿಕೆ, ಕಲಾಸೂಕ್ಷ್ಮತೆ ಇಲ್ಲಿ ಕಾಣಸಿಗದು. ಆ ಗುಹಾಲಯದ ಕಲೆಯನ್ನು ಅನುಕರಿಸುವ ಪ್ರಯತ್ನವಿದೆ. ಪುರುಷರು ಧರಿಸಿದ ಕಿರೀಟಗಳು ಇದನ್ನು ಸಮರ್ಥಿಸುತ್ತವೆ. ಸ್ತ್ರೀಯರು ಆಕರ್ಷಕ ಕೇಶ ವಿನ್ಯಾಸದಿಂದ ಅಲಂಕೃತರು. ಈ ದಂಪತಿಗಳ ಆಲಂಗನದಲ್ಲಿ ಲಾವಣ್ಯವಿದೆ. ಕಾಮದಾವೇಶವಿಲ್ಲ. ಈಶಾನ್ಯ ಕಂಬದ ದಕ್ಷಿಣ ಬದಿಯಲ್ಲಿ ಬಿಡಿಸಲಾದ ದಂಪತಿ ಶಿಲ್ಪ ನಸು ಭಿನ್ನವಾಗಿದೆ. ಸ್ತ್ರೀಯು ಪಾನಮತ್ತಳಾಗಿ ಸಮತೋಲನವನ್ನು ಕಳೆದುಕೊಂಡಿದ್ದಾಳೆ. ಪುರುಷನು ಆಕೆ ಬೀಳುವುದನ್ನು ತಡೆದು ಹಿಡಿದಿದ್ದಾನೆ. ಅಂದಿನ ಸಾಮಾಜಿಕ ಜೀವನದ ಒಂದು ನೈಜ ಚಿತ್ರಣವಿದು. ದಂಪತಿಗಳ ಮಧುಪಾನ ದೃಶ್ಯವು ಚಲುಕ್ಯರ ಹಲವಾರು ಶಿಲ್ಪಗಳಿಗೆ ವಸ್ತುವಾಗಿದೆ.

ಆಲಂಪುರದ ಸ್ವರ್ಗ ಬ್ರಹ್ಮದೇವಾಲಯವೊಂದು ವಿಕಸಿತ ದೇವಾಲಯವಾಗಿದ್ದು ಅಲ್ಲಿ ಇಪ್ಪತ್ತು ರಸಿಕ ದಂಪತಿಗಳನ್ನು ಹೊರ ಗೋಡೆಯಲ್ಲಿ ಕೆತ್ತಲಾಗಿದೆ. ಅಲ್ಲಿಯೂ ಕೂಡ ಮಧುಪಾನದಿಂದ ಮತ್ತರಾದ ಸ್ತ್ರೀಯರ ಚಿತ್ರಣವಿದೆ.



ಚಿತ್ರ ೪೮. ಹುಚ್ಚಪ್ಪಯ್ಯ ಮಠ, ಐಹೊಳೆ

ಐಹೊಳೆಯ ಹುಚ್ಚಪ್ಪಯ್ಯಮಠದ ಪ್ರವೇಶದ್ವಾರದ ಎಡಭಾಗದ ಗೋಡೆಯಲ್ಲಿ ಎರಡು ಅರೆಗಂಬಗಳ ಮೇಲೆ ಉಬ್ಬು ಶಿಲ್ಪಗಳಾಗಿ ರಸಿಕ ದಂಪತಿಗಳು ಶಿಲ್ಪತರಾಗಿದ್ದಾರೆ. ಒಂದರಲ್ಲಿ ಪುರುಷನು ಪತ್ನಿಗೆ ಮುತ್ತಿನ ಬಳೆಯನ್ನು ತೊಡಿಸುತ್ತಿರುವಂತೆ ಕೆತ್ತನೆ ಮಾಡಲಾಗಿದೆ. (**ಚಿತ್ರ ೪೮**) ಆಕೆಯು ಹಲವಾರು ಬಗೆಯ ಆಭರಣಗಳಿಂದ ಅಲಂಕೃತರಾಗಿರುವಳು. ಪ್ರಾಯಶಃ ಅವಳಿಗೆ ಚಿನ್ನಾಭರಣಗಳ ವ್ಯಾಮೋಹ ಇದ್ದಂತೆ ತೋರುತ್ತದೆ. ಇನ್ನೊಂದು ರಸಿಕ ಜೋಡಿ ನಾಟಕೀಯವಾಗಿ ಚಿತ್ರಣಗೊಂಡಿದೆ. ಪ್ರಿಯಕರನು ಪ್ರೇಯಸಿಯನ್ನು ತನ್ನತ್ತ ಬರ ಸೆಳೆಯುತ್ತಿದ್ದಾನೆ. ನಿಲುವಿನಲ್ಲಿ ಮೋಡಿಯಿದೆ. ಅವನ ನಗುವಿನಲ್ಲಿ ಮೋಹಕತೆ ಇದೆ. ಅವರ ಮುಖಗಳಲ್ಲಿ ಸಂತೋಷ ಲಾಸ್ಯವಾಡುತ್ತಿದೆ.

ಉತ್ತರಗೋಡೆಯ ಈಶಾನ್ಯ ತುದಿಯಲ್ಲಿ ಇನ್ನೊಂದು ರಸಿಕ ಜೋಡಿ ಇದೆ. ಇಬ್ಬರೂ ಆಭರಣ ಭೂಷಿತರು. ಸ್ತ್ರೀಯು ಪುರುಷನನ್ನು ಗಾಢವಾಗಿ ಆಲಂಗಿಸಿದ್ದಾಳೆ. ಎಡಗೈಯಿಂದ ಆತನ ತೊಡೆಯನ್ನು ಸ್ಪರ್ಶಿಸುತ್ತ ಕ್ರೀಡೆಗಾಗಿ ಸ್ವಾಗತಿಸುತ್ತಿದ್ದಾಳೆ. ತನ್ನ ದೇಹದ ಭಾರವನ್ನು ಪುರುಷನ ಮೇಲೆ ಹಾಕುವ ಹವಣಿಕೆಯಲ್ಲಿದ್ದಾಳೆ. ಇಬ್ಬರೂ ಆನಂದ ಪರವಶರಾದಂತೆ ಶಿಲ್ಪಿ ನಿರೂಪಿಸಿದ್ದಾನೆ.

ಪೂರ್ವದ ಗೋಡೆಯ ಕಂಬವೊಂದರಲ್ಲಿ ಇನ್ನೊಂದು ಚಿತ್ತಾಕರ್ಷಕ ದಂಪತಿ ಶಿಲ್ಪವೊಂದಿದೆ. ಸ್ತ್ರೀ ಕಾಮಾತುರದಲ್ಲಿದ್ದಾಳೆ. ತನ್ನ ಎಡಗಾಲವನ್ನು ಎತ್ತಿ ಆತನ ಟೊಂಕದ

ವರೆಗೆ ಮೊಳಕಾಲನ್ನು ಚಾಚಿದ್ದಾಳೆ. ಪುರುಷನು ಅದಕ್ಕೆ ಸಹಕರಿಸುತ್ತ ತನ್ನ ಬಲಗೈಯಿಂದ ಅದನ್ನು ತನ್ನತ್ತ ಎಳೆದು ಕೊಳ್ಳುತ್ತಿದ್ದಾನೆ. ಎಡಗೈಯಿಂದ ಬೆನ್ನನ್ನು ಬಾಚಿಕೊಂಡು ಅವಳ ತೋರುಮೊಲೆಯ ಸ್ಪರ್ಶವನ್ನು ಸುಖಿಸುತ್ತಿದ್ದಾನೆ. ಪ್ರೇಯಸಿಯು ಕ್ರೀಡೆಗೆ ಅಣಿಯಾಗಲು ಸಹಕರಿಸುತ್ತ ಕಿರೀಟವನ್ನು ಎರಡೂ ಕೈಗಳಿಂದ ತೆಗೆಯುತ್ತಿದ್ದಾಳೆ.

ಐಹೊಳೆಯ ಕೊಂತ ಗುಡಿ ಸಮೂಹದ ಮುಖ್ಯ ದೇವಾಲಯದ ಮಂಟಪದ ಕಂಬ, ಅರೆಗಂಬದ ಮೇಲೆ ಎರಡು ರಸಿಕ ದಂಪತಿಗಳ ಮೂರ್ತಿಗಳನ್ನು ಕಂಡರಿಸಲಾಗಿದೆ.

ಲಾಡಖಾನ ಗುಡಿಯ ಮಿಥುನ ದಂಪತಿಗಳು ಹೆಚ್ಚು ಗಮನಾರ್ಹವಾಗಿವೆ. ಮುಖಮಂಪಟದ ಕಂಬಗಳನ್ನು ಇವು ಅಲಂಕರಿಸಿವೆ. ಪ್ರವೇಶದ್ವಾರದ ಎಡಕಿನ ಕಂಬದ ಪೂರ್ವದ ಬದಿಯಲ್ಲಿ ಅಪೂರ್ವ ರಸಿಕದಂಪತಿಯ ಶಿಲ್ಪವಿದೆ. ಸ್ತ್ರೀ ಪುರುಷರು ಗಿಡದಡಿಯಲ್ಲಿ ಪ್ರೇಮದಾಟದಲ್ಲಿ ನಿರತರಾಗಿದ್ದಾರೆ. ಪ್ರೇಯಸಿಯ ಮೈಮಾಟ ಆಕರ್ಷಕವಾಗಿದೆ. ಎಡಗಾಲಿನ ಮೇಲೆ ಭಾರಹಾಕಿ ಕತ್ತರಿಗಾಲಿನೊಂದಿಗೆ ನಿಂತಿದ್ದಾಳೆ. ಆತನ ದೇಹದ ಮೇಲೆ ಆತುಕೊಂಡು ಆಸರೆ ಪಡೆದಿದ್ದಾಳೆ. ಪ್ರಿಯಕರನು ಎಡಗೈಯಿಂದ ಆಕೆಯನ್ನು ತಬ್ಬಿಕೊಳ್ಳುತ್ತಿದ್ದಾನೆ. ನಾಚಿಕೆಯಿಂದ ಅವಳು ಮುಖವನ್ನು ಇತ್ತ ಹೊರಳಿಸಿ ಆತನ ಸಾಮೀಪ್ಯವನ್ನು ಸುಖಿಸುತ್ತಿದ್ದಾಳೆ. ಈ ಬಗೆಯ ನಾಚಿಕೆ ಆತನ ಸಂತೋಷವನ್ನು ಹೆಚ್ಚಿಸಿದೆ. ದಂಪತಿಗಳ ಕೋಮಲಭಾವನೆಯನ್ನು ಶಿಲ್ಪಿ ಬಲು ನಾಜೂಕಿನಿಂದ ಚಿತ್ರಿಸಿದ್ದಾನೆ. **(ಚಿತ್ರ ೪೯)**



**ಚಿತ್ರ ೪೯. ಲಾಡಖಾನ ಗುಡಿ ಮಿಥುನ ಶಿಲ್ಪ**

ಇನ್ನೊಂದು ಕಂಬದಲ್ಲಿ ಹೂವುಗಳಿಂದ ತುಂಬಿದ ಗಿಡದ ಕೆಳಗೆ ಸ್ತ್ರೀ ಪುರುಷ ನಿಂತಿದ್ದಾರೆ. ಶಿಲ್ಪದ ಬಹುಭಾಗ ಹಾನಿಗೀಡಾಗಿದೆ. ಮತ್ತೊಂದು ದಂಪತಿ-ಶಿಲ್ಪದಲ್ಲಿ ಪುರುಷನು ಧರಿಸಿದ ಕಿರೀಟ ಸೂಕ್ಷ್ಮ ಕೆತ್ತನೆಯಿಂದ ಕೂಡಿದೆ. ಮುಖವು ಭಾವಪೂರ್ಣವಾಗಿದೆ. ದೇಹದ ಮೈವಳಿಕೆ ಕಲಾವಿದನ ನೈಪುಣ್ಯವನ್ನು ಸಾರುತ್ತದೆ.

ಪಟ್ಟದಕಲ್ಲು ಚಲುಕ್ಯ ಶಿಲ್ಪಕಲೆಯ ಉತ್ತುಂಗಶಿಖರ. ಶಿಲ್ಪಾಲಂಕಾರದ ಪರಾಕಾಷ್ಠೆಯನ್ನು ಇಲ್ಲಿ ಕಾಣಬಹುದು. ದೇವಾಲಯದ ಚೆಲುವನ್ನು ಹೆಚ್ಚಿಸುವಲ್ಲಿ ಮಿಥುನ ಶಿಲ್ಪಗಳ ಪಾತ್ರ ಹಿರಿದಾದುದು. ಇಲ್ಲಿನ ವಿರೂಪಾಕ್ಷ, ಮಲ್ಲಿಕಾರ್ಜುನ ಹಾಗೂ ಪಾಪನಾಥ ದೇವಾಲಯಗಳಲ್ಲಿನ ಕಂಬ ಮತ್ತು ಅರ್ಧಕಂಬಗಳ ಮೇಲೆ ಮಧ್ಯಮಾಕಾರದ ಹಲವಾರು ದಂಪತಿ ಶಿಲ್ಪಗಳು ಬಗೆ ಬಗೆಯ ಭಂಗಿಗಳಲ್ಲಿ ನಿರೂಪಿಸಲ್ಪಟ್ಟಿವೆ. ಅವು ದಾಂಪತ್ಯ ಜೀವನದ ಚಿತ್ರಣಗಳಾಗಿವೆ.

ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯವು ಚಲುಕ್ಯರ ಸರ್ವಶ್ರೇಷ್ಠ ವಾಸ್ತುಕಲಾಕೃತಿ. ಇದರ ಎಲ್ಲ ವಾಸ್ತು ಅಂಗಗಳು ಶಿಲ್ಪಗಳಿಂದ ಅಲಂಕೃತಗೊಂಡಿವೆ. ಹೀಗೆ ಅದರ ಬೇರೆ ಬೇರೆ ಭಾಗಗಳಲ್ಲಿ ಕೆತ್ತನೆಗೊಂಡ ಮಧ್ಯಮಾಕಾರದ ಮಿಥುನ ಶಿಲ್ಪಗಳನ್ನು ಅವಲೋಕಿಸಬಹುದು.

ದೇವಾಲಯದ ಪ್ರಾಕಾರವನ್ನು ಪೂರ್ವದ ಮಹಾದ್ವಾರ (ಪ್ರತೋಳಿ)ದಿಂದ ಪ್ರವೇಶಿಸಬಹುದು. ಅದರ ಎರಡು ಕಂಬಗಳು ಎರಡು ರಸಿಕ ದಂಪತಿಗಳ ಜೋಡಿಗಳಿಂದ ಅಲಂಕೃತವಾಗಿವೆ. ಅವುಗಳ ಮೇಲೆಯೇ ಶಾಸನಗಳನ್ನು ಕಾಣುತ್ತೇವೆ. ದಕ್ಷಿಣದ ಕಂಬದ ಮೇಲೆ ಸರ್ವಸಿದ್ಧಿ ಆಚಾರಿ ಎಂಬ ಸೂತ್ರಧಾರನ ಗುಣಗಾನವಿದ್ದರೆ ಉತ್ತರದ ಕಂಬದ ಮೆಲೆ ಗುಂಡ ಅನಿವಾರಿತಾಚಾರಿಯ ಪ್ರಶಂಸೆಯಿದೆ. ದಕ್ಷಿಣದ ಕಂಬದ ಮೇಲಿರುವ ದಂಪತಿಶಿಲ್ಪದಲ್ಲಿ ಶಿಲ್ಪಿತಳಾದ ಪತ್ನಿಯ ನಿಲುವು ಹೆಚ್ಚು ಮನಮೋಹಕವಾಗಿದೆ. ಅವಳು ಕತ್ತರಿಕಾಲು ಹಾಕಿಕೊಂಡು ಬಲಗೈಯನ್ನು ಗಂಡನ ಹೆಗಲಮೇಲೆ ಚಾಚಿ ಠೀವಿಯಿಂದ ಎಡಗೈಯನ್ನು ಟೊಂಕದ ಮೇಲಿರಿಸಿಕೊಂಡಿದ್ದಾಳೆ. ಇದೊಂದು ವಿಶಿಷ್ಟ ತೆರನಾದ ಭಂಗಿ. ಮುಖಭಾವಗಳನ್ನು ಗುರುತಿಸಲಾರದಷ್ಟು ಶಿಲ್ಪವು ಹಾನಿಗೊಳಗಾಗಿದೆ. ಇದಕ್ಕಿಂತಲೂ ಹೆಚ್ಚು ಹಾಳಾಗಿರುವ ಸ್ಥಿತಿಯಲ್ಲಿ ಉತ್ತರ ಕಂಬದ ದಂಪತಿ ಶಿಲ್ಪವಿದೆ.

ನಂದಿಮಂಟಪದ ಕಂಬಗಳ ಅಲಂಕಾರ ಶಿಲ್ಪಗಳು ಗಮನಾರ್ಹವಾಗಿವೆ. ಪ್ರಾಕಾರದ ಗೋಡೆಗಳಿಂದ ರಕ್ಷಿತವಾದ ಈ ಶಿಲ್ಪಗಳು ಸುಸ್ಥಿತಿಯಲ್ಲಿವೆ. ಅದಾಗಿ ಅವುಗಳ ಕಲಾ ಚೆಲುವನ್ನು ನೋಡುಗನು ಆನಂದಿಸಬಹುದು. ಇಲ್ಲಿನ ಕಂಬಗಳ ಮೇಲೆ ಎಂಟು ಮಿಥುನ ದಂಪತಿಗಳನ್ನು ಕಾಣುತ್ತೇವೆ. ಅವರ ವೇಷಭೂಷಣ, ಕೇಶಾಲಂಕಾರ, ಆಭರಣ, ಮೈಮಾಟ ಮತ್ತು ನಿಲುವುಗಳಲ್ಲಿಯ ವೈವಿಧ್ಯಗಳು ನಮ್ಮನ್ನು ಕಲಾಪ್ರಪಂಚಕ್ಕೆ ಕರೆದೊಯ್ಯುತ್ತವೆ. ಈ ಎಲ್ಲ ಮಿಥುನ ಶಿಲ್ಪಗಳಲ್ಲಿ ದಾಂಪತ್ಯದ ಕೋಮಲ ಭಾವನೆಗಳು ವ್ಯಕ್ತಗೊಂಡಿವೆ. ಅವರು ಸುರತ ನಿರತ ದಂಪತಿಗಳಲ್ಲ. ಇದು ಚಲುಕ್ಯ ಮಿಥುನಶಿಲ್ಪಗಳ ವಿಶೇಷ ಗುಣಲಕ್ಷಣವಾಗಿದೆ. ಪ್ರೇಮವೇ ಇವುಗಳ ಪ್ರಧಾನ ಅಂಶ, ಕಾಮವಲ್ಲ.

ನಂದಿಮಂಟಪದ ಉತ್ತರ ಗೋಡೆಯಲ್ಲಿನ ಎರಡು ಕಂಬಗಳ ಮೇಲಿನ ದಂಪತಿಗಳ ಮೂರ್ತಿಗಳು ಚಿತ್ತಾಕರ್ಷಕವಾಗಿದೆ. ಪಾದದ ವರೆಗೆ ಚಾಚಿಕೊಂಡ ಅಧೋವಸ್ತ್ರ ಧರಿಸಿದ ಸ್ತ್ರೀಯು ಕೊರಳಹಾರ, ಕೇಯೂರ, ಕಟಿಬಂಧಗಳಿಂದ ಅಲಂಕೃತಳಾಗಿದ್ದಾಳೆ. ಎಡಗೈಯಲ್ಲಿ ಪುಷ್ಪವೊಂದನ್ನು ಹಿಡಿದು ಬಲಗೈಯನ್ನು ಇನಿಯನ ತೊಡೆಯ ಮೇಲೆ ಇರಿಸಿದ್ದಾಳೆ. ಆಕೆಯ ನಿಲುವಿನಲ್ಲಿ ಸ್ತ್ರೀ ಸಹಜ ಸೌಂದರ್ಯವಿದೆ. ಪತಿಯು ಟೊಂಕದ ಮೇಲೆ ಕೈ ಇಟ್ಟುಕೊಂಡು ರಾಜಠೀವಿಯಲ್ಲಿ ನಿಂತಂತೆ ಶಿಲ್ಪಿ ಕಟೆದಿದ್ದಾನೆ. ಇಬ್ಬರೂ ಒಬ್ಬರನ್ನೊಬ್ಬರು ವೀಕ್ಷಿಸುತ್ತ 'ಚಕ್ಷೂರಾಗ'ದಲ್ಲಿರುವಂತೆ ನಿರೂಪಿಸಲಾಗಿದೆ.

ಇದರ ಪಶ್ಚಿಮ ಬದಿಯ ಇನ್ನೊಂದು ಜೋಡಿ ಹಲವು ದೃಷ್ಟಿಯಿಂದ ಮಹತ್ವದ ಶಿಲ್ಪವೆನಿಸುತ್ತದೆ. ರಸಿಕ ಶಿಲ್ಪಗಳಲ್ಲಿ ಸ್ತ್ರೀಯು ಪುರುಷನ ಬಲಬದಿಗೆ ಕಾಣಸಿಗುವುದು ಅಪರೂಪ. ಸಾಮಾನ್ಯವಾಗಿ ಪತ್ನಿಯ ಎಡಬದಿಗೆ ಶಿಲ್ಪಿತಳಾಗುವುದು ವಾಡಿಕೆ. ಅರ್ಧನಾರೀಶ್ವರ ಶಿಲ್ಪದಲ್ಲಿ ಪಾರ್ವತಿಯು ಸಂಯುಕ್ತರೂಪದ ವಾಮಭಾಗದಲ್ಲಿರಬೇಕೆಂದು ಪ್ರತಿಮಾ ಶಾಸ್ತ್ರವು ಆದೇಶಿಸುತ್ತದೆ. ಹಾಗಾಗಿ ಬಲಬದಿಗೆ ಸ್ತ್ರೀ ಇರುವ ಇಂಥ ರಸಿಕಜೋಡಿಯು ಪ್ರೇಮಿಗಳನ್ನು ಪ್ರತಿನಿಧಿಸುತ್ತದೆಂದು ಭಾವಿಸಲಾಗಿದೆ. ಇದೊಂದು ಇಂತಹ ರಸಿಕ ಜೋಡಿಯಾಗಿದೆ. ಪುರುಷನು ಆಕೆಯನ್ನು ತನ್ನ ಬಲಗೈಯನ್ನು ಹಿಂದೆ ಚಾಚಿ ಸ್ಪರ್ಶಿಸಿದ್ದಾನೆ. ಅಷ್ಟು ಮಾತ್ರಕ್ಕೆ ರೋಮಾಂಚನಗೊಂಡು ಕಣ್ಣುಗಳನ್ನು ಮುಚ್ಚಿ ಆ ಸ್ಪರ್ಶ ಸುಖವನ್ನು ಅನುಭವಿಸುತ್ತಿದ್ದಾನೆ. ಆತನ ಮುಖದಲ್ಲಿ ಭಾವ ಸಮಾಧಿಯಿದೆ. ಮುಗುಳು ನಗೆಯಿದೆ. ಭಾವನೆಯ ಸೌಂದರ್ಯಕ್ಕೆ ಅನುಗುಣವಾಗಿರುವಂತೆ ರೂಪ ಸೌಂದರ್ಯವೂ ಮೈವೆತ್ತಿದೆ. ವಿಶಿಷ್ಟವಾದ ಕಲಾತ್ಮಕ ಶಿರೋಭೂಷಣ ಆತನದು. ಕೊರಳಲ್ಲಿ ಮುತ್ತಿನ ಮಾಲೆಗಳಿವೆ. ಎಡಗೈಯಲ್ಲಿ ಪುಷ್ಪವೊಂದನ್ನು ಹಿಡಿದಿರುವನು. ಟೊಂಕದಲ್ಲಿ ಕಠಾರಿವೊಂದನ್ನು ಕಟ್ಟಿಕೊಂಡಿದ್ದಾನೆ. ಆತನೊಬ್ಬ ಯೋಧನೆಂದು ಅದು ಸೂಚಿಸುತ್ತದೆ. ಉಟ್ಟ ಅಧೋವಸ್ತ್ರವನ್ನು ಮೇಲೆ ಎತ್ತಿ ಟೊಂಕಕ್ಕೆ ಸಿಕ್ಕಿಸಿಕೊಂಡಿದ್ದು ಸೊಗಸಾಗಿ ನಿರೂಪಿತವಾಗಿದೆ. ಪಕ್ಕದಲ್ಲಿ ನಿಂತಿರುವ ತರುಣಿ ಬೆಲೆ ಬಾಳುವ ವಸ್ತ್ರಾಭರಣಗಳಿಂದ ಶೃಂಗಾರಗೊಂಡಿದ್ದಾಳೆ. ಪ್ರೇಮರಾಗದಲ್ಲಿ ತಲ್ಲೀನಳಾದ ಮುಖಭಾವ ಆಕೆಯದಾಗಿದೆ. ಇದೊಂದು ಸುಂದರ ಭಾವಶಿಲ್ಪವಾಗಿದೆ.

ವಿರೂಪಾಕ್ಷ ದೇವಾಲಯದ ಪೂರ್ವ ಮುಖಮಂಟಪದ ಕಂಬದ ಮೇಲಿರುವ ಎರಡು ರಸಿಕದಂಪತಿಗಳ ಶಿಲ್ಪಗಳು ಅಧ್ಯಯನ ಯೋಗ್ಯವಾಗಿವೆ. ಇವರು ರಾಜ ದಂಪತಿಗಳು. ಭಕ್ತರು ದೇವಾಲಯವನ್ನು ಪ್ರವೇಶಿಸುತ್ತಿದ್ದಂತೆ ದಕ್ಷಿಣದ ಕಂಬದ ಮೇಲೆ ಸುಮಾರು ೪.೫ ಅಡಿ ಎತ್ತರದ ರಸಿಕ ದಂಪತಿ ಶಿಲ್ಪವು ಕೆತ್ತನೆಗೊಂಡಿದೆ. ಇದೊಂದು ಉತ್ಕೃಷ್ಟ ಕಲಾಕೃತಿ. ಅರಸನು ಕಿರೀಟಧಾರಿಯಾಗಿದ್ದಾನೆ. ಅರಸಿ ಮುತ್ತಿನ ಮಣಿಗಳಿಂದಾದ ಕೇಶಾಲಂಕಾರದಿಂದ ಶೋಭಿತಳು. ಈರ್ವರೂ ಅಪರೂಪದ ಕಂಠಾಭರಣ ಧರಿಸಿದ್ದಾರೆ. ಅರಸಿಯ ಕೊರಳಲ್ಲಿ ಎರಡು ಮುತ್ತಿನ ಸರಗಳಿವೆ. ಕರ್ಣಾಭರಣಗಳೂ ವಿಶಿಷ್ಟ ತೆರನಾದದ್ದು . ಅರಸಿ ಬೆನ್ನ ಹಿಂದೆ ಕೈ ಚಾಚಿದ್ದಾಳೆ. ಅರಸನು ರಾಣಿಯ ತೋಳನ್ನು ಬಳಸಿದ್ದಾನೆ. ಈ ಶಿಲ್ಪದಲ್ಲಿಯ

ರಾಜಗಾಂಭೀರ್ಯ ಎದ್ದು ಕಾಣುವಂತಹುದು. ಅರಸಿಯ ಬಲಗೈ ಆತನ ಉದರಬಂಧದ ಮೇಲಿದೆ. ಅರಸನ ಎಡಗೈ ಆಕೆಯ ಎಡ ತೋಳಿನ ಕೇಯೂರದ ಮೇಲಿದೆ. ಪತಿ ಪತ್ನಿಯರು ದೇಹ ಸ್ಪರ್ಶವನ್ನು ಸುಖಿಸುವಂತೆ ಚಿತ್ರಿಸಿದೆ. ದಾಂಪತ್ಯದ ಮಧುರ ಭಾವನೆಯನ್ನು ಶಿಲ್ಪಿಯು ಸೊಗಸಾಗಿ ಬಿಂಬಿಸಿದ್ದಾನೆ. **(ಚಿತ್ರ ೫೦)**

ಅರಸಿ ಧರಿಸಿರುವ ನಡುಪಟ್ಟಿಯಿಂದ ಜೋತುಬಿದ್ದ ಗೊಂಡೆ ಮೊಳಕಾಲಿನ ವರೆಗೆ ಇಳಿಬಿದ್ದಿದೆ. ಉಟ್ಟುಕೊಂಡ ಸೀರೆ ಸಮಾನಾಂತರದ ಗೆರೆಗಳಿರುವ ನಕ್ಷೆಗಳಿಂದಾಗಿ ಆಕರ್ಷಕವಾಗಿದೆ. ಅರಸನೂ ಉದರಬಂಧ ಕಟ್ಯಾಭರಣಗಳಿಂದ ಭೂಷಿತವಾಗಿದ್ದಾನೆ. ಅಧೋವಸ್ತ್ರ ವಿನ್ಯಾಸವೂ ಸೊಗಸಾಗಿದೆ.

ಅರಸನು ಟೊಂಕದ ಮೇಲೆ ಕೈಯಿರಿಸಿಕೊಂಡು ಸಹಜವಾಗಿಯೇ ರಾಜಠೀವಿಯಲ್ಲಿ ನಿಂತಿದ್ದಾನೆ. ಆತನ ಮುಖದಲ್ಲಿ ತೃಪ್ತಿ ಸಂತೋಷಗಳು ಎದ್ದುಕಾಣುತ್ತಿವೆ. ನಸು ತಲೆ ಎತ್ತಿ ಅರಸನ ಮುಖವನ್ನೇ ವೀಕ್ಷಿಸುವ ರಾಣಿಯು ಧನ್ಯತೆಯ ಭಾವದಲ್ಲಿರುವಂತೆ ಶಿಲ್ಪಿತಳಾಗಿದ್ದಾಳೆ. ಈ ಅರಸ-ಅರಸಿಯರು ದೇವಾಲಯದ ಪೋಷಕರಾದ ಇಮ್ಮಡಿ ವಿಕ್ರಮಾದಿತ್ಯ ಹಾಗೂ ಲೋಕಮಹಾದೇವಿಯರಲ್ಲದೆ ಇನ್ನಾರಿರಲು ಸಾಧ್ಯ ? ಈ ಕಂಬದ ಇನ್ನೊಂದು ಬದಿಯಲ್ಲಿ ಲೋಕ ಮಹಾದೇವಿಯ ಶಾಸನವಿದ್ದುದು ಕೂಡ ಇದನ್ನು ಸಮರ್ಥಿಸುವಂತಿದೆ.

ಉತ್ತರದ ಕಂಬದಲ್ಲಿ ಇದಕ್ಕೆ ಎದುರಾಗಿ ರಾಜದಂಪತಿಗಳ ಇನ್ನೊಂದು ಮೂರ್ತಿಯನ್ನು ಕೆತ್ತಲಾಗಿದೆ. **(ಚಿತ್ರ ೫೧)** ಇದು ವಿಕ್ರಮಾದಿತ್ಯ ಹಾಗೂ ತ್ರೈಲೋಕ್ಯ ಮಹಾದೇವಿಯರ ಶಿಲ್ಪವೇ ಆಗಿರಬೇಕು. ಈ ಈರ್ವರೂ ಅರಸಿಯರು ತಮ್ಮ ಪತಿಯ ವಿಜಯದ ಸ್ಮರಣೆಗಾಗಿ ಈ ದೇವಾಲಯವನ್ನು ನಿರ್ಮಿಸಿದುದು ಶಾಸನದಿಂದ ತಿಳಿದುಬರುತ್ತದೆ. ಅರಸನು ಶಿಲ್ಪಿಗಳನ್ನು ಗೌರವಿಸಿದ ಸಂಗತಿ ಶಾಸನಗಳಿಂದ ಸ್ಪಷ್ಟವಿದೆ. ಅಂತಹ ಕಲಾಪೋಷಕ ರಾಜನನ್ನು ಶಿಲ್ಪಿಗಳು ಶಿಲ್ಪರೂಪದಲ್ಲಿ ಹೀಗೆ ಶಾಶ್ವತಗೊಳಿಸಿದುದು ಕೃತಜ್ಞತೆಯ ಸಹಜ ಅಭಿವ್ಯಕ್ತಿ ಅಲ್ಲವೇ ?


ಚಿತ್ರ ೫೦. ರಾಜದಂಪತಿ ವಿರೂಪಾಕ್ಷ ದೇವಾಲಯ ಮುಖಮಂಟಪ

ವಿರೂಪಾಕ್ಷ ದೇವಾಲಯದ ಉತ್ತರ ಮುಖಮಂಟಪದ ಎಡಬಲದ ಕಂಬಗಳಲ್ಲಿ ಎದುರು ಬದುರಾಗಿ ಎರಡು ದಂಪತಿಗಳಿದ್ದು ಇವರೂ ಸಹ ಅರಸು ದಂಪತಿಗಳೇ ಆಗಿರಬಹುದು. ಇವೆರಡೂ ಕಲಾಪೂರ್ಣ ಕೃತಿಗಳು. ಪಶ್ಚಿಮದ ಕಂಬದ ಮೇಲೆ ದಾನ ಶಾಸನವೊಂದಿದೆ, ಅದರ ಕೆಳಗೆ ರಾಜದಂಪತಿಗಳ ಶಿಲ್ಪವೊಂದು ಸೊಗಸಾಗಿ ಮೂಡಿಬಂದಿದೆ. ಇಬ್ಬರೂ ಮಂದಸ್ಮಿತರಾಗಿದ್ದಾರೆ. ಅರಸಿ ರಾಜನ ಮುಖವನ್ನು ದೃಷ್ಟಿಸುತ್ತಿದ್ದಾಳೆ. ಅರಸನು ರಾಜಠೀವಿಯಲ್ಲಿ ಕಟ್ಯವಲಂಬಿತನಾಗಿ ನಿಂತಿದ್ದಾನೆ. ಇನ್ನೊಂದು ಕೈಯಿಂದ ಆಕೆಯ ಹಿಂದಿರುವ ಗಿಡದ ಹಣ್ಣನ್ನು ಕೈಯಿಂದ ಕೀಳುತ್ತಿರುವಂತೆ ತೋರುತ್ತದೆ. ಆತನು ಕಿರೀಟಧಾರಿಯಾಗಿದ್ದು, ಕರ್ಣಾಭರಣ, ಕಂಠಾಭರಣ, ಉದರಬಂಧ, ಕಟಿ ಬಂಧಗಳಿಂದ ಭೂಷಿತನಾಗಿದ್ದಾನೆ. ಪತ್ನಿ ಧಮ್ಮಿಲ ಕೇಶಬಂಧದಿಂದ ಅಲಂಕೃತೆ. ಸರಳವಾದ ಪದಕಹಾರ ಕೊರಳಲ್ಲಿದೆ. ತೋರು ಮೊಲೆಯ ಅವಳು ಸಿಂಹಕಟಿಯಾಗಿ ಶಿಲ್ಪಿತಳಾಗಿದ್ದಾಳೆ. ಆಕೆಯ ಮೈಮಾಟದ ಸ್ತ್ರೀ ಸಹಜ ಚೆಲುವನ್ನು ಬಿಂಬಿಸುವಲ್ಲಿ ಶಿಲ್ಪಿ ಯಶಸ್ವಿಯಾಗಿದ್ದಾನೆ. ಅವಳ ಮೈಮಣಿತದಲ್ಲಿ ಲಾಲಿತ್ಯವಿದೆ. ಇದೊಂದು ಸುಂದರ ಮಿಥುನ ಶಿಲ್ಪ.

ಈ ಶಿಲ್ಪದ ಎದುರಿಗೆ ರಾಜ ಪರಿವಾರದ ಇನ್ನೊಂದು ಜೋಡಿಯನ್ನು ಕಾಣುತ್ತೇವೆ. ಇದೂ ಕೂಡ ಒಂದು ಉತ್ಕೃಷ್ಟ ಕಲಾಕೃತಿ. ಇಲ್ಲಿ ಮಡದಿ ಬಲಬದಿಗೆ ನಿಂತಿದ್ದು ವೀಣೆ ನುಡಿಸುತ್ತಿದ್ದಂತೆ ನಿರೂಪಿತಳು. ಈಗ ವೀಣೆ ತುಂಡಾಗಿದೆ. ಹಾಗೆಯೆ ಪತಿಯ ಕಟ್ಯವಲಂಬಿತ ಕೈಕೂಡ ಕಳಚಿಹೋಗಿದೆ. ಹುಬ್ಬು ಹಾಗೂ ಕಣ್ಣುಗಳನ್ನು ಬಿಡಿಸುವಲ್ಲಿಯ ನಯಗಾರಿಕೆ ಸೂಕ್ಷ್ಮ ಬಗೆಯದು. ಶ್ರೇಷ್ಠ ಕಲಾವಿದನೊಬ್ಬನ ಕಲಾಕೃತಿ ಇದು.


ಚಿತ್ರ ೫೧. ರಾಜದಂಪತಿ ವಿರೂಪಾಕ್ಷ ದೇವಾಲಯ ಮುಖಮಂಟಪ

ದೇವಾಲಯದ ಸಭಾಮಂಟಪದ ಒಳಗೋಡೆಯಲ್ಲಿ ಹದಿನಾಲ್ಕು ಅರ್ಧಕಂಬಗಳು ಮಧ್ಯಮಾಕಾರದ ಮಿಥುನ ಶಿಲ್ಪಗಳಿಂದ ಅಲಂಕೃತವಾಗಿವೆ. ದುರ್ದೈವದಿಂದ ಅವೆಲ್ಲ ಶಿಲ್ಪಗಳು ಒಂದಿಲ್ಲೊಂದು ರೀತಿಯಲ್ಲಿ ತಮ್ಮ ಮೂಲ ಚೆಲುವನ್ನು ಕಳೆದುಕೊಂಡಿವೆ. ಅವುಗಳ ಮೂಲಕ ಪ್ರಾಚೀನ ರೂವಾರಿಗಳು ಪ್ರದರ್ಶಿಸಿದ ಕಲಾವಂತಿಕೆ ಅರಿಯದೇ ಹೋಗಲಾರದು. ಆ ಎಲ್ಲ ಮಿಥುನ ಶಿಲ್ಪಗಳಲ್ಲಿ ಪ್ರಿಯತಮ ಪ್ರಿಯತಮೆಯರ ಅಥವಾ ಸತಿ-ಪತಿಯರ ಭಾವಪೂರ್ಣ ರಸ ನಿಮಿಷಗಳು ಪ್ರತಿಫಲನಗೊಂಡಿವೆ.

ಮಲ್ಲಿಕಾರ್ಜುನ ದೇವಾಲಯದ ಉತ್ತರ ಮುಖಮಂಟಪದಲ್ಲಿಯ ಎಡಬಲದ ಕಂಬಗಳಲ್ಲಿ ಎರಡು ಸೊಗಸಾದ ಮಿಥುನ ಶಿಲ್ಪಗಳನ್ನು ಕಂಡರಿಸಲಾಗಿದೆ. ಪಶ್ಚಿಮ ಕಂಬದಲ್ಲಿನ ಸ್ತ್ರೀ ತನ್ನ ಇನಿಯನ ಬಲಕ್ಕೆ ನಿಂತಿದ್ದು ಆತನ ಹೆಗಲಮೇಲೆ ಕೈಚಾಚಿ ತ್ರಿಭಂಗಿಯಲ್ಲಿ ಮೋಹಕ ನಿಲುವನ್ನು ಪ್ರದರ್ಶಿಸುತ್ತಿದ್ದಾಳೆ. ಪೂರ್ವದ ಕಂಬದ ಮಿಥುನ ದಂಪತಿಗಳ ಕೇಶಬಂಧಗಳು ಚಿತ್ತಾಕರ್ಷಕವಾಗಿವೆ.

ವಿರೂಪಾಕ್ಷ ದೇವಾಲಯದ ಸಭಾಮಂಪಟದ ಅರೆಗಂಬಗಳಲ್ಲಿ ಇರುವಂತೆ ಇಲ್ಲಿಯೂ ಕೂಡ ಅರೆಗಂಬಗಳು ಮಿಥುನ ದಂಪತಿಗಳ ಮೂರ್ತಿಗಳಿಂದ ಶೃಂಗಾರಗೊಂಡಿವೆ. ಇಲ್ಲಿ ಶಿಲ್ಪಿತಗೊಂಡ ಪುರುಷರೂ ಕೂಡ ವಿಧ ವಿಧದ ಕೇಶ ವಿನ್ಯಾಸಗಳಿಂದ ಅಲಂಕೃತರಾಗಿರುವುದೊಂದು ವಿಶೇಷವೆನಿಸಿದೆ. ಇಲ್ಲಿನ ಜೋಡಿಗಳೂ ಕೂಡ ವೈವಿಧ್ಯ ಪೂರ್ಣವಾಗಿ ಕೆತ್ತನೆಗೊಂಡಿದ್ದು ಅವುಗಳಲ್ಲಿ ಬಹುಪಾಲು ಕಲಾಕೃತಿಗಳು ಕಲಾದ್ವೇಷಿಗಳ ಕುಕೃತ್ಯಕ್ಕೆ ಸಿಲುಕಿ ವಿಕೃತಗೊಂಡಿವೆ. ರೂವಾರಿಗಳು ಕಲ್ಲಿನಲ್ಲಿ ಅರಳಿಸಿದ ಕೋಮಲ ಭಾವನೆಗಳು ಶಿಲ್ಪಗಳಿಂದ ಮಾಯವಾಗಿವೆ. ಅಳಿದುಳಿದ ರಸಿಕ ದಂಪತಿಗಳ ಮೂರ್ತಿಗಳು ಶಿಲ್ಪಿಗಳ ಕಲಾಕೌಶಲ್ಯವನ್ನು ಚೆನ್ನಾಗಿಯೇ ಪರಿಚಯಿಸುತ್ತವೆ.

ಈ ಸಭಾ ಮಂಟಪದ ಹನ್ನೆರಡು ದಂಪತಿ ಶಿಲ್ಪಗಳಲ್ಲಿ ಉತ್ತರ ಗೋಡೆಯ ಅರೆಗಂಬದ ಜೋಡಿಯು ಗಮನಾರ್ಹವಾಗಿದೆ. ನೃತ್ಯಭಂಗಿಯಲ್ಲಿರುವ ಸ್ತ್ರೀ ತನ್ನ ಇನಿಯನನ್ನು ತೋಳಿನಿಂದ ಬಳಸಿ ನೇತುಬೀಳುವಂತೆ ಚಿತ್ರಿತಳಾಗಿದ್ದಾಳೆ. ಕಾಮಾಸಕ್ತಳಾದ ಆಕೆಯು ಇನಿಯನಿಗೆ ಅರ್ಪಿಸಿಕೊಳ್ಳುತ್ತ ತನ್ನ ಬಟ್ಟೆಯನ್ನು ಸಡಿಲಿಸುತ್ತಿದ್ದಾಳೆ. ಅವರು ಮಧುಪಾನ ಮಾಡಿರುವುದನ್ನು ಆತನ ಕೈಯಲ್ಲಿರುವ ಮಧು ಪಾತ್ರೆ ಸೂಚಿಸುತ್ತದೆ. ಪುರುಷನ ಕೇಶಬಂಧ ಅಪರೂಪದ್ದಾಗಿದೆ.

ಪಾಪನಾಥ ದೇವಾಲಯದ ನಂದಿ ಮಂಟಪದಲ್ಲಿನ ಹದಿನಾಲ್ಕು ಅರ್ಧಕಂಬಗಳು ಇಂತಹ ರಸಿಕ ದಂಪತಿಗಳ ಶಿಲ್ಪಗಳಿಂದ ಸಿಂಗಾರಗೊಂಡಿವೆ. ಸುಮಾರು ಎರಡು ಅಡಿ ಎತ್ತರದ ದಂಪತಿ ಶಿಲ್ಪಗಳಿವು. ಮಲ್ಲಿಕಾರ್ಜುನ, ವಿರೂಪಾಕ್ಷ ದೇವಾಲಯಗಳ ಮಿಥುನ ಶಿಲ್ಪಗಳಲ್ಲಿನ ಚೆಲುವು ಮತ್ತು ರಸಂತಿಕೆ ಇವುಗಳಲ್ಲಿ ಇಲ್ಲವಾದರೂ ವಿಭಿನ್ನ ಮೈಮಣಿತ, ಸನ್ನಿವೇಶಗಳ ಮೂಲಕ ಮನಸೆಳೆಯಬಲ್ಲವು. ಆಯಾತಾಕಾರದ ಗುರಾಣಿ ಹಿಡಿದ ಯೋಧ, ತಂತಿವಾದ್ಯ ನುಡಿಸುತ್ತಿರುವ ಸಂಗೀತಗಾರ, ಉದ್ದನೆಯ ತಂಬೂರಿ ನುಡಿಸುವ ಸ್ತ್ರೀ, ಕಟಿಯಲ್ಲಿ ಕಠಾರಿಯೊಂದನ್ನು ಕಟ್ಟಿಕೊಂಡ ತರುಣ ಮೊದಲಾದವರು ತಮ್ಮ ಸಂಗಾತಿಗಳೊಂದಿಗೆ ರಸನಿಮಿಷದಲ್ಲಿರುವುದನ್ನು ಶಿಲ್ಪಿಸಲಾಗಿದೆ. ಈ ದೇಗುಲದ ಚಿಕ್ಕ ಸಭಾಮಂಟಪದ ಎಂಟು ಅರೆಗಂಬಗಳಲ್ಲಿ ಮಿಥುನ ಶಿಲ್ಪಗಳಿದ್ದು ಅವು ಕಲಾತ್ಮಕವಾಗಿ ಗೌಣವೆನಿಸುತ್ತವೆ.

### ೧.೨ ಕಿರುಗಾತ್ರದ ಮಿಥುನ ಶಿಲ್ಪಗಳು :

ಮಧ್ಯಮಾಕಾರದ ಮಿಥುನ ಶಿಲ್ಪಗಳು ದೇವಾಲಯದ ಬೋದಿಗೆ ಮತ್ತು ಕಂಬಗಳನ್ನು ಅಲಂಕರಿಸಿರುವುದನ್ನು ಮನಗಂಡೆವು. ಕಿರುಗಾತ್ರದ ಮಿಥುನ ಶಿಲ್ಪಗಳಿಗೆ ಸ್ಥಳಾವಕಾಶ ಬಹಳ ಬೇಕಿಲ್ಲ. ಲಭ್ಯವಾದ ಸೀಮಿತ ಅವಕಾಶದಲ್ಲಿ ಈ ಕಿರು ಶಿಲ್ಪಗಳನ್ನು ಕಂಡರಿಸಲು ಸಾಧ್ಯ.

ಹಾಗಾಗಿ ರೂವಾರಿಗಳು ಕಂಬ, ಕಕ್ಷಾಸನ, ಬಾಗಿಲುವಾಡ ಹಾಗೂ ವಿತಾನ (ಮೇಲ್ಗಂಡು)ಭಾಗಗಳನ್ನು ಸುಂದರಗೊಳಿಸಲು ಕಿರುಗಾತ್ರದ ಶಿಲ್ಪಗಳನ್ನು ಹೇರಳವಾಗಿ ಬಳಸಿರುವರು.


ಚಿತ್ರ ೪೨. ಹುಚ್ಚಿಮಲ್ಲಿ ಗುಡಿ ಮೈಥುನ

ಈ ಪುಟ್ಟ ಶಿಲ್ಪಗಳಲ್ಲಿ ಮೈಥುನ ನಿರತ ಜೋಡಿಗಳನ್ನು ರೂಪಿಸಲಾಗಿದೆ. ಗುಹಾಲಯ ಹಾಗೂ ರಾಚನಿಕ ದೇವಾಲಯಗಳ ಉಬ್ಬು ಶಿಲ್ಪಗಳಲ್ಲಿ ಇವನ್ನು ಕಾಣಬಹುದು. ಮೂರನೆಯ ಗುಹಾಲಯದ ಸಭಾಮಂಟಪದ ಕಂಬವೊಂದರ ಮೇಲ್ಭಾಗದಲ್ಲಿ ಸಂಭೋಗ ನಿರತ ಜೋಡಿಯಿದೆ. ಮಹಾಕೂಟೇಶ್ವರನ ನಂದಿಮಂಟಪದ ಕಂಬಗಳ ಮೇಲೆ ಅನೇಕ ಮೈಥುನ ಶಿಲ್ಪಗಳನ್ನು ಬಿಡಿಸಲಾಗಿದೆ. ಚಲುಕ್ಯ ರೂವಾರಿಗಳು ಭೃಷ್ಟ ಮೈಥುನವನ್ನು ಚಿತ್ರಿಸಲು ಹೆಚ್ಚಿನ ಒಲವು ತೋರಿಲ್ಲ . ಆದರೆ ಅವನು ವಿರಳವಾಗಿ ಕಂಡರಿಸಿರುವರು. ಅವುಗಳಲ್ಲಿ ವೈಶಿಷ್ಟಪೂರ್ಣವಾದುದೆಂದರೆ ಹುಚ್ಚಿಮಲ್ಲಿಗುಡಿಯ ಕಕ್ಷಾಸನದ ಹಿಂಬದಿಯಲ್ಲಿ ಕೆತ್ತಲಾದ ಸಮೂಹ ರತಿ ನಿರೂಪಣೆ. **(ಚಿತ್ರ ೪೨)** ಮಹಾವಿಷ್ಣು ಗೃಹದ ಅಧಿಷ್ಠಾನದಲ್ಲಿ ಕುಬ್ಜಗಣರಿಬ್ಬರು ಸಲಿಂಗರತಿಗೆ ಅಣಿಯಾಗುವ ದೃಶ್ಯವಿದೆ. ನಾಗನಾಥ ದೇವಾಲಯದ ಅಧಿಷ್ಠಾನ ಪಟ್ಟಿಯಲ್ಲಿ ಮನುಷ್ಯ ಮತ್ತು ಟಗರಿನ ಭೃಷ್ಟ ಮೈಥುನವು ನಿರೂಪಿತವಾಗಿದೆ.

ಈ ಪುಟ್ಟ ಗಾತ್ರದ ಮಿಥುನ ಶಿಲ್ಪಗಳಲ್ಲಿ ದಂಪತಿಯ ಪಕ್ಕದಲ್ಲಿ ಸೇವಕಿಯನ್ನು ಚಿತ್ರಿಸುವುದು ಗುಣ ಲಕ್ಷಣವೆನಿಸಿದೆ. ಬಾದಾಮಿಯ ಶೈವ ಗುಹೆಯ ಮುಂದಿನ ಕಂಬವೊಂದರ ಮೇಲೆ ಚುಂಬನದಲ್ಲಿ ತೊಡಗಿದ ದಂಪತಿಗಳಿದ್ದಾರೆ. ಅವರ ಎಡ ಬಲಗಳಲ್ಲಿ ಸೇವಕಿಯರಿದ್ದು ನಾಚಿಕೆಯಿಂದ ತಮ್ಮ ಮುಖಗಳನ್ನು ಆಚೆಗೆ ಹೊರಳಿಸಿದ್ದಾರೆ. ಸೇವಕಿಯು ಕೈಯಲ್ಲಿ ಮಧು-ಪಾತ್ರೆಯನ್ನು ಹಿಡಿದಿದ್ದಾಳೆ. ಅಲ್ಲಿನ ಇನ್ನೊಂದು ಜೋಡಿಯು ಪ್ರತ್ಯೇಕ ಆಸನಗಳಲ್ಲಿರುವಂತೆ ಶಿಲ್ಪಿತವಾಗಿದೆ. ಪುರುಷನು, ಪ್ರೇಯಸಿಗೆ ಮಧುಪಾತ್ರೆಯನ್ನು ನೀಡುತ್ತಿದ್ದಾನೆ. ಒಬ್ಬ ಸೇವಕಿ ಹೂಜೆಯನ್ನು ಹಿಡಿದು ಕೊಂಡಿದ್ದಾಳೆ. ಇನ್ನೊಬ್ಬಳು ಬೀಸಣಿಕೆಯನ್ನು ಹಿಡಿದಿರುವಳು. ಈ ಬಗೆಯ ಮಿಥುನ ಶಿಲ್ಪ ನಿರೂಪಣೆಯು ಚಲುಕ್ಯ ಶಿಲ್ಪಿಗಳ ವೈಶಿಷ್ಟ್ಯವೆನಿಸಿದೆ. **(ಚಿತ್ರ ೪೩)**

ಗುಹಾಲಯ ಹಾಗೂ ರಾಚನಿಕ ದೇವಾಲಯಗಳಲ್ಲಿನ ಕಂಬಗಳು ಅಡ್ಡಪಟ್ಟಿಕೆ, ಲಂಬ ಪಟ್ಟಿಕೆ, ಅರ್ಧವರ್ತುಲ, ಪೂರ್ಣವರ್ತುಲಗಳಿಂದ ಅಲಂಕೃತವಾಗಿವೆ. ಅವುಗಳಲ್ಲಿ


ಚಿತ್ರ ೪೩. ಶೈವ ಗುಹೆ, ಬಾದಾಮಿ

ಕಿರುಗಾತ್ರದ ಮಿಥುನ ಶಿಲ್ಪಗಳು ಕಂಡರಣೆಗೊಂಡಿವೆ. ಆಲಂಪುರದ ಗುಡಿಗುಚ್ಛದಲ್ಲಿರುವ ವಿಶ್ವಬ್ರಹ್ಮ ಹಾಗೂ ಸ್ವರ್ಗ ಬ್ರಹ್ಮ ದೇವಾಲಯಗಳ ಹೊರಗೋಡೆಗಳ ಮೇಲೆ ಕ್ರಮವಾಗಿ ೨೦ ಮತ್ತು ೨೧ ಕಿರುಗಾತ್ರದ ಮಿಥುನ ಶಿಲ್ಪಗಳಿವೆ. ಇವುಗಳಲ್ಲಿ ಬಹುಪಾಲು ವಿರೂಪಗೊಂಡಿವೆ.

ಬಾಗಿಲುವಾಡದ ಶಾಖೆಯಲ್ಲಿ ಚಿಕಣಿ ರೂಪದಲ್ಲಿ ಮಿಥುನ ಶಿಲ್ಪಗಳು ಕಾಣಿಸಿಕೊಂಡಿವೆ. ಐಹೊಳೆಯ ಬೌದ್ಧ ಚೈತ್ಯಾಲಯದ ಬಾಗಿಲು ಚೌಕಟ್ಟಿನಲ್ಲಿ ಮತ್ತು ಹುಚ್ಚಿಮಲ್ಲಿಗುಡಿಯ ಗರ್ಭಗೃಹದ ಬಾಗಿಲುವಾಡದಲ್ಲಿ ಇವುಗಳ ನಿರೂಪಣೆಯಿದೆ. ಬಾದಾಮಿಯ ಜಂಬುಲಿಂಗ ದೇವಾಲಯದ ವಿತಾನವು ಮಿಥುನ ಶಿಲ್ಪಗಳನ್ನೊಳಗೊಂಡ ಚೌಕಗಳಿಂದ ಅಲಂಕೃತವಾಗಿದೆ. ಐಹೊಳೆಯ ಮೇಗುತಿಯ ಅಧಿಷ್ಠಾನದಲ್ಲಿ ಮಂಚದ ಮೇಲೆ ಕುಳಿತ ರಸಿಕ ದಂಪತಿಗಳನ್ನು ರೂಪಿಸಿದ್ದಾರೆ. ಮಹಾಕೂಟದ ಪುಷ್ಕರಿಣಿಯ ಪಶ್ಚಿಮ ದಡದ ಗುಡಿಯ ಕಕ್ಷಾಸನದ ಹಿಂಭಾಗದಲ್ಲಿ ಈ ಬಗೆಯ ಶಿಲ್ಪಗಳಿವೆ. ಇವು ಮಂಗಲಕಾರಿ ಯೆಂದೂ, ದುಷ್ಟದೃಷ್ಟಿಯ ಕಣ್ಣುಗಳಿಂದ ರಕ್ಷಿಸುವ ಸಾಧನೆಗಳೆಂದೂ ನಂಬಲಾಗಿದೆ.

### ೨.೦ ಸಾಲಭಂಜಿಕೆಗಳು

ಸಾಲಭಂಜಿಕಾ ಶಿಲ್ಪದ ಕಲ್ಪನೆ ತುಂಬಾ ಪ್ರಾಚೀನವಾದುದು. ವಾಲ್ಮೀಕಿಯ ರಾಮಾಯಣದಲ್ಲಿ ಸಾಲಭಂಜಿಕೆಯ ಪ್ರಸ್ತಾಪವಿದೆ.[5] ಭಾರ್ಹುತ್, ಸಾಂಚಿ ಸ್ತೂಪಗಳಲ್ಲಿ ಈ ಶಿಲ್ಪ ಪ್ರಕಾರವನ್ನು ಕಾಣುತ್ತೇವೆ. ಶಾಲ ಅಥವಾ ಸಾಲ ಎಂದರೆ ವೃಕ್ಷ. 'ಭಂಜಿಕಾ' ಎಂದರೆ ತುಂಡರಿಸುವವಳು ಇಲ್ಲವೆ ಗಾಸಿಗೊಳಿಸುವವಳು ಎಂದು ಅರ್ಥಹೊರಡುತ್ತದೆ. ವನಿತೆಯರು ಉದ್ಯಾನವನದ ಗಿಡ, ಬಳ್ಳಿಗಳೊಡನೆ ಆಟ ವಾಡುತ್ತ ಅವುಗಳ ರೆಂಬೆ ಕೊಂಬೆಗಳನ್ನು ತುಂಡರಿಸುತ್ತಿದ್ದ ಕಾರಣ ಗಿಡದಡಿಯಲ್ಲಿ ನಿಂತ ತರುಣಿಯ ಶಿಲ್ಪವನ್ನು ಸಾಲಭಂಜಿಕಾ ಎಂದು ಗುರುತಿಸಲಾಗುತ್ತಿದೆ. ಗಿಡ ಮತ್ತು ವನಿತೆ ಪರಸ್ಪರ ಫಲದಾಯಕ ಎಂಬ ನಂಬುಗೆಯ ಹಿನ್ನೆಲೆಯಲ್ಲಿ ಈ ಶಿಲ್ಪ ಪ್ರಕಾರ ರೂಪುಗೊಂಡಿದೆ. ಗರ್ಭಿಣಿಗೆ 'ಬಯಕೆ' ಗಳಿರುವಂತೆ ಗಿಡಗಳಿಗೂ ವಿಶಿಷ್ಟವಾದ 'ಬಯಕೆ'ಗಳಿರುತ್ತವಂತೆ. ಈ ಬಯಕೆಗೆ ಸಂಸ್ಕೃತದಲ್ಲಿ 'ದೋಹದ' ಎಂಬ ಪದವಿದೆ. ಇದಕ್ಕೆ ಗರ್ಭಿಣಿಯ ಬಯಕೆ ಮತ್ತು ಹೂ ಬಿಡುವಾಗ ಗಿಡಗಳಗಾಗುವ ಬಯಕೆ ಎಂದು ಎರಡು ಅರ್ಥಗಳಿವೆ. ಒಂದೊಂದು ಗಿಡಕ್ಕೆ ಒಂದೊಂದು ಬಗೆಯ ಬಯಕೆಯಿರುವುದಂತೆ ! ಬಕುಲ ಗಿಡವು ತರುಣಿಯು ಉಗುಳಿ ಚೆಲ್ಲಿದ ಮದ್ಯವನ್ನು ಬಯಸುತ್ತದಂತೆ ! ಅಶೋಕ ಗಿಡವು ಹೂಬಿಡುವ ಸಮಯದಲ್ಲಿ ಕೋಮಲೆಯ ಒದೆತವನ್ನು ಇಚ್ಛಿಸುತ್ತದೆಂದು ನಂಬಲಾಗಿದೆ.

ಈ ಕುರಿತಾಗಿ ಕಾಳಿದಾಸನು ತನ್ನ 'ರಘುವಂಶ'ದಲ್ಲಿ ಪ್ರಸ್ತಾಪಿಸಿದ್ದಾನೆ. ಅದರಂತೆ ನಮೇರು ಗಿಡವು ಯುವತಿಯ ಗಾನವನ್ನು, ಪ್ರಿಯಂಗು ಆಕೆಯ ಸ್ಪರ್ಶವನ್ನು, ಚಂಪಕವು ಹೆಣ್ಣಿನ ಮುಗುಳ್ನಗೆಯನ್ನು ಆಶಿಸುತ್ತವೆ ಎಂದು ಹೇಳಲಾಗಿದೆ. ಗಿಡವು ಹೂಬಿಡಲು ತರುಣಿಯು ನೆರವಾದಂತೆ, ವನಿತೆಯು ಫಲವತಿಯಾಗಲು ಗಿಡಗಳು ನೆರವಾಗುತ್ತವಂತೆ ! ಶಾಲಗಿಡವು ಗರ್ಭಿಣಿಗೆ ಪ್ರಸವಕಾಲದಲ್ಲಿ ಸಹಾಯ ಮಾಡಿದ ಪ್ರಸಂಗವೊಂದು ಜಾತಕ ಕತೆಯಲ್ಲಿ ನಿರೂಪಿತವಾಗಿದೆ.

ಕ್ರಿ. ಪೂ. ೨ ನೆಯ ಶತಮಾನದ ಸಾಂಚೀ ಸ್ತೂಪದ ತೋರಣಗಳಲ್ಲಿ ಬಳ್ಳಿಗಳನ್ನು ಹಿಡಿದು ಓಲಾಡುವ ಚೆಲುವೆಯರ ಮೂರ್ತಿಗಳನ್ನು ಆಲಂಕಾರಿಕ ಶಿಲ್ಪಗಳೆಂದು ಗುರುತಿಸ ಲಾಗಿದೆ. ಆನಂತರ ಅಜಂತಾ, ಎಲ್ಲೋರಾಗಳಲ್ಲಿಯೂ ಈ ಬಗೆಯ ಶಿಲ್ಪಗಳು ಕೆತ್ತನೆ ಗೊಂಡವು. ಅಮರಾವತಿ, ಬಾದಾಮಿಗಳಲ್ಲಿ ಅವುಗಳ ಮುಂದುವರಿಕೆಯನ್ನು ಕಾಣುತ್ತೇವೆ.

ಬಾದಾಮಿಯ ಮೂರನೆಯ ಗುಹಾದೇವಾಲಯದ ಬೋದಿಗೆಗಳು ಸಾಲಭಂಜಿಕಾ ಶಿಲ್ಪಗಳಿಂದ ಅಲಂಕೃತವಾಗಿವೆ. ಅಲ್ಲಿನ ಮೊಗಸಾಲೆಯ ಸ್ವತಂತ್ರ ಕಂಬ ಮತ್ತು ಅರೆಗಂಬಗಳ ಮೇಲೆ ಒಟ್ಟು ಎಂಟು ಸಾಲಭಂಜಿಕೆಗಳನ್ನು ರೂಪಿಸಲಾಗಿದೆ. ಇವೆಲ್ಲವೂ ದಕ್ಷಿಣ ಬದಿಯ

[5] Udai Narayana Rao, Salabhanjika in Art, Literature and Philosophy, Chandigarh, 1974, P. 2.

ಬೋದಿಗೆಗಳಲ್ಲಿರುವುದೊಂದು ವಿಶೇಷ. ಇವು ದಕ್ಷಿಣಭಾರತದಲ್ಲಿನ ಅತಿ ಪ್ರಾಚೀನ ಸಾಲಭಂಜಿಕೆಗಳು. ಇವುಗಳ ಕಾಲ ಕ್ರಿ. ಶ. ೫೭೮.

ಇಲ್ಲಿನ ಪ್ರತಿಯೊಂದು ಸಾಲಭಂಜಿಕೆಯೂ ರಸಂತ ಕವನವನ್ನು ಓದಿದ ಅನುಭವವನ್ನು ನೀಡುವಂತಹದು. ಕವಿಯ ಕಲ್ಪನಾ ವಿಲಾಸವು ಇಲ್ಲಿನ ಶಿಲೆಯಾಗಿ ಘನೀಕೃತಗೊಂಡಂತಿದೆ. ಲಲನೆಯರ ಅಂದವಾದ ಮುಖ, ಅಂಗಾಂಗಗಳ ಪ್ರಕೃತಿದತ್ತ ಚೆಲವು, ಅವುಗಳ ಮೋಹಕ ಮಣಿತಗಳು, ಆಕರ್ಷಕ ನಿಲುವುಗಳು ನೋಡುಗನ ಮನದಲ್ಲಿ ಸೌಂದರ್ಯಾನುಭೂತಿಯನ್ನುಂಟು ಮಾಡುತ್ತವೆ. ಆಭರಣಗಳು, ವೇಷಭೂಷಣಗಳು, ಕೇಶ ವಿನ್ಯಾಸಗಳು ಈ ನಾರಿಯರ ಸೌಂದರ್ಯವನ್ನು ಇಮ್ಮಡಿಗೊಳಿಸಿವೆ.

ಬಾದಾಮಿಯ ಈ ಸಾಲಭಂಜಿಕೆಗಳ ಚೆಲುವೆಯರು ಹಿತಮಿತವಾಗಿ ಆಭರಣಗಳನ್ನು ಧರಿಸಿರುವುದೊಂದು ವಿಶೇಷ. ಹೊಯ್ಸಳ ಕಲೆಯ ಮದನಿಕಾ ವಿಗ್ರಹಗಳಲ್ಲಿ ಇರುವಂತೆ ಆಭರಣಗಳ ಅತಿಯಾದ ಅಲಂಕರಣ ಇಲ್ಲಿಲ್ಲ. ಹಾಗಾಗಿ ಹೆಚ್ಚು ಮೌಲಿಕ ಕಲಾವಂತಿಕೆ ಇಲ್ಲಿ ಪ್ರಕಟವಾಗಿದೆ. ಈ ಚಲುಕ್ಯ ಸಾಲಭಂಜಿಕೆಗಳ ಸೊಗಸುಗಾರಿಕೆಯನ್ನು ಗಮನಿಸೋಣ.

ಈ ಮೂರ್ತಿಗಳು ಕವನಗಳಂತಿವೆ, ಎಂದು ಹೇಳಲಾಯಿತು. ಇದು ಅಲಂಕಾರದ ಮಾತಲ್ಲ, ಕಾವ್ಯ ಎಂದರೆ ಏನು ? ಅದು ಬುದ್ಧಿ, ಭಾವಗಳ ವಿದ್ಯುದಾಲಿಂಗನ. ಈ ಶಿಲ್ಪ ಕಲಾಕೃತಿಗಳಲ್ಲಿಯೂ ವಿಚಾರ ಹಾಗೂ ಭಾವನೆಗಳು ಸಂಗಮಿಸಿರುವುದನ್ನು ಕಾಣುತ್ತೇವೆ. ಶಿಲ್ಪಿಯ ಅನುಭವದ ಜೊತೆಗೆ ಆತನ ಆಲೋಚನೆಯು ಬೆಸಗೊಂಡ ಬಗೆಯನ್ನು ಇಲ್ಲಿ ಮನಗಾಣಬಹುದು. 'ಮಹಾವಿಷ್ಣುಗೃಹ'ದ ಪೂರ್ವಬದಿಯಿಂದ ಮೊದಲನೆಯ ಕಂಬದ ದಕ್ಷಿಣ ಮುಖದ ಮೇಲೆ 'ದರ್ಪಣ ಸುಂದರಿ'ಯ ಸಾಲಭಂಜಿಕೆಯಿದೆ. ಚೆಲವೆ ಗಿಡದಡಿಯಲ್ಲಿ ನಿಂತುಕೊಂಡು ಒಂದು ಕಾಲನ್ನು ಹಿಂದಿರುವ ಗಿಡದ ಕಾಂಡಕ್ಕೆ ಆನಿಸಿದ್ದಾಳೆ. ಎಡಗೈಯಲ್ಲಿ ದುಂಡಾದ ಕನ್ನಡಿಯನ್ನು ಹಿಡಿದುಕೊಂಡು ಬಲಗೈಯಿಂದ ಕೇಶಾಲಂಕಾರವನ್ನು ಮಾಡಿಕೊಳ್ಳುತ್ತಿರುವಂತೆ ಶಿಲ್ಪಿತಳಾಗಿದ್ದಾಳೆ. ಆಕೆಯ ಮುಖದಲ್ಲಿ ಪ್ರಸನ್ನತೆಯಿಲ್ಲ , ನಿರಾಶೆಯ ಛಾಯೆಯಿದೆ. ಹೀಗೆ ಕನ್ನಡಿಯಲ್ಲಿ ತನ್ನ ಸೌಂದರ್ಯವನ್ನು ವೀಕ್ಷಿಸುವ ತರುಣಿಯನ್ನು 'ಮುಕುರ ಮುಗ್ಧೆ' ಎಂದು ಕರೆಯಲಾಗಿದೆ.[1] ಕನ್ನಡಿಯಲ್ಲಿ ಕಾಣುವ ಆ ಚೆಲುವು ಮಿಥ್ಯ. ಸತ್ಯವಲ್ಲ. ಅದು ಕೇವಲ ಪ್ರತಿಬಿಂಬ. ಸೌಂದರ್ಯವು ಶಾಶ್ವತವಾದುದಲ್ಲ . ನಶ್ವರವಾದುದು ಎಂಬ ಭಾವ ಆಕೆಯದು. ಇನಿಯನ ಪಾಲಿಗೆ ತನ್ನ ದೇಹ ಸಿರಿಯು ಕನ್ನಡಿಯ ಗಂಟಾಯಿತೇ ಎಂಬ ವ್ಯಾಕುಲತೆ ಅವಳ ಮನವನ್ನು ಆವರಿಸಿದಂತಿದೆ ! ಶಿಲ್ಪದಲ್ಲಿಯ ಅವಳ ಭಾವನೆಯನ್ನು ಅರ್ಥೈಸಿಕೊಳ್ಳುವುದೆಂದರೆ ಕವನದ ಗೂಢಾರ್ಥವನ್ನು ಗ್ರಹಿಸಿದಂತೆ.



**ಚಿತ್ರ ೫೪. ಮಹಾವಿಷ್ಣು, ಬೋದಿಗೆ, ಸಾಲಭಂಜಿಕಾ ಶಿಲ್ಪ**

ಎರಡನೆಯ ಕಂಬದ ಬೋದಿಗೆಯಲ್ಲಿ ತೋರಮೊಲೆಯ ನೀಳ್ ನಿಲುವಿನ ಸುಂದರ ವನಿತೆಯು ಕೈಯಲ್ಲಿ ಉದ್ದಾದ ತಾಡೋಲೆಯನ್ನು ಹಿಡಿದುಕೊಂಡು ಗಿಡದ ಕೆಳಗೆ ನಿಂತಿದ್ದಾಳೆ. ಪ್ರಾಯಶಃ ಅದು ಪ್ರೇಮದೋಲೆ. ಮಾವಿನಮರವು ಫಲಭರಿತವಾಗಿದೆ. ಆಕೆಯ ಬಲತೋಳಿನ ಹತ್ತಿರ ಎರಡು ಮಂಗಗಳು ಗಂಡಿನ ಮನವನ್ನು ಸಂಕೇತಿಸುವಂತೆ ತೋರುತ್ತದೆ. ಇದು ಶಿಲ್ಪಿಯ ಕಲ್ಪನಾ ವಿಲಾಸ. ಇದು ಶಿಲ್ಪದಲ್ಲಿನ ಲಾವಣ್ಯಯೋಜನೆ. **(ಚಿತ್ರ ೫೪)**

ಮೂರನೆಯ ಕಂಬದ ಸಾಲಭಂಜಿಕೆಯಲ್ಲಿ ತರುಣಿಯು ಚಿಂತಾಕ್ರಾಂತಳಾಗಿ ಹಲಸಿನ ಮರದಡಿಯಲ್ಲಿ ನಿಂತಿರುವಳು. ಇನ್ನೊಂದು ಬೋದಿಗೆಯಲ್ಲಿ ಏಕಾಕಿತನ ಮತ್ತು ವಿಷಾದದ ಭಾವದಿಂದ ಬಳಲುವ ಯುವತಿಯ ಚಿತ್ರಣವಿದೆ. ಗಿಡದಲ್ಲಿ ನವಿಲು ಜೋಡಿಯೊಂದಿದೆ.

[1] ಡಾ. ಜಿ. ಜ್ಞಾನಾನಂದ, ಶಿಲ್ಪಾದರ್ಶ ಸಂಪುಟ ೨, ಹಂಪಿ, ೨೦೦೨, ಪು. ೩೩೩.



ಚಿತ್ರ ೫೫. ಕಂಬ ೩. ಬೋದಿಗೆ, ಸಾಲಭಂಜಿಕಾ ಶಿಲ್ಪ

ಇಲ್ಲಿ ಶಿಲ್ಪಿಯ ಕಲ್ಪನಾ ವಿಲಾಸ ಲಾಸ್ಯವಾಡಿದೆ. ಆ ಜೋಡಿ ಪಕ್ಷಿಗಳಿಗಿರುವ ಭಾಗ್ಯ ತನಗಿಲ್ಲ ಎಂಬ ಕಳವಳ ಆ ಲಲಿತಾಂಗಿಯದು. ವಿರಹ ವೇದನೆ ವ್ಯಕ್ತವಾದ ಪರಿ ಇದು. **(ಚಿತ್ರ ೫೫)**

ಮತ್ತೊಂದು ಬಗೆಯ ಭಾವಾಭಿವ್ಯಕ್ತಿ ಐದನೆಯ ಕಂಬದ ಸಾಲಭಂಜಿಕೆಯಲ್ಲಿ ಪ್ರಕಟವಾಗಿವೆ. ಸುಂದರಿಯು ನಾಚಿಕೆಯಿಂದ ಕೂಡಿದ ಮುಗುಳ್ನಗೆಯೊಂದನ್ನು ಬೀರಿದ್ದಾಳೆ. ಕೈಯಲ್ಲಿಯ ಹೂ ಪ್ರಿಯಕರನ ಕಾಣಿಕೆಯಾಗಿರಬಹುದು. ಅದೇ ಅವಳ ನಗುವಿಗೆ ಕಾರಣವೆಂದು ತೋರುತ್ತದೆ.

ಆರನೆಯ ಕಂಬದ ಬೋದಿಗೆಯಲ್ಲಿ ಚಿತ್ರಣಗೊಂಡ ಯುವತಿಯು ದುಃಖಿತಳಾಗಿದ್ದಾಳೆ. ಆಕೆಯ ನೋಟದಲ್ಲೂ ನಿರಾಶೆಯ ಭಾವ ವ್ಯಕ್ತವಾಗಿದೆ. ಆದರೆ ಪಕ್ಕದ ಅರೆಗಂಬದ ಮೇಲೆ ಸಂತೋಷದಿಂದ ನಗೆ ಚೆಲ್ಲುವ ಚೆಲುವೆ ನಿಂತಿದ್ದಾಳೆ. ಅವಳು ನಕ್ಷೆಗಳಿಂದ ಕೂಡಿದ ಅಂದವಾಗಿರುವ ಸೀರೆ ಧರಿಸಿದ್ದಾಳೆ. ಆಭರಣಗಳಿಂದ ಭೂಷಿತಳಾಗಿದ್ದಾಳೆ.

ಹೀಗೆ ಇಲ್ಲಿನ ಎಂಟು ಸಾಲಭಂಜಿಕೆಗಳನ್ನು ಸಹೃದಯರು ಓದಬಹುದಾಗಿದೆ. ಅವುಗಳಲ್ಲಿ ಮೂಡಿಸಲಾದ ಭಾವ, ಚಿಂತನೆಗಳನ್ನು ಗ್ರಹಿಸಬಹುದಾಗಿದೆ. ಸಾಲಭಂಜಿಕಾ ಶಿಲ್ಪವೆಂದಾಗ ಕನ್ನಡಿಗರಿಗೆ ತಟ್ಟನೆ ನೆನಪಾಗುವುದೆಂದರೆ ಬೇಲೂರಿನ ಚೆನ್ನಕೇಶವ ದೇವಾಲಯದ ಹೊಯ್ಸಳ ಕಲಾಕೃತಿಗಳು. ಆ ಮಂದಿರವು ನಿರ್ಮಾಣಗೊಂಡಿದ್ದು ಕ್ರಿ. ಶ. ೧೧೬೭ರಲ್ಲಿ. ಆ ಮೊದಲು ಸುಮಾರು ಆರು ಶತಮಾನಗಳಷ್ಟು ಹಿಂದೆಯೇ ಚಲುಕ್ಯರ ಈ ಸಾಲಭಂಜಿಕೆಗಳು ಮೂರ್ತಗೊಂಡವು. ಹೊಯ್ಸಳ ಶಿಲ್ಪಕಲೆಗೆ ಇವೇ ಪ್ರೇರಣೆಯಾದವು. ದಕ್ಷಿಣದಲ್ಲಿ ಸಾಲಭಂಜಿಕಾ ಶಿಲ್ಪಗಳ ಸಂಪ್ರದಾಯವನ್ನು ಪ್ರಾರಂಭಿಸಿದ ಖ್ಯಾತಿ ಚಲುಕ್ಯ ರೂವಾರಿಗಳದ್ದು. ಮೂರನೆಯ ಗುಹಾದೇವಾಲಯದ ಬೋದಿಗೆಗಳಲ್ಲಿ ಸಾಲಭಂಜಿಕಾಗಳನ್ನು ರೂಪಿಸಿದಂತೆ ಶಿಲ್ಪಿಗಳು ರಾಚನಿಕ ಮಂದಿರಗಳಲ್ಲಿ ಸಂಯೋಜಿಸಲಿಲ್ಲ . ಇದರಿಂದಾಗಿ ಈ ಶಿಲ್ಪ ಪ್ರಕಾರ ಹಿನ್ನಡೆ ಪಡೆಯಿತು. ಆದಾಗ್ಯೂ ದೇಗುಲಗಳ ಕಂಬಗಳಲ್ಲಿ , ಸ್ವಲ್ಪ ಸಣ್ಣ ಗಾತ್ರದಲ್ಲಿ ಸಾಲಭಂಜಿಕಾಗಳನ್ನು ಸೃಜಿಸಿರುವುದನ್ನು ಕಾಣಬಹುದು. ಪಟ್ಟದಕಲ್ಲಿನ ವಿರೂಪಾಕ್ಷಗುಡಿಯ ನಂದಿಮಂಟಪದ ಎರಡು ಕಂಬಗಳಲ್ಲಿ ಪ್ರತ್ಯೇಕವಾಗಿ ಇಬ್ಬರು ಲಾವಣ್ಯವತಿಯರು ಗಿಡದಡಿಯಲ್ಲಿ ಲಲಿತ ನಿಲುವಿನಲ್ಲಿ ಶಿಲ್ಪಿತರಾಗಿದ್ದಾರೆ. ಇವರೀರ್ವರ ಶಿಲ್ಪ ಸಂಯೋಜನೆ ಒಂದೇ ತೆರನಾಗಿದ್ದು ಇವೆರಡೂ ಒಬ್ಬ ಕಲಾಕಾರನ ಸೃಷ್ಟಿ ಎಂಬಂತಿವೆ. ಅವರ ಕೇಶಬಂಧ, ಆಭರಣ ಹಾಗೂ ಮೈಮಣಿತದಲ್ಲಿನ ಸಾಮ್ಯಗಳು ಈ ಅಭಿಪ್ರಾಯವನ್ನು ಸಮರ್ಥಿಸುತ್ತವೆ.

## ೩.೦ ಇತರ ಮಾನವ ಶಿಲ್ಪಗಳು :

ಚಲುಕ್ಯ ರೂವಾರಿಗಳ ಕಲಾಭಿವ್ಯಕ್ತಿಗೆ ಅಂದಿನ ಸಮಾಜದ ವಿವಿಧ ವರ್ಗಗಳ, ಸ್ತ್ರೀ ಪುರುಷರು ವಸ್ತುವಾಗಿದ್ದಾರೆ. ವಿಭಿನ್ನ ವೃತ್ತಿಯ ವ್ಯಕ್ತಿಗಳು ಶಿಲ್ಪಕಲೆಯಲ್ಲಿ ಮೂಡಿಬಂದಿದ್ದಾರೆ. ಪ್ರಾಚೀನ ಕಾಲದಲ್ಲಿ ಬ್ರಾಹ್ಮಣರು ಅತ್ಯಂತ ಗೌರವಾನ್ವಿತರೆನಿಸಿದ್ದರು. ಸಮಾಜದಲ್ಲಿ ಬ್ರಾಹ್ಮಣರಿಗೆ ಅತ್ಯುಚ್ಚ ಸ್ಥಾನವಿತ್ತೆಂಬುದು ಅನೇಕ ದಾನ ಶಾಸನಗಳಲ್ಲಿ ವ್ಯಕ್ತವಾಗಿದೆ. ಮೊದಲನೆಯ ಪುಲಕೇಶಿ (ಪೊಲೆಕೇಶಿ)ಯು ಅಶ್ವಮೇಧ ಮೊದಲಾದ ಯಜ್ಞಗಳನ್ನು ಮಾಡಿದನೆಂಬುದು ಶಾಸನದಿಂದ ವಿದಿತವಾಗುತ್ತದೆ. ಚಲುಕ್ಯರ ಕಾಲಾವಧಿಯಲ್ಲಿ ನೂರಾರು ದೇವ ಮಂದಿರಗಳು ನಿರ್ಮಾಣಗೊಂಡವು. ಇವೆಲ್ಲವುಗಳಲ್ಲಿ ಧಾರ್ಮಿಕ ವಿಧಿಗಳನ್ನು ನಿರ್ವಹಣೆ ಮಾಡುವ ಅಧಿಕಾರ ಬ್ರಾಹ್ಮಣರದಾಗಿದ್ದಿತು. ಬಾದಾಮಿಯ ಶೈವಗುಹೆಯ



ಚಿತ್ರ ೫೬. ಲಿಂಗಪೂಜೆ

ಕಂಬವೊಂದರಲ್ಲಿ ಶಿವಲಿಂಗವನ್ನು ಈರ್ವರು ಬ್ರಾಹ್ಮಣರು ಶಿವಲಿಂಗವನ್ನು ಪೂಜಿಸುವ ದೃಶ್ಯವಿದೆ (**ಚಿತ್ರ ೫೬**). ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಹೊರಗೋಡೆಯಲ್ಲಿ ಯಜ್ಞಕುಂಡದ ಮುಂದೆ ಕುಳಿತಿರುವ ಬ್ರಾಹ್ಮಣರು ಶಿಲ್ಪಿತರಾಗಿದ್ದಾರೆ. ಸಭಾಮಂಟಪದ ಕಂಬವೊಂದರಲ್ಲಿ ಗುರುಕುಲದ ಸನ್ನಿವೇಶವನ್ನು ಕಾಣುತ್ತೇವೆ. ಅಲ್ಲಿ ಗುರು ತನ್ನ ಶಿಷ್ಯರಿಗೆ ಅಧ್ಯಯನ ಮಾಡಿಸುತ್ತಿದ್ದಾನೆ.

ಶಿಲ್ಪಿಗಳ ವೃತ್ತಿ ಜೀವನಕ್ಕೆ ಆಸರೆ ನೀಡಿದ ಅರಸ ಅರಸಿಯರು ಚಲುಕ್ಯ ಶಿಲ್ಪಗಳಲ್ಲಿ ಬಗೆ ಬಗೆಯಾಗಿ ಶಿಲ್ಪಿತರಾಗಿದ್ದಾರೆ. ಮಿಥುನ ಶಿಲ್ಪಗಳಲ್ಲಿ ಅವರ ರಸಿಕ ಜೀವನದ ಚಿತ್ರಣವಿದೆ. ಹಾಗೆಯೇ ಅವರು ಸಭಾಗೃಹದಲ್ಲಿ ರಾಜಗಾಂಭೀರ್ಯದಿಂದ ಚರ್ಚಿಸುವ ಸನ್ನಿವೇಶ, ಸಂದರ್ಭಗಳನ್ನು ಶಿಲ್ಪಗಳಲ್ಲಿ ಕಂಡರಿಸಲಾಗಿದೆ. ಬಿಡಿಯಾಗಿ ಅರಸನು ರಾಜಪೀಠದಲ್ಲಿ ವಿರಾಜಮಾನನಾಗಿರುವ ದೃಶ್ಯಗಳು ಹಲವಾರು ಕಂಬಗಳ ಮೇಲೆ ಇವೆ. ಒಬ್ಬ ಪುರುಷನು ಇಬ್ಬರು ಸ್ತ್ರೀಯರೊಂದಿಗೆ ಇರುವದನ್ನು ಕೆಲವು ಶಿಲ್ಪಗಳಲ್ಲಿ ನೋಡಬಹುದು. ಬಹು ಪತ್ನಿತ್ವ ಅಂದು ಸ್ವೀಕೃತವಾದ ಸಾಮಾಜಿಕ ಪದ್ಧತಿಯಾಗಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ನಾಡ ರಕ್ಷಕರಾದ ಯೋಧರಿಗೆ ಅಂದು ಹೆಚ್ಚಿನ ಮನ್ನಣೆಯಿದ್ದಿತು. ಶಿಲ್ಪಕಲೆಯಲ್ಲಿ ಮಡದಿಯೊಂದಿಗೆ ಸರಸವಾಡುವ ಯೋಧರು,ಯುದ್ಧವನ್ನಾಡುವ ಯೋಧರು, ಯುದ್ಧಕಲೆಯ ಅಭ್ಯಾಸದಲ್ಲಿ ತೊಡಗಿರುವ ಯೋಧರು ಕಾಣಸಿಗುತ್ತಾರೆ.

ಕಲಾವಿದರು ತಮ್ಮ ಸಮಕಾಲೀನ ಸಮಾಜದ ಎಲ್ಲ ತೆರನಾದ ವ್ಯಕ್ತಿಗಳನ್ನು ಮೂರ್ತಿರೂಪದಲ್ಲಿ ಚಿತ್ರಿಸಿದ್ದಾರೆ. ಅರಮನೆಯ ಬಾಗಿಲು ಕಾಯುವ ಕಾವಲುಗಾರ, ಆನೆ ಸಾಗಿಸುವ ಮಾವುತ, ಹಾವಾಡಿಗ, ಬೀದಿ ಕಲಾವಿದರಾದ ವೇಷಗಾರರು, ಕುಸ್ತಿ ಪಟುಗಳು. ಮೊದಲಾದವರು ರೂವಾರಿಗಳ ಕಲಾಭಿವ್ಯಕ್ತಿಗೆ ವಸ್ತುವಾಗಿದ್ದಾರೆ. ಶ್ರೀ ಸಾಮಾನ್ಯನ ನಿತ್ಯ ಜೀವನದ ಸಣ್ಣ ಘಟನೆಯೂ ಕಲಾವಿದನ ಕಣ್ಣು ತಪ್ಪಿಸಿಲ್ಲ. ಗುಹಾಲಯದ ಕಂಬವೊಂದರ ಮೇಲೆ ಸ್ತ್ರೀಯು ಗಂಡನಿಗೆ ಕಾಲಿನಿಂದ ಒದೆಯುವ ಮತ್ತು ಹೊಡೆಯಲೆಂದು ಬೀಸಣಿಕೆಯನ್ನು ಎತ್ತಿ ಹಿಡಿದಿರುವ ದೃಶ್ಯ ನೋಡುಗನಿಗೆ ಮುದ ನೀಡುವಂತಹುದು. ಇನ್ನೊಂದೆಡೆ ಸ್ತ್ರೀಯು ಪತಿಯ ಸೇವೆ ಮಾಡಲೆಂದು ಆತನ ಕಾಲೊತ್ತಲು ಮುಂದಾಗಿದ್ದಾಳೆ.



**ಚಿತ್ರ ೫೭. ಚಾಮರಧಾರಿಣಿ ವಿರೂಪಾಕ್ಷ ದೇವಾಲಯ, ಪಟ್ಟದಕಲ್ಲು**

ಆದರೆ ಆತನು ಅದನ್ನು ನಿರಾಕರಿಸುತ್ತ ಕೋಪದಿಂದ ಮುಖವನ್ನು ಆಚೆಗೆ ತಿರುಗಿಸಿರುವುದು ಶಿಲ್ಪಿತವಾಗಿದೆ. ದೇವಾಲಯವನ್ನು ಶಿಲ್ಪಗಳಿಂದ ಸಿಂಗರಿಸುವುದರ ಜೊತೆಗೆ ಜೀವನವು ಸರಸ, ವಿರಸಗಳ ಮಿಶ್ರಣವೆಂಬುದನ್ನು ಶಿಲ್ಪಿಯು ಮನಗಾಣಿಸುತ್ತಾನೆ.

ಸ್ತ್ರೀಯರ ಹಲವಾರು ರೂಪಗಳು ಶಿಲ್ಪಗಳಲ್ಲಿ ಪ್ರಕಟಗೊಂಡಿವೆ. ಅವಳು ಪ್ರೇಯಸಿಯಾಗಿ, ಮಡದಿಯಾಗಿ, ಮಾತೆಯಾಗಿ, ಸಖಿಯಾಗಿ, ಅರಸಿಯಾಗಿ, ಸೇವಕಿಯಾಗಿ, ಚಾಮರಧಾರಿಣಿಯಾಗಿ (**ಚಿತ್ರ ೫೭**) ನರ್ತಕಿಯಾಗಿ, ಸಂಗೀತಗಾರಳಾಗಿ, ಶುಕಭಾಷಿಣಿಯಾಗಿ, ಶಿಲ್ಪರೂಪ ತಾಳಿದ್ದಾಳೆ. ಸ್ತ್ರೀ ಸೌಂದರ್ಯದ ಆಗರ. ಆಕೆಯ ಚೆಲುವನ್ನು ಚಿತ್ರಿಸುವುದರ ಮೂಲಕ ಶಿಲ್ಪಿಗಳು ದೇವಾಲಯಗಳ ಅಂದವನ್ನು ಇಮ್ಮಡಿಗೊಳಿಸಿದ್ದಾರೆ.

ಭಾರತೀಯ ಧಾರ್ಮಿಕ ಪರಂಪರೆಯಲ್ಲಿ ಪೌರಾಣಿಕ ಕತೆಗಳಲ್ಲಿ ಅರೆದೈವ ಇಲ್ಲವೆ ಉಪದೇವತೆಗಳನ್ನು ಕಾಣುತ್ತೇವೆ. ಪ್ರಸ್ತುತ ಅಧ್ಯಾಯದಲ್ಲಿ ಈ ಅರೆದೈವ ಶಿಲ್ಪಗಳು ದೇವಾಲಯದ ಸೌಂದರ್ಯವರ್ಧನೆಯಲ್ಲಿ ವಹಿಸಿರುವ ಪಾತ್ರವನ್ನು ವಿವೇಚಿಸಲಾಗಿದೆ. ಅರೆದೈವಗಳು ಪ್ರಧಾನ ದೇವತೆಯ ಪರಿವಾರದಲ್ಲಿ ಸಮಾವೇಶಗೊಳ್ಳುತ್ತವೆ. ಇವರು ಸಾಮಾನ್ಯವಾಗಿ ಮುಖ್ಯದೇವನ, ಭಕ್ತರಾಗಿಯೋ, ಪರಿಚಾರಕರಾಗಿಯೋ, ದ್ವಾರಪಾಲರಾಗಿಯೋ ಆಗಿ ಕಾರ್ಯ ನಿರ್ವಹಿಸುತ್ತಾರೆ. ಅರೆದೈವ ಶಿಲ್ಪಗಳು ಪ್ರಧಾನ ದೇವನ ಪಾರಮ್ಯವನ್ನು ಹೆಚ್ಚಿಸುವದರ ಜೊತೆಗೆ ಆ ದೇವನ ಶಿಲ್ಪ ಸೌಂದರ್ಯವನ್ನು ಹೆಚ್ಚಿಸುವಲ್ಲಿಯೂ ನೆರವಾಗಿವೆ. ಚಲುಕ್ಯ ದೇವಾಲಯಗಳಲ್ಲಿ ನಿರ್ಮಾಣಗೊಂಡ ಇಂಥ ಶಿಲ್ಪಗಳನ್ನು ಈ ಕೆಳಗಿನ ಉಪಶೀರ್ಷಿಕೆಗಳಲ್ಲಿ ಅಭ್ಯಸಿಸಬಹುದು.

## ೧. ಕುಬ್ಜ ಗಣರು

ಶಿವನ ಅನುಚರರಾದ ಗಣರು, ಉಪದೇವತೆಗಳೆಂದು ಪರಿಗಣಿತರು. ಅವರನ್ನು ಶಿವಗಣರೆಂದೇ ಗುರುತಿಸಲಾಗುತ್ತದೆ. ಇಂಥ ಶಿವಗಣರ ಸಂಖ್ಯೆ ೧೬೦೦೦ ಎಂದು ಹೇಳಲಾಗಿದೆ. ಒಟ್ಟು ಗಣರು ೩೬೦೦೦ ಇದ್ದು, ಇವರ ಶಿಲ್ಪಗಳು ವೈಷ್ಣವ ಮಂದಿರಗಳಲ್ಲೂ, ಜಿನಾಲಯಗಳಲ್ಲೂ ಕೆತ್ತನೆಗೊಂಡಿವೆ.[೧] ಇವರ ವಿಶಿಷ್ಟ ಮತ್ತು ವಿಲಕ್ಷಣ ದೇಹಾಕೃತಿಗಳನ್ನು ಅನುಲಕ್ಷಿಸಿ ಇವರನ್ನು ಕುಬ್ಜರೆಂದು ಗುರುತಿಸಲಾಗಿದೆ. ಇವರು ಅತಿ ಮಾನವ ರೂಪದಲ್ಲಿ ಇಲ್ಲವೇ ಪ್ರಾಣಿ ಮುಖಗಳೊಂದಿಗೆ ಶಿಲ್ಪಿತರಾಗಿರುವುದೂ ಉಂಟು.

ಪ್ರಾಚೀನ ಕಾಲದಲ್ಲಿ ಕಾವ್ಯ ರಚನೆಗೆ ಕಾವ್ಯಬಂಧವಿರುವಂತೆ ಶಿಲ್ಪ ರಚನೆಗೆ 'ಶಿಲ್ಪಬಂಧ'ವಿದ್ದಿತು. ನಟರಾಜ (ಮಹಾನಟ), ವಿಷ್ಣು, ಮಹಿಷಾಸುರಮರ್ದಿನಿಗಳಂತಹ ದೇವಶಿಲ್ಪಗಳ ನಿರ್ಮಾಣದಲ್ಲಿ ಪ್ರತಿಮಾಶಾಸ್ತ್ರದ ನಿಯಮಗಳ ಪಾಲನೆ ಕಡ್ಡಾಯವಾಗಿದ್ದಿತು. ಆದರೆ ಗಣರ ಶಿಲ್ಪಗಳನ್ನು ರಚಿಸುವಲ್ಲಿ ಯಾವುದೇ ಬಗೆಯ ನಿರ್ಬಂಧವಿರಲಿಲ್ಲ. ಇದರಿಂದಾಗಿ ಈ ಶಿಲ್ಪ ನಿರ್ವಹಣೆಯಲ್ಲಿ ಕಲಾವಿದರು ಹೆಚ್ಚಿನ ಸ್ವಾತಂತ್ರ್ಯವನ್ನು ಆನಂದಿಸಿದ್ಧರು.

ಆನಂದಕುಮಾರ ಸ್ವಾಮಿಗಳು ಅಭಿಪ್ರಾಯ ಪಡುವಂತೆ ಗಣಶಿಲ್ಪಗಳು ಪ್ರಾಯಶಃ ಯಕ್ಷಶಿಲ್ಪಗಳಿಂದ ಹುಟ್ಟಿಕೊಂಡ ಇನ್ನೊಂದು ಶಿಲ್ಪಪ್ರಕಾರ. ಭಾರ್ಹುತ ಮತ್ತು ಬೋಧಗಯಾಗಳಲ್ಲಿ ಕಟ್ಟಡದ ಛತ್ತನ್ನು ಎತ್ತಿ ಹಿಡಿದಿರುವಂತೆ ಯಕ್ಷರನ್ನು ಚಿತ್ರಿಸಲಾಗಿದೆ. ಹೀಗೆ ತೊಲೆಗಳನ್ನು ಎತ್ತಿ ಹಿಡಿದಿರುವ ಗಣಶಿಲ್ಪಗಳನ್ನು ಬಾದಾಮಿಯ ಜಂಬುಲಿಂಗ, ಐಹೊಳೆಯ ದುರ್ಗಾ, ಹುಚ್ಚಿಮಲ್ಲಿ ಮೊದಲಾದ ದೇವಾಲಯಗಳಲ್ಲಿ ಕಾಣಬಹುದು.ಇವರು ಭಾರವಾಹಕ ಗಣರು. ಕುಬ್ಜ ಗಣಶಿಲ್ಪಗಳ ಉತ್ತಮ ಉದಾಹರಣೆಗಳು ಬಾದಾಮಿಯ ಗುಹಾಲಯಗಳ ಅಧಿಷ್ಠಾನಗಳಲ್ಲಿವೆ.

೧ Ramachandra Rao, S. K. Encyclopaedia of India Iconography, Delhi, P. 393

ಕುಬ್ಜಗೊಂಡ ದಪ್ಪಗಿನ ದೇಹ, ಮೊಟಕೆನಿಸುವ ಕೈ ಕಾಲುಗಳು, ಭಾರವಾಗಿರುವ ಹೊಟ್ಟೆ, ದೊಡ್ಡದಾದ ಮುಖ, ವಿಭಿನ್ನವಾದ ಅಪರೂಪದ ಕೇಶವಿನ್ಯಾಸ ಈ ಲಕ್ಷಣಗಳಿಂದಾಗಿ ಕುಬ್ಜಗಣರ ಶಿಲ್ಪಗಳು ಮನೋರಂಜಕವಾಗಿವೆ. ಈ ಗಣರ ಮುಗ್ಧ ಮುಖಗಳಲ್ಲಿ ಬಗೆ ಬಗೆಯ ಭಾವಗಳನ್ನು, ಅಂಗಾಂಗಗಳಲ್ಲಿ ವಿವಿಧ ಮಣಿತಗಳನ್ನು ರೂಪಿಸುವಲ್ಲಿ ರೂವಾರಿಯ ಕಲಾಕೌಶಲ ಎದ್ದು ಕಾಣುತ್ತದೆ. ಕುಬ್ಜರ ಶಿಲ್ಪಗಳು ಚಲುಕ್ಯರ ವಿಶಿಷ್ಟ ಶಿಲ್ಪಕಾಣಿಕೆಗಳೆನಿಸಿವೆ. ಅಧಿಷ್ಠಾನದ ಬಹುಭಾಗವನ್ನು ಆವರಿಸಿರುವ ಈ ಗಣಶಿಲ್ಪಗಳ ಪಟ್ಟಿಕೆಗಳಿಂದಾಗಿ ಬಾದಾಮಿ ಗುಹಾದೇವಾಲಯಗಳು ವಿಶೇಷ ಕಳೆಯನ್ನು ಪಡೆದಿವೆ.

ಕುಬ್ಜ ಗಣಶಿಲ್ಪಗಳು ಪ್ರಧಾನವಾಗಿ ಅಲಂಕಾರ ಶಿಲ್ಪಗಳು. ಆಕಾರದಲ್ಲಿ ಇವು ಚಿಕ್ಕವು. ಹಾಗಾಗಿ ಸ್ವಲ್ಪ ಸ್ಥಳಾವಕಾಶ ದೊರೆತರೆ ಸಾಕು ಶಿಲ್ಪಿಗಳು ಅದನ್ನು ಇಂಥ ಕಿರುಶಿಲ್ಪಗಳೊಂದಿಗೆ ಸಂಯೋಜಿಸಿರುವುದು ಕಂಡು ಬರುತ್ತದೆ. ಈ ಗಣಶಿಲ್ಪಗಳು ಅನೇಕ ವಾಸ್ತುಅಂಗಗಳನ್ನು ಅಲಂಕರಿಸಿವೆ. ಅವನ್ನು ಹೀಗೆ ವರ್ಗೀಕರಿಸಬಹುದು.

ಅ) ಅಧಿಷ್ಠಾನದಲ್ಲಿಯ ಕುಬ್ಜಗಣರು
ಆ) ಪ್ರಧಾನ ಶಿಲ್ಪಗಳ ಪೀಠದಲ್ಲಿಯ ಕುಬ್ಜಗಣರು
ಇ) ಕಂಬಗಳಲ್ಲಿಯ ಕುಬ್ಜಗಣರು
ಈ) ಪ್ರಸ್ತರದಲ್ಲಿಯ ಕುಬ್ಜಗಣರು
ಉ) ವಿತಾನಗಳಲ್ಲಿಯ ಕುಬ್ಜಗಣರು

**ಅ. ಅಧಿಷ್ಠಾನದಲ್ಲಿಯ ಕುಬ್ಜಗಣರು :**

ಚಲುಕ್ಯ ಸ್ಥಪತಿಗಳು ಗುಹಾದೇವಾಲಯ ಮತ್ತು ರಾಚನಿಕ ಮಂದಿರಗಳನ್ನು ದೂರದಿಂದಲೇ ಅಂದವಾಗಿ ಕಾಣುವಂತೆ ಮಾಡಿದ್ದಾರೆ. ಸೋಪಾನದ ಎಡಬಲಗಳಲ್ಲಿ ಅಧಿಷ್ಠಾನದ ಮೇಲೆ ಕುಬ್ಜಗಣಶಿಲ್ಪಗಳ ಪಟ್ಟಿಕೆಗಳನ್ನು ಯೋಜಿಸಿರುವುದು ಒಂದು ವಿಶೇಷತೆಯಾಗಿದೆ. ಇವು ಶುಭಕರವೆಂದೂ ಶ್ರೇಯಸ್ಕರವೆಂದೂ ನಂಬಲಾಗಿದೆ. ಬಾದಾಮಿಯ ಮೊದಲಿನ ಮೂರು ಗುಹಾಲಯಗಳಿಗೆ ಈ ಗಣಪಟ್ಟಿಕೆಗಳ ಅಲಂಕರಣವಿದೆ. **(ಚಿತ್ರ ೫೮)** ಐಹೊಳೆಯ ರಾವಲಫಡಿಯ ಹೊರಗೋಡೆಯಲ್ಲಿ ಗಣಗಳ ಸಾಲು ಇಲ್ಲದಿದ್ದರೂ ಗುಹಾಲಯದ ಸೋಪಾನದ ಎಡ, ಬಲದಲ್ಲಿ ಒಬ್ಬೊಬ್ಬ ಕುಬ್ಜನನ್ನು ಕೆತ್ತಲಾಗಿದ್ದು, ಅವರಿಬ್ಬರೂ ಎತ್ತಿದ ಕೈಗಳ ಮೇಲೆ ದೇವಾಲಯ ನಿಂತಿರುವಂತೆ ತೋರಿಸಲು ಸ್ಥಪತಿ ಆಲೋಚಿಸಿರುವುದು ವೇದ್ಯವಾಗಿರುತ್ತದೆ. ಇದು ಕಲಾವಿದನ ಸುಂದರ ಕಲ್ಪನೆ. ಆದರೆ ನೇರವಾಗಿ ಗಾಳಿ, ಮಳೆ ಹಾಗೂ ಸೂರ್ಯನ ಶಾಖಕ್ಕೆ ಮೈ ಒಡ್ಡಿಕೊಂಡಿರುವದರಿಂದ ಶಿಲ್ಪಗಳು ಕಳೆಗುಂದಿವೆ. ಬಾದಾಮಿಯ ಶೈವ ಗುಹೆಯ ಅಧಿಷ್ಠಾನದಲ್ಲಿನ ಗಣಶಿಲ್ಪಗಳೂ ಈ



ಚಿತ್ರ ೫೮, ೩ನೆಯ ಗುಹೆ, ಅಧಿಷ್ಠಾನ, ಬಾದಾಮಿ



ಚಿತ್ರ ೫೯. ರಾವಲಪಡಿ, ಒಳನೋಟ

ಬಗೆಯ ಹಾನಿಗೆ ತುತ್ತಾಗಿವೆ. ಎರಡನೆಯದು ವೈಷ್ಣವ ಗುಹೆ. ಇದರ ಅಧಿಷ್ಠಾನದಲ್ಲಿರುವ ಕುಬ್ಜರು ಸುಸ್ಥಿತಿಯಲ್ಲಿದ್ದಾರೆ. ಇಲ್ಲಿ ಕೆತ್ತನೆಗೊಂಡ ಕುಬ್ಜರು ನರ್ತನ ನಿರತರೆಂದು ಡಾ. ಕರುಣಾ ಗುರುತಿಸಿದ್ದಾರೆ. ನೃತ್ಯವು ಭಗವಂತನ ಸಾಕ್ಷಾತ್ಕಾರಕ್ಕೆ ಸಹಾಯಕವಾದುದು. ಇದೊಂದು ತಾಂತ್ರಿಕ ವಿಧ. ಸೋಪಾನದ ಎಡಬಲಗಳಲ್ಲಿ ಕ್ರಮವಾಗಿ ೧೫ ಮತ್ತು ೧೪ ಗಣರಿದ್ದಾರೆ. ಎಡಬದಿಯ ಪಟ್ಟಿಯಲ್ಲಿ ಸಂಗೀತಗಾರರ ಮೇಳವನ್ನು ಕಾಣುತ್ತೇವೆ. ಆರನೆಯ ಶತಮಾನದ ವೇಳೆಗೆ ಬಳಕೆಯಲ್ಲಿದ್ದ ಸಂಗೀತವಾದ್ಯಗಳ ಸ್ವರೂಪವನ್ನು ತಿಳಿದುಕೊಳ್ಳಲು ಈ ಕಿರುಶಿಲ್ಪಗಳು ನೆರವಾಗುತ್ತವೆ. ಅವನದ್ಧ(ಮೃದಂಗ), ತಂತಿ (ಏಕತಾರಿ), ಸುಷಿರ(ಕೊಂಬು), ಹಾಗೂ ಘನ(ತಾಳ) ವಾದ್ಯಗಳನ್ನು ನುಡಿಸುತ್ತ ಕುಬ್ಜರು ಕುಣಿಯುತ್ತಿದ್ದಾರೆ. ಜೊತೆಗಾರರೂ ಕುಣಿತದಲ್ಲಿ ಭಾಗಿಯಾಗಿದ್ದಾರೆ. ಅಂದಿನ ಸಾಮಾನ್ಯ ಜನರ ಜೀವನವು ಸಂತೋಷ, ಉತ್ಸಾಹಗಳಿಂದ ರಮ್ಯವಾಗಿದ್ದಿತೆಂಬುದನ್ನು ಈ ಶಿಲ್ಪಗಳು ಸೂಚಿಸುತ್ತವೆ. ಈ ಗಣರು ಸಮಾಜದ ಕೆಳಸ್ತರದಲ್ಲಿರುವ ಶ್ರೀ ಸಾಮಾನ್ಯರ ಪ್ರತಿನಿಧಿಗಳು.

ಮೂರನೆಯ ಗುಹಾಲಯವು ಏಕಶಿಲಾ ನಿರ್ಮಿತವಾಗಿದ್ದರೂ ಅದರ ಅಧಿಷ್ಠಾನ ಮಾತ್ರ ಕಟ್ಟಡ ಶೈಲಿಯದು ! ಅಂದರೆ ಅಧಿಷ್ಠಾನವು ರಾಚನಿಕವಾದುದು. ಸೋಪಾನವು ಆಧುನಿಕ ಕಾಲದ ಜೋಡಣೆ. ಅದರ ಎಡಭಾಗಗಳಲ್ಲಿಯ ಗಣಶಿಲ್ಪಗಳು ವಿಭಿನ್ನ ರೀತಿಯಲ್ಲಿ ನಿರೂಪಿತವಾಗಿವೆ. ಇಬ್ಬಿಬ್ಬರು ಒಂದೊಂದು ಪ್ರತ್ಯೇಕ ಚೌಕಟ್ಟಿನಲ್ಲಿ ಶಿಲ್ಪಿತರಾಗಿದ್ದಾರೆ. ಹಾಗಾಗಿ ಅಧಿಷ್ಠಾನಕ್ಕೆ ಹೆಚ್ಚಿನ ಚೆಲುವನ್ನು ಬೆಸೆದಂತಾಗಿದೆ. ಸೋಪಾನದ ಎಡಕ್ಕೆ ಬಲಕ್ಕೆ ಕ್ರಮವಾಗಿ ೧೬ ಮತ್ತು ೧೭ ಜೋಡಿ ಗಣರಿದ್ದಾರೆ. ಅಂದಿನ ಸಾಮಾಜಿಕ ಜೀವನದ ಚಿತ್ರಣವೇ ಈ ಕುಬ್ಜಶಿಲ್ಪಗಳ ಪ್ರಧಾನ ವಸ್ತುವಾಗಿದೆ.

ಚಲುಕ್ಯ ಸ್ಥಪತಿಗಳು ಗುಹಾಲಯದ ಉಪಮಂಟಪದ ಅಧಿಷ್ಠಾನವನ್ನು ಕೂಡ ಈ ಬಗೆಯ ಕುಬ್ಜಗಣಶಿಲ್ಪಗಳಿಂದ ಅಂದಗೊಳಿಸಿದ್ದಾರೆ. ಐಹೊಳೆಯ ರಾವಲಫಡಿಯಲ್ಲಿ ಬರಿದಾದ ಅಪೂರ್ಣ ಉಪಮಂಟಪವೊಂದಿದೆ. ಅದರ ಸೋಪಾನದ ಎಡಬಲಗಳಲ್ಲಿ ಮೂವರು ಕುಬ್ಜರಿಂದ ಅಲಂಕೃತಗೊಂಡ ಎರಡು ಗಣಪಟ್ಟಿಕೆಗಳಿವೆ. **(ಚಿತ್ರ ೫೯)** ಈ ಕುಬ್ಜರು ವಿಶಿಷ್ಟ ಹಾಗೂ ವಿಭಿನ್ನ ಶೈಲಿಯಲ್ಲಿ ನಿರೂಪಿತರು. ಇವರು ಯೋಗಾಸನ ಸನ್ನಿವೇಶವನ್ನು ನೆನಪಿಸುತ್ತಾರೆ. ಒಬ್ಬನು ಬಲಗೈಯನ್ನು ನೆಲಕ್ಕೆ ಊರಿ ಎಡಗಾಲು, ಎಡಗೈಯನ್ನು ಹಿಡಿದಿದ್ದಾನೆ. ನಡುವಿನವನು ಆಸನವನ್ನು ಹಾಕಿರುವ ಸ್ಥಿತಿಯಲ್ಲಿರುವಂತೆ ತೋರುತ್ತದೆ. ನೆಲದಿಂದ ಗೋಣನ್ನು ಎತ್ತಿ ಹಿಡಿದಿರುವ ಆತನು ಕಾಲುಗಳನ್ನು ಹಿಂದಿನಿಂದ ತಲೆಯ ಮೇಲೆ ಬರುವಂತೆ ಮಣಿಸಿದ್ದಾನೆ. ಇನ್ನೊಬ್ಬನು ಎಡಗೈಯನ್ನು ನೆಲಕ್ಕೆ ಊರಿ ಬಲಗಾಲು, ಬಲಗೈಯನ್ನು ಮೇಲೆತ್ತಿದ್ದಾನೆ. ಒಂದನೆಯ ಹಾಗೂ ಮೂರನೆಯ ಗಣರು ಯೋಗಾಸನದ ಮೊದಲಿನ ಹಾಗೂ ಕೊನೆಯ ಹಂತವನ್ನು ಸೂಚಿಸುತ್ತಿರಬಹುದು. ಸೋಪಾನದ

ಡಾ. ಕರುಣಾ ವಿಜಯೇಂದ್ರ, ಕರ್ನಾಟಕ ದೇವಾಲಯಗಳಲ್ಲಿ ರಂಗಭೋಗ (ನೃತ್ಯ), ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ. ೨೦೦೮, ಪುಟ. ೨೦೬.

M. Adinarayana, Decorative Arts of South Indian Temple. Delhi, P. 46.

ಇನ್ನೊಂದು ಪಟ್ಟಿಕೆಯಲ್ಲಿಯೂ ಮೂವರು ಗಣರಿದ್ದಾರೆ. ಮೂವರು ಮಕ್ಕಳು ಮಲಗಿಕೊಂಡಿರುವಂತೆ ಕಾಣುವ ದೃಶ್ಯವದು. ಅವರು ವಿಭಿನ್ನ ಮೈಮಣಿತಗಳಲ್ಲಿ ಶಿಲ್ಪಿತರಾಗಿದ್ದಾರೆ. ಬಾದಾಮಿ ಶೈವಗುಹೆಯು ಉಪಗುಹೆಯನ್ನು ಹೊಂದಿದೆ. ಇದರ ಅಧಿಷ್ಠಾನದಲ್ಲಿ ಹತ್ತು ಕುಬ್ಜರು ವೈವಿಧ್ಯಮಯವಾಗಿ ವಿವಿಧ ಚಟುವಟಿಕೆಗಳಲ್ಲಿ ತೊಡಗಿರುವುದನ್ನು ಕಾಣಬಹುದು. ಆದರೆ ಅವು ಬಹಳಷ್ಟು ಸವಕಳಿಗೊಂಡಿವೆ.

ಮಾಲಗಿತ್ತಿ ಶಿವಾಲಯವು ಕಟ್ಟಡ ಶೈಲಿಯ ಸುಂದರ ಮಂದಿರ. ಈ ದೇಗುಲದ ವಿಶೇಷ ಆಕರ್ಷಣೆ ಎಂದರೆ ಅಧಿಷ್ಠಾನದ ಗಳ ಮತ್ತು ಆ ಭಾಗದಲ್ಲಿರುವ ಕುಬ್ಜರ ಕಂಡರಣೆ. ದೇವಾಲಯದ ಸುತ್ತಲೂ ಅಧಿಷ್ಠಾನದಲ್ಲಿ ಕುಬ್ಜರನ್ನು ರೂಪಿಸಲು ಸೂತ್ರಧಾರನಾದ ಆರ್ಯಮಂಚಿ ಉಪಾಧ್ಯಾಯನು ಯೋಜನೆ ಮಾಡಿದ್ದನಾದರೂ ಅದು ಹಲವಡೆ ಕಾರ್ಯಗತಗೊಂಡಿಲ್ಲ. ಕೆಲವಡೆ ಗಣರು ರೇಖೆಗಳಲ್ಲಿ ಮಾತ್ರ ಉಳಿದುಕೊಂಡಿದ್ದಾರೆ. ಪೂರ್ವ ಹಾಗೂ ದಕ್ಷಿಣ ಗೋಡೆಗಳ ಅಧಿಷ್ಠಾನಗಳು ಈ ಕುಬ್ಜರ ಶಿಲ್ಪಗಳಿಂದ ಅಲಂಕೃತವಾಗಿವೆ. ಗುಹಾಲಯದಲ್ಲಿ ಇವರು ಹೆಚ್ಚಿನ ಮಟ್ಟಿಗೆ ಸಂಗೀತಗಾರರಾಗಿ ಬಿಂಬಿತರಾಗಿರುವುದನ್ನು ಕಂಡಿದ್ದೇವೆ. ಆದರೆ ಇಲ್ಲಿನ ಕುಬ್ಜರು ಸಾಮಾಜಿಕ ಜೀವನದ ಉಳಿದ ಸನ್ನಿವೇಶಗಳನ್ನು ಪ್ರತಿನಿಧಿಸುವುದನ್ನು ಗಮನಿಸಬಹುದು. ಮೇಲಿನ ಶಿವಾಲಯದ ಮತ್ತು ಮಾಲೆಗಿತ್ತಿ ಶಿವಾಲಯದ ಅಧಿಷ್ಠಾನದ ಗಣಪಟ್ಟಿಕೆಗಳಲ್ಲಿ ತಲೆಯ ಮೇಲೆ ಪುಟ್ಟಿ ಹೊತ್ತ, ಕೈಯಲ್ಲಿ ಚಾಮರ ಇಲ್ಲವೆ ದಂಡ ಹಿಡಿದ, ಮಲ್ಲ ಯುದ್ಧದಲ್ಲಿ ತೊಡಗಿದ ಇಲ್ಲವೆ ಸಂಗೀತ ವಾದ್ಯಗಳೊಂದಿಗೆ ಕುಣಿಯುವ ಕುಬ್ಜರನ್ನು ಕಂಡರಿಸಲಾಗಿದೆ. **(ಚಿತ್ರ ೬೦)** ಈ ಕುಬ್ಜರ



ಚಿತ್ರ ೬೦. ಮೇಲಿನ ಶಿವಾಲಯದ ಅಧಿಷ್ಠಾನ

ವೇಷಭೂಷಣ, ಆಭರಣಗಳಲ್ಲಿ ಭಿನ್ನತೆಯಿದೆ. ಭಿನ್ನ ಶಿಲ್ಪ ಸಂಪ್ರದಾಯದ ರೂವಾರಿಗಳು ಈ ಶಿಲ್ಪ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದುದನ್ನು ಅವು ಸೂಚಿಸುತ್ತವೆ.

**ಆ. ಪ್ರಧಾನ ಶಿಲ್ಪಗಳ ಪೀಠದಲ್ಲಿ ಕುಬ್ಜಗಣರು**

ಬೃಹದಾಕಾರದ ದೇವ ಶಿಲ್ಪಗಳು ಗುಹಾದೇವಾಲಯಗಳಲ್ಲಿ ಕಂಡರಣೆಗೊಂಡಿವೆ. ಐಹೊಳೆಯ ರಾವಲಫಡಿ ಹಾಗೂ ಬಾದಾಮಿಯ ಗುಹಾಲಯಗಳಲ್ಲಿ ಇವನ್ನು ಕಾಣುತ್ತೇವೆ. ಬೃಹತ್ ಗಾತ್ರದ ದೇವ ಶಿಲ್ಪಗಳ ಪೀಠಗಳನ್ನು ಕುಬ್ಜಗಣರ ಶಿಲ್ಪಗಳಿಂದ ಸಿಂಗರಿಸಲಾಗಿದೆ. ಕೆಲವೆಡೆ ಮಧ್ಯಮ ಗಾತ್ರದ ದೇವಶಿಲ್ಪಗಳ ಕೆಳಗೂ ಈ ಅಲಂಕರಣವಿದೆ. ರಾವಲಫಡಿಯಲ್ಲಿ ಹರಿ ಮತ್ತು ಹರರು ಬಿಡಿ ಬಿಡಿಯಾಗಿ, ಆದರೆ ಒಂದೇ ಪೀಠದ ಮೇಲೆ ಶಿಲ್ಪಿತರಾಗಿದ್ದಾರೆ. ಈ ಪೀಠದಲ್ಲಿ ನಾಲ್ವರು ಗಣರಿದ್ದಾರೆ. ಅವರಲ್ಲಿ ಒಬ್ಬನು ಸುಷಿರ ವಾದ್ಯವನ್ನು, ಇನ್ನೊಬ್ಬನು ಅವನದ್ಧ ವಾದ್ಯ(ಮೃದಂಗ)ವನ್ನು, ಮತ್ತೊಬ್ಬನು ತಂತಿವಾದ್ಯವನ್ನು ನುಡಿಸುತ್ತಿದ್ದರೆ, ಕೊನೆಯವನು ಗಾಯಕನಾಗಿದ್ದಾನೆ. ಹೀಗೆ ಅದೊಂದು ಸಂಗೀತಗಾರರ ಮೇಳವಾಗಿದೆ. ಇವರ ಎದುರಿಗಿರುವ ಗೋಡೆಯ ಮೇಲೆ ಶಿವ ಭೃಂಗಿಯರ ಕೆಳಗೆ ಮತ್ತೊಂದು ವಿಭಿನ್ನ ಬಗೆಯ ಕುಬ್ಜರ ಸಮೂಹವಿದೆ. ಅವರಲ್ಲಿ ಒಬ್ಬನು ಪಕ್ಕೆಲಬು ಕಾಣುವಷ್ಟು ಬಡಕಲಾಗಿದ್ದಾನೆ. ಇನ್ನೊಬ್ಬನು ಸರ್ಪವನ್ನು ಕೈಯಲ್ಲಿ ಹಿಡಿದುಕೊಂಡು ಅದನ್ನೇ ದಿಟ್ಟಿಸುತ್ತಿದ್ದಾನೆ. ಆತನ ಪಕ್ಕದಲ್ಲಿ ಇನ್ನಿಬ್ಬರು ಗಣರಿದ್ದಾರೆ. ಒಬ್ಬನು ತ್ರಿಶೂಲಧಾರಿಯಾಗಿದ್ದಾನೆ. ಶಿವನ ಇನ್ನೊಂದು ಬೃಹತ್ ಶಿಲ್ಪವು ನಟರಾಜ ಮಂಟಪದ ಎಡಬದಿಗಿದೆ. ಅದರ ಕೆಳಗೆ ಗಣನೊಬ್ಬನು ಅಧಿಷ್ಠಾನಕ್ಕೆ ಆತುಕೊಂಡು ಕುಳಿತ ಭಂಗಿ ವಿಶಿಷ್ಟವಾಗಿದೆ.

ಬಾದಾಮಿಯ ಶೈವ ಗುಹೆಯ ಪಶ್ಚಿಮ ಬದಿಯಲ್ಲಿ ಉಪಗುಹೆಯೊಂದಿದೆ. ಅಲ್ಲಿಯ ಪ್ರಧಾನ ಶಿಲ್ಪಗಳು ಮಧ್ಯಮ ಗಾತ್ರದವು. ಮಹಿಷಾಸುರ ಮರ್ದಿನಿಯ ಕೆಳಗೆ ಒಂಬತ್ತು ಕುಬ್ಜರು ನರ್ತನಗೈಯುತ್ತಿದ್ದಾರೆ. ಅವರಲ್ಲಿ ಒಬ್ಬನು ಕುದುರೆಯ ಮುಖ ಹೊಂದಿದ್ದು ಕೈಯಲ್ಲಿ ಸರ್ಪವನ್ನು ಹಿಡಿದು ಕುಣಿಯುತ್ತಿದ್ದಾನೆ. ಉಳಿದ ಗಣರ ಕೇಶ ವಿನ್ಯಾಸ ಗುಂಗುರು ಕೂದಲಿನಿಂದಾಗಿ ಆಕರ್ಷಕವಾಗಿದೆ. ಉಪಗುಹೆಯ ಎಡ ಬಲದ ಗೋಡೆಗಳಲ್ಲಿ ಗಣೇಶ, ಕಾರ್ತಿಕೇಯರ ಶಿಲ್ಪಗಳಿದ್ದು ಕೆಳಗೆ ಇಬ್ಬರು ಗಣರನ್ನು ಕೆತ್ತಲಾಗಿದೆ. ಕಾರ್ತಿಕೇಯನ ಕೆಳಗಿರುವ ಗಣರು ಚಮತ್ಕಾರಿಕವಾಗಿ ಸಂಯೋಜಿತರಾಗಿದ್ದಾರೆ. ಇಬ್ಬರು ಗಣರಿದ್ದರೂ ಚಾಕ್ಷುಷ ಭ್ರಮೆಯಿಂದಾಗಿ ನಾಲ್ವರು ಇದ್ದಿರುವಂತೆ ಭಾಸವಾಗುತ್ತದೆ. ಇದು ತುಂಬಾ ಜನಪ್ರಿಯವಾದ ಚತುರ ಶಿಲ್ಪ. ಪೂರ್ವದ ಗೋಡೆಯ ಬೃಹತ್ ಶಿಲ್ಪವು ಹರಿಹರನದು. ಆತನ ಪೀಠದಡಿಯ ಪಟ್ಟಿಕೆಯಲ್ಲಿ ಎಂಟು ಗಣಶಿಲ್ಪಗಳನ್ನು ಸಂಯೋಜಿಸಲಾಗಿದೆ. ಇದೂ ಕೂಡ ಸಂಗೀತಗಾರರ ಮೇಳ. ಇಲ್ಲಿ ಮೂರು ಸುಷಿರವಾದ್ಯಗಳಿರುವುದು ವಿಶೇಷ.

ಇಲ್ಲಿಯ ಎರಡನೆಯ ಗುಹಾಲಯದಲ್ಲಿ ತ್ರಿವಿಕ್ರಮನ ಬೃಹತ್‌ಶಿಲ್ಪವಿದೆ. ಇದರ ಕೆಳಗಿರುವ ಕುಬ್ಜರ ಸಮೂಹವು ಉತ್ಕೃಷ್ಟ ಕಲಾಕೃತಿಯಾಗಿದೆ. ಇದೂ ಸಹ ಒಂದು ವಾದ್ಯ ವೃಂದ. ಮೊದಲನೆಯವನು ಘನವಾದ್ಯ(ತಾಳ)ವನ್ನು, ಎರಡನೆಯವನು ಸುಷಿರ(ಕೊಳಲು) ವಾದ್ಯವನ್ನು, ಮೂರನೆಯವನು ಚರ್ಮವಾದ್ಯ(ಮೃದಂಗ)ವನ್ನು ನಾಲ್ಕನೆಯವನು ಮತ್ತೊಂದು ಪ್ರಕಾರದ ಸುಷಿರ (ಕೊಂಬು) ವಾದ್ಯವನ್ನು ನುಡಿಸುತ್ತ ಕುಣಿಯುತ್ತಿದ್ದಾರೆ. ಜೊತೆಗೆ ಇಬ್ಬರು ನರ್ತಕರಿದ್ದಾರೆ. ಅಗಲವಾದ ಭಾವ ಪೂರ್ಣ ಮುಖ, ವಿವಿಧ ನರ್ತನ ಭಂಗಿ, ಭಾರವಾದ ಹೊಟ್ಟೆ, ಅಪರೂಪವೆನಿಸುವ ಗುಂಗುರು ಕೂದಲಿನ ಕೇಶ ವಿನ್ಯಾಸ ಇವುಗಳಿಂದಾಗಿ ಈ ಗಣ ಸಮೂಹವು ಅಪೂರ್ವವೆನಿಸಿದೆ. ಪಶ್ಚಿಮದ ದ್ವಾರಪಾಲಕನ ಕೆಳಗೆ ಶಿಲ್ಪಿತರಾದ ನಾಲ್ವರು ಕುಬ್ಜರು ಕುಚೇಷ್ಟೆಗಳಲ್ಲಿ ನಿರತರಾಗಿದ್ದಾರೆ. ಅವರು ಸರ್ಕಸ್ಸಿನ ಹಾಸ್ಯಗಾರ (clown) ರನ್ನು ನೆನಪಿಸುತ್ತಾರೆ. ಅವರನ್ನು ನೋಡುತ್ತಲೇ ನೋಡುಗನು ನಗೆ ಚೆಲ್ಲುತ್ತಾನೆ.

ಮೂರನೆಯ ಗುಹಾಲಯದ ಮಹಾವಿಷ್ಣು ಮತ್ತು ವರಾಹ ದೇವತೆಗಳ ಬೃಹತ್ ಶಿಲ್ಪಗಳ ಕೆಳಗೆ ಕ್ರಮವಾಗಿ ೧೭ ಮತ್ತು ೮ ಜನ ಕುಬ್ಜರನ್ನು ಕಂಡರಿಸಲಾಗಿದೆ. ಇವೂ ಸಹ ಸಂಗೀತಗಾರರ ಮತ್ತು ನರ್ತಕರ ಸಮೂಹಗಳೇ. ಈ ಗಣಪಟ್ಟಿಕೆಗಳ ಔಚಿತ್ಯವನ್ನು ಹೀಗೆ ವಿವರಿಸಬಹುದು. ಬೃಹದಾಕಾರದ ಪ್ರಧಾನ ಶಿಲ್ಪವು ದೇವ ಇಲ್ಲವೆ ದೇವಿಯ ವಿಶಿಷ್ಟ ರೂಪ ಇಲ್ಲವೆ ಪೌರಾಣಿಕ ಸನ್ನಿವೇಶವನ್ನು ನೆನಪಿಸುವದರ ಮೂಲಕ ಗಹನವಾದ ಧಾರ್ಮಿಕ ಚಿಂತನೆಯತ್ತ ನಮ್ಮ ಮನಸ್ಸನ್ನು ಕರೆದೊಯ್ಯುತ್ತದೆ. ಪ್ರಧಾನ ಶಿಲ್ಪದ ಸಾಂಕೇತಿಕತೆಯ ಒಗಟನ್ನು ಬಿಡಿಸುವಲ್ಲಿ ನೋಡುಗ ಗಂಭೀರ ಚಿತ್ತನಾಗುತ್ತಾನೆ. ಆದರೆ ಅದರ ಪೀಠದಲ್ಲಿ ಬಿಂಬಿತವಾದ ಗಣಪಟ್ಟಿಕೆಯು ಮಾನವ ಲೋಕದ ಚಿತ್ರಣವಾಗಿದೆ! ಅದು ರಂಜನೀಯವಾಗಿರುವದರಿಂದ ಮನಸ್ಸು ಹಗುರಗೊಳ್ಳುತ್ತದೆ. ಈ ಕುಬ್ಜರು ನಮ್ಮನ್ನು 'ಪರ ಚಿಂತನೆ'ಯಿಂದ 'ಇಹ ಚಿಂತನೆ'ಯತ್ತ ಕರೆತರುತ್ತಾರೆ. ಹೀಗೆ ಇಹ-ಪರಗಳನ್ನು ಒಂದೆಡೆ ಜೊತೆ ಜೊತೆಯಾಗಿ ಸಂಯೋಜಿಸಿದ ಚತುರತೆ ಚಲುಕ್ಯ ರೂವಾರಿಗಳದ್ದು. ಈ ಬಗೆಯ ಕುಬ್ಜ ಗಣರ ಸಾಲುಗಳು ಚಲುಕ್ಯ ಕಲಾವಿದರ ವಿಶಿಷ್ಟ ಕಾಣಿಕೆ ಎನಿಸಿವೆ. ಚಲುಕ್ಯೋತ್ತರ ಕಾಲದಲ್ಲಿ ಇದೊಂದು ಕಲಾ ಪರಂಪರೆಯಾಗಿ ಮುಂದುವರೆಯಿತೆಂಬುದು ಗಮನಾರ್ಹ ಸಂಗತಿ.


ಚಿತ್ರ ೬೧. ದುರ್ಗಾ ದೇವಾಲಯದ ಕಂಬ, ಗಣರು

**ಇ. ಕಂಬಗಳಲ್ಲಿಯ ಕುಬ್ಜಗಣರು**

ಗುಹಾಲಯ ಮತ್ತು ರಾಚನಿಕ ದೇಗುಲಗಳ ಕಂಬಗಳಿಗೆ ಹೆಚ್ಚಿನ ಚೆಲುವನ್ನು ತುಂಬಲು ಕುಬ್ಜರ ಶಿಲ್ಪಗಳನ್ನು ಕೆತ್ತಲಾಗಿದೆ. ಬಾದಾಮಿ ಶೈವಗುಹೆಯ ಮುಖಮಂಟಪದ ಮುಂದಿನ ಪ್ರತಿ ಕಂಬ ಮತ್ತು ಅರೆಗಂಬಗಳ ಮೇಲ್ಭಾಗದಲ್ಲಿ ಜಂತಿಗೆ ಹೊಂದಿಕೊಂಡಂತೆ ಪ್ರತ್ಯೇಕ ಕುಬ್ಜರು ರೂಪಿತರಾಗಿದ್ದಾರೆ. ಕೊರಳಹಾರ, ಕೇಯೂರ ಆಭರಣಗಳನ್ನು ಧರಿಸಿರುವ ಇವರು ನಗ್ನರೂಪದಲ್ಲಿರುವುದು ವಿಶೇಷ ! ಮೂವರು ಕೈಯಲ್ಲಿ ಕಮಲ ಪುಷ್ಪ ಹಿಡಿದಿರುವರು. ಎರಡನೆಯ ಗುಹಾಲಯದ ಪಶ್ಚಿಮ ಕಡೆಗಿನ ಮೊದಲನೆಯ ಕಂಬದ ನಾಲ್ಕು ಬದಿಗಳು ಜ್ಯಾಮಿತಿ ಹಾಗೂ ಪುಷ್ಪ ನಕ್ಷೆಗಳಿಂದ ಅಲಂಕೃತವಾಗಿವೆ. ಇವೆರಡರ ಮಧ್ಯ ಇರುವ ಪಟ್ಟಿಕೆಯಲ್ಲಿ ಕುಬ್ಜರು ವಿವಿಧ ಚಟುವಟಿಕೆಗಳಲ್ಲಿ ತೊಡಗಿರುವಂತೆ ಚಿಕಣಿ ಶಿಲ್ಪಗಳನ್ನು ಸಂಯೋಜಿಸಲಾಗಿದೆ. ಕಂಬದ ದಕ್ಷಿಣ ಬದಿಯಲ್ಲಿ ಇಂಥ ವಿನ್ಯಾಸದಲ್ಲಿ ಇಬ್ಬರು ಕುಬ್ಜರು ಗದಾ ಪ್ರಯೋಗದಲ್ಲಿ ತೊಡಗಿರುವಂತೆ, ಉಳಿದವರು ಅದನ್ನು ವೀಕ್ಷಿಸುವಂತೆ ಕಂಡು ಬರುತ್ತಾರೆ, ಮಿಕ್ಕ ಮೂರು ಬದಿಗಳಲ್ಲಿ ಅವರು ದೀರ್ಘ ವೃತ್ತಾಕಾರದ ಗೂಡುಗಳಲ್ಲಿ ನರ್ತಕರಾಗಿ ನಿರೂಪಿತರು. ಪೂರ್ವದ ಬದಿಯ ಪಟ್ಟಿ ಗಮನಾರ್ಹವಾಗಿದೆ. ಅಲ್ಲಿ ಮೊದಲಿನ ಗೂಡಿನಲ್ಲಿ ಮೂವರು ಗಣರನ್ನು ನಾಲ್ಕು ಕೈ, ಕಾಲುಗಳಿಂದ ರೂಪಿಸಲಾಗಿದೆ. ಇಂಥದೇ ಕೆತ್ತನೆಯನ್ನು ಮೂರನೆಯ ಗುಹೆಯ ಎರಡನೆಯ ಕಂಬದಲ್ಲಿ ಕಾಣುತ್ತೇವೆ. ಇವೆರಡೂ ಒಬ್ಬನೇ ಶಿಲ್ಪಿಯ ಕಲಾಕೃತಿ ಎಂದು ತೋರುತ್ತದೆ. ಎರಡನೆಯ ಗುಹೆಯ ಶಿಲ್ಪ ಕಾರ್ಯದಲ್ಲಿ ತೊಡಗಿದ ಕೆಲವು ಶಿಲ್ಪಿಗಳು ಮೂರನೆಯ ಗುಹಾ ನಿರ್ಮಾಣದಲ್ಲಿಯೂ ತೊಡಗಿರುವ ಬಗ್ಗೆ ಕಿರು ಶಾಸನಗಳು ಸುಳಿವು ನೀಡುತ್ತವೆ.

ಐಹೊಳೆಯ ದುರ್ಗಾ ದೇವಾಲಯದ ಒಳಮಂಟಪದ ನಾಲ್ಕು ಕಂಬಗಳು ಕಲಾತ್ಮಕವಾಗಿ ಮೈವಡೆದಿವೆ. ಇಲ್ಲಿನ ಕುಬ್ಜಗಣರ ಸಾಲುಗಳಿರುವ ಪಟ್ಟಿಕೆಗಳು ಅವುಗಳ ಸೌಂದರ್ಯವನ್ನು ವರ್ಧಿಸಿವೆ. **(ಚಿತ್ರ ೬೧)** ಕಂಬದ ಬದಿಯಲ್ಲಿ ಎರಡು ಗಣ ಪಟ್ಟಿಕೆಗಳಿದ್ದು, ಒಂದನ್ನು ಪೀಠದ ಸಮೀಪದಲ್ಲಿ ಇನ್ನೊಂದನ್ನು ದಂಡದ ಮೇಲ್ಭಾಗದಲ್ಲಿ

ವಿನ್ಯಾಸಗೊಳಿಸಲಾಗಿದೆ. ಒಳ ಮಂಟಪದಲ್ಲಿ ಈಶಾನ್ಯ ಮೂಲೆಯ ಕಂಬದ ದಕ್ಷಿಣ ಬದಿಯಲ್ಲಿ ಮೇಲಿನ ಗಣಪಟ್ಟಿಕೆಯು ಏಳು ಕುಬ್ಜರ ಸಂಗೀತ ಮೇಳವನ್ನು ಪ್ರದರ್ಶಿಸುತ್ತದೆ. ಕೆಳಗಿನ ಪಟ್ಟಿಕೆಯಲ್ಲಿ ಏಳು ಜನ ಕುಬ್ಜರು ನರ್ತನ ನಿರತರಾಗಿದ್ದಾರೆ. ಪಶ್ಚಿಮ ಬದಿಯ ಪಟ್ಟಿಕೆಗಳಲ್ಲೂ ಏಳೇಳು ಕುಣಿಯುತ್ತಿರುವ ಕುಬ್ಜರು ಶಿಲ್ಪಿತರಾಗಿದ್ದಾರೆ.

ವಾಯವ್ಯ ಮೂಲೆಯ ಕಂಬದ ಪೂರ್ವ ಬದಿಯಲ್ಲಿ ಮೇಲಿನ ಪಟ್ಟಿಕೆಯಲ್ಲಿ ಏಳು ಕುಬ್ಜರಲ್ಲಿ ಇಬ್ಬರು ಮೃದಂಗ ವಾದಕರು. ಉಳಿದ ಐವರು ನರ್ತಕರು. ಕೆಳಗಿನ ಪಟ್ಟಿಯಲ್ಲಿ ಏಳು ಜನ ಕುಬ್ಜರು ಪ್ರಾಯಶಃ ವ್ಯಾಯಾಮ ಶಾಲೆಯಲ್ಲಿ ಅಭ್ಯಾಸ ನಿರತರಾದಂತೆ ತೋರುತ್ತದೆ. ದಕ್ಷಿಣ ಬದಿಯ ಮೇಲ್ಪಟ್ಟಿಕೆಯು ವೈಶಿಷ್ಟ್ಯಪೂರ್ಣವಾಗಿದೆ. ಅವರಲ್ಲಿ ಇಬ್ಬರು ಖಡ್ಗ, ಗುರಾಣಿ ಹಿಡಿದು ಯುದ್ಧ ಸನ್ನದ್ಧರಾಗಿದ್ದಾರೆ. ಇನ್ನಿಬ್ಬರು ಮಲ್ಲಯುದ್ಧಕ್ಕೆ ಸಿದ್ಧರಾಗಿದ್ದಾರೆ. ಒಬ್ಬನು ಕತ್ತಿವರಸೆಯಲ್ಲಿ ತೊಡಗಿರುವಂತೆ, ಇನ್ನೊಬ್ಬ ಗದೆಯನ್ನು ಪ್ರಯೋಗಿಸುತ್ತಿರುವಂತೆ ಚಿತ್ರಿತನಾಗಿದ್ದಾನೆ. ಯೋಧರ ದಿನನಿತ್ಯದ ಅಭ್ಯಾಸದ ಚಿತ್ರಣ ಈ ಪಟ್ಟಿಕೆಯಾಗಿದೆ. ಕೆಳಗಿನ ಪಟ್ಟಿಕೆಯಲ್ಲಿ ಆರು ಜನ ಕುಬ್ಜರಿದ್ದು, ಇಬ್ಬರು ಗುರಾಣಿ, ಖಡ್ಗ ಹಿಡಿದಿರುವಂತೆ, ಒಬ್ಬನು ಮೊಳಕೈಯಲ್ಲಿ ಕುಂಭವನ್ನು ಎತ್ತಿರುವಂತೆ ತೋರಿಸಲಾಗಿದೆ. ಜೊತೆಗೆ ಇಬ್ಬರು ವಾದಕರು, ಒಬ್ಬ ನರ್ತಕನು ಶಿಲ್ಪಿತರಾಗಿದ್ದಾರೆ. ಪಶ್ಚಿಮ ಬದಿಯ ಮೇಲ್ಭಾಗದಲ್ಲಿನ ಗಣ ಪಟ್ಟಿಕೆಯಲ್ಲಿ ಆರು ಕುಬ್ಜರು ನರ್ತನ ಮಾಡುತ್ತಿರುವಂತೆ ಒಬ್ಬನು ಮೃದಂಗ ನುಡಿಸುವಂತೆ ಕೆತ್ತನೆ ಮಾಡಲಾಗಿದೆ. ಕೆಳಗಿನ ಗಣಪಟ್ಟಿಕೆ ಅಪೂರ್ಣವಾಗಿದೆ.

ನೈಋತ್ಯ ಮೂಲೆಯ ಕಂಬದ ಮೇಲ್ಪಟ್ಟಿಕೆಯಲ್ಲಿ ಸರ್ಪ ಹಿಡಿದ ಗಣ, ಪುಂಗಿ, ತಂತುವಾದ್ಯ ನುಡಿಸುವ ಇಬ್ಬರು ವಾದಕರು, ಇಬ್ಬರು ನರ್ತಕರು, ಇಬ್ಬರು ಮಲ್ಲ ಪಟುಗಳು ಹಾಗೂ ಮತ್ತೊಬ್ಬ ನರ್ತಕ ಹೀಗೆ ಎಂಟು ಕುಬ್ಜರು ಸಂಯೋಜಿತರಾಗಿದ್ದಾರೆ. ಕೆಳಗಿನ ಪಟ್ಟಿಕೆಯಲ್ಲಿನ ಏಳು ಕುಬ್ಜರಲ್ಲಿ ಒಂದು ಮಗುವಿನ ಕೆತ್ತನೆ ಇರುವುದೊಂದು ವಿಶೇಷ. ಈ ಕಂಬದ ಉತ್ತರ ಬದಿ ಮತ್ತು ಪಶ್ಚಿಮ ಬದಿಯಲ್ಲಿ ಮೇಲ್ಭಾಗದ ಪಟ್ಟಿಕೆಯಲ್ಲಿ ಯಾವ ಕೆತ್ತನೆಯೂ ಇಲ್ಲ. ಕೆಳಭಾಗದ ಪಟ್ಟಿಕೆಯಲ್ಲಿ ವಾಡಿಕೆ ಎನ್ನುವಂತೆ ಏಳು ಕುಬ್ಜರ ಚಿತ್ರಣವಿದೆ. ಪಶ್ಚಿಮ ಬದಿಯಲ್ಲಿಯ ಗಣಪಟ್ಟಿಕೆಯಲ್ಲಿ ಇಬ್ಬರು ಮಲ್ಲಯುದ್ಧ ಮಾಡುತ್ತಿರುವಂತೆ, ಒಬ್ಬ ಖಡ್ಗಧಾರಿಯಾಗಿ, ಇನ್ನಿಬ್ಬರು ಕುಂಭವನ್ನು ಎತ್ತಿರುವಂತೆ ಮತ್ತಿಬ್ಬರು ಕುಸ್ತಿಯಲ್ಲಿ ತೊಡಗಿರುವಂತೆ ಕುಬ್ಜರನ್ನು ಕೆತ್ತಲಾಗಿದೆ. ಆಗ್ನೇಯ ಮೂಲೆಯ ಕಂಬದಲ್ಲಿ ಯಾವ ಕುಬ್ಜ ಶಿಲ್ಪಗಳೂ ಮೂಡಿ ಬಂದಿರುವದಿಲ್ಲ. ಅಪವಾದವೆನ್ನುವ ರೀತಿಯಲ್ಲಿ ಉತ್ತರ ಬದಿಯ ಕೆಳ ಪಟ್ಟಿಕೆಯಲ್ಲಿ ಮಯೂರ ಬಾಲವು ಸುರುಳಿಯಾಗಿರುವಂತೆ ಅಂದವಾಗಿ ರೂಪಿತವಾಗಿದೆ.

**ಈ. ಪ್ರಸ್ತರದಲ್ಲಿಯ ಕುಬ್ಜಗಣರು**

ರಾಚನಿಕ ದೇವಾಲಯಗಳಲ್ಲಿ ಹೊರಗೋಡೆಯ ಮೇಲಿನ ಪ್ರಸ್ತರದಲ್ಲಿ ಕಪೋತದ ಕೆಳಗೆ ಹಂಸಮಾಲೆಯ ಅಲಂಕಾರವಿರುವುದು ಚಲುಕ್ಯರ ವಾಸ್ತುಶೈಲಿಯ ಗುಣಲಕ್ಷಣವೇ ಆಗಿದೆ. ಕೆಲವೆಡೆಯಲ್ಲಿ ಈ ವಾಸ್ತು ಅಂಗವು ಕುಬ್ಜರ ಸಾಲುಗಳಿಂದ ಅಲಂಕೃತವಾಗಿದೆ. ಪಟ್ಟದಕಲ್ಲಿನ ಸಂಗಮೇಶ್ವರ ಗುಡಿಯ ಮೇಲಿನ ಸೂರನ್ನು ಕುಬ್ಜಗಣರು ಎತ್ತಿ ಹಿಡಿದಿರುವಂತೆ ಅಂದಗೊಳಿಸಲಾಗಿದೆ. ಪಕ್ಕದಲ್ಲಿರುವ ಕಾಶಿವಿಶ್ವನಾಥ ದೇವಾಲಯದ ಈ ಕುಬ್ಜಗಣರು ಮಾಲೆಯನ್ನು ಹೊತ್ತುಕೊಂಡು ಹಾರುತ್ತಿರುವಂತೆ ಶಿಲ್ಪಿತರಾಗಿದ್ದಾರೆ. ಮಾಲಗಿತ್ತಿ ಶಿವಾಲಯದಲ್ಲಿ ಹಂಸಮಾಲೆಯಿದ್ದು ಭಾಗಶಃ ಗಣಮಾಲೆಯೂ ಸೇರ್ಪಡೆಯಾಗಿರುವುದೊಂದು ವಿಶೇಷವಾಗಿದೆ.

**ಉ. ವಿತಾನಗಳಲ್ಲಿ ಕುಬ್ಜಗಣರು**

ಗುಹಾದೇವಾಲಯ ಹಾಗೂ ರಾಚನಿಕ ಮಂದಿರಗಳ ವಿತಾನಗಳ ಅಲಂಕರಣೆಯಲ್ಲಿಯೂ ಕುಬ್ಜರ ಶಿಲ್ಪಗಳನ್ನು ಬಳಸಲಾಗಿದೆ. ಬಾದಾಮಿಯ ಎರಡನೆಯ ಗುಹಾಲಯದ

ಮೇಲ್ಛಾವಣಿಯ ಮಧ್ಯದ ಅಂಕಣದಲ್ಲಿ ಸುದರ್ಶನ ಚಕ್ರದ ಸುತ್ತಲಿನ ಚೌಕಟ್ಟುಗಳ ನಡುವೆ ಹನ್ನೆರಡು ಚಿಕಣಿ ಶಿಲ್ಪಗಳು ಕುಬ್ಜಗಣರನ್ನು ಪ್ರದರ್ಶಿಸುತ್ತಿವೆ. ಈ ಕುಬ್ಜರು ನರ್ತಕರಾಗಿ ಚಿತ್ರಿತರಾಗಿದ್ದಾರೆ. ಮೂರನೆಯ ಗುಹಾಲಯದ ಚತ್ತಿನಲ್ಲಿ ಪೂರ್ವ ಬದಿಯಿಂದ ಮೊದಲನೆಯ ಅಂಕಣವು ಇಂದ್ರನದು. ಆತನ ಸುತ್ತಲಿರುವ ವೃತ್ತಗಳಲ್ಲಿ ನರ್ತಕರೂ, ಗಣರೂ ಕೆತ್ತನೆಗೊಂಡಿದ್ದಾರೆ. ಎರಡನೆಯ ಅಂಕಣದಲ್ಲಿ ಶಿವನ ಚಿತ್ರಣವಿದೆ. ಆತನ ಸುತ್ತ ನಾಲ್ಕು ದೀರ್ಘ ವೃತ್ತಗಳಲ್ಲಿ ಗಣರ ಸಂಯೋಜನೆ ಇದೆ. **(ಚಿತ್ರ ೬೨)** ಒಂದರಲ್ಲಿ ಗಣೇಶನಿದ್ದಾನೆ. ಮೂರರಲ್ಲಿ ಗಣ ಜೋಡಿಗಳಿದ್ದಾರೆ.



ಚಿತ್ರ ೬೨. ಈಶ್ವರನ ಸುತ್ತ ಗಣರು, ವಿತಾನಾಲಂಕರಣ

ರಾಚನಿಕ ಮಂದಿರಗಳಲ್ಲಿ ವಿತಾನಗಳ ಅಲಂಕರಣ ವಿರಳ. ಮಹಾಕೂಟದಲ್ಲಿ ಅನೇಕ ದೇವಾಲಯಗಳಿದ್ದು ಮಲ್ಲಿಕಾರ್ಜುನ ಗುಡಿಯು ಶಿಲ್ಪಾಲಂಕೃತ ವಿತಾನವಿರುವ ಏಕಮಾತ್ರ ದೇವಾಲಯವೆನಿಸಿದೆ. ಅದರ ಗರ್ಭಗೃಹಕ್ಕೆ ಹೊಂದಿರುವ ಅಂಕಣದಲ್ಲಿ ಶಿವ ಪಾರ್ವತಿಯರ ಕಂಡರಣೆಯಿದೆ. ಇನ್ನುಳಿದ ಅವಕಾಶದಲ್ಲಿ ಗಣಗಳ ಸಾಲನ್ನು ಸಂಯೋಜಿಸಲಾಗಿದೆ. ಇದನ್ನು ನೆನಪಿಸುವ ಇನ್ನೊಂದು ಶಿವಪಾರ್ವತಿಯರ ಶಿಲ್ಪ ಕಲಾಕೃತಿಯನ್ನು ನಾಗರಾಳದ ನಾಗನಾಥ ದೇವಾಲಯದ ಗರ್ಭಗುಡಿಗೆ ಹೊಂದಿರುವ ಅಂಕಣದಲ್ಲಿ ಕಾಣುತ್ತೇವೆ. ಇಲ್ಲಿಯ ಗಣರು, ದೇವ ದಂಪತಿಗಳು ಕುಳಿತಿರುವ ನಂದಿಯ ಬಾಲಕ್ಕೆ ಜೋತು ಬಿದ್ದಿರುವಂತೆ ತೋರುತ್ತಾರೆ. ಜಂಬುಲಿಂಗ ಗುಡಿಯ ಸಭಾ ಮಂಟಪದ ಚತ್ತಿನಲ್ಲಿ ಪ್ರಧಾನ ಗರ್ಭಗೃಹಕ್ಕೆ ಹೊಂದಿಕೊಂಡ ಅಂಕಣದಲ್ಲಿ ನೆಗೆಯುತ್ತಿರುವ ನಂದಿಯ ಮೇಲೆ ಆಸೀನರಾಗಿರುವ ಶಿವ ಪಾರ್ವತಿಯರ ಸುಂದರ ಶಿಲ್ಪವಿದೆ. ಇದರ ಚೌಕಟ್ಟು ಎಂಬಂತಿರುವ ಸುತ್ತಲಿನ ಪಟ್ಟಿಕೆಗಳಲ್ಲಿ ನರ್ತಿಸುತ್ತಿರುವ ಗಣಗಳ ಸಾಲನ್ನು ಕೆತ್ತಲಾಗಿದೆ. ಇಲ್ಲಿ ಪ್ರಸ್ತಾಪಿಸಲಾದ ಶಿಲ್ಪ ಸಂಯೋಜನೆಗಳು ರೂವಾರಿಗಳ ಕಲಾ ಪ್ರೌಢಿಮೆಗೆ ನಿದರ್ಶನಗಳಾಗಿವೆ.

## ೨. ವಿದ್ಯಾಧರರು

ಭಾರತೀಯ ಪ್ರಾಚೀನ ಕಾವ್ಯಗಳಲ್ಲಿ ವರ್ಣಿಸಲಾದಂತೆ ವಿದ್ಯಾಧರರು ಗಗನಗಮನಾದಿ ಅಲೌಕಿಕ ಶಕ್ತಿಯುಳ್ಳ ಜೀವಿಗಳು. ಇವರು ಹಿಮಾಲಯ ಶಿಖರವಾಸಿಗಳು.[೪] ಇವರ ಸ್ತ್ರೀಯರು ವಿದ್ಯಾಧರಿಯರು.

ವಿದ್ಯಾಧರ ಎಂದರೆ ವಿದ್ಯೆಯನ್ನು ಹೊತ್ತು (ಧರಿಸಿ) ಕೊಂಡವನು ಎಂದರ್ಥ. ಇವರು ಜ್ಞಾನಿಗಳು. ಸ್ಥಾನದಲ್ಲಿ ವಿದ್ಯಾಧರರು ಗಂಧರ್ವರಿಗಿಂತ ಮೇಲ್ಪಂಕ್ತಿಯವರು. ಗಂಧರ್ವರು ಸಂಗೀತ, ನೃತ್ಯ ಪರಿಣತರೆನಿಸಿದರೆ ವಿದ್ಯಾಧರರು ಕಲೆ ಮತ್ತು ವಿಜ್ಞಾನಗಳೆರಡರಲ್ಲೂ ನಿಷ್ಣಾತರು. ಇಂದ್ರಜಾಲ ವಿದ್ಯೆಯನ್ನು ಸಾಧಿಸಿಕೊಂಡವರು. ಮಂತ್ರ–ತಂತ್ರ ನಿಪುಣರು. ವಿದ್ಯಾಧರರು ಯಾವ ರೂಪವನ್ನಾದರೂ ಧರಿಸಬಲ್ಲವರು[೫]. ಇವರು ಸುಂದರಾಂಗರು. ಪ್ರಾಚೀನ ಕಾವ್ಯಗಳಲ್ಲಿ ವಿದ್ಯಾಧರಿಯರ ಚೆಲುವು ಸುದೀರ್ಘವಾಗಿ ವರ್ಣಿತವಾಗಿದೆ. ಕವಿಗಳ ಬಣ್ಣನೆಗೆ ಘನರೂಪ ಕೊಡುವಂತೆ ಬೆಡಗಿನ ವಿದ್ಯಾಧರ ದಂಪತಿಗಳ ಶಿಲ್ಪಗಳನ್ನು ಕಲಾವಿದರು ಒಡ ಮೂಡಿಸಿದ್ದಾರೆ.

[೪] Ramachandra Rao, S. K. Encyclopaedia of India Iconography, Vol. II, P.1525

[೫] Ibid

ವಿದ್ಯಾಧರರು ಪುಷ್ಪವೃಷ್ಟಿ ಮಾಡುವ, ಪುಷ್ಪಮಾಲೆಗಳನ್ನು ಹೊತ್ತು ತರುವ ಆಕಾಶಗಾಮಿಗಳು. ರೆಕ್ಕೆಗಳಿಲ್ಲದೆ ಇವರು ಪಕ್ಷಿಗಳಂತೆ ವಿಹರಿಸಬಲ್ಲವರು. ಈ ದೃಶ್ಯಗಳು ಶಿಲ್ಪಗಳಲ್ಲಿ ಹೇರಳವಾಗಿ ಕಂಡು ಬರುತ್ತವೆ. ವಿದ್ಯಾಧರರು ಪ್ರಧಾನ ದೇವತಾ ಶಿಲ್ಪದ ಮೇಲೆ ಎಡ-ಬಲದ ಮೂಲೆಗಳಲ್ಲಿ ಗೋಚರಿಸುವುದು ಶಿಲ್ಪ ಸಂಪ್ರದಾಯವಾಗಿದೆ. ಎಲ್ಲೋರಾದ ವಿಶ್ವಕರ್ಮ ಗುಹೆಯಲ್ಲಿ ಮಾಡಗಳ ಮೇಲೆ ವಿದ್ಯಾಧರರನ್ನು ರೂಪಿಸಿಲಾಗಿದೆ. ವಿದ್ಯಾಧರ-ವಿದ್ಯಾಧರಿಯರು ಜೊತೆಯಾಗಿ ಹೂ ಮಾಲೆಗಳೊಂದಿಗೆ ಹಾರುತ್ತ ದೇವ ಸನ್ನಿಧಿಗೆ ಬರುವವರಂತೆ ಶಿಲ್ಪಿತರಾಗಿರುತ್ತಾರೆ. ಈ ಶಿಲ್ಪ ನಿರೂಪಣೆಯಲ್ಲಿ ಹಲವು ಬಗೆಯ ವೈವಿಧ್ಯವನ್ನು ರೂವಾರಿಗಳು ಪ್ರದರ್ಶಿಸಿದ್ದಾರೆ.

ವಿದ್ಯಾಧರ ದಂಪತಿಗಳು ಸಾಮಾನ್ಯವಾಗಿ ಪ್ರಧಾನ ದೇವತಾ ಶಿಲ್ಪವಿರುವ ಗೋಡೆಯ ಮೂಲೆಯಲ್ಲಿ ಕಂಡುಬರುತ್ತಾರೆ. ಇವರು ಮಾಲಾವಾಹಕರಾಗಿ ಪ್ರಭುವಿಗೆ ಮಾಲೆ ತೊಡಿಸಲು ಆಕಾಶದಿಂದ ಇಳಿದು ಬರುತ್ತಿರುವಂತೆ ಶಿಲ್ಪಿತರು. ಗೋಡೆಯ ಮೇಲೆ ಪ್ರಧಾನ ದೇವತೆಯ ವಿಗ್ರಹವನ್ನು ರೂಪಿಸಿದ ಬಳಿಕ ಮೂಲೆಗಳು ಖಾಲಿಯಾಗಿ ಉಳಿದರೆ ಶಿಲ್ಪ ಸಂಯೋಜನೆಯು ಕಲಾ ಸಮತೋಲವನ್ನು ಕಳೆದುಕೊಳ್ಳುತ್ತದೆ. ಆ ಸ್ಥಳಾವಕಾಶವನ್ನು ತುಂಬಿಕೊಳ್ಳುವುದರ ಜೊತೆಗೆ ಶಿಲ್ಪದ ಮೂಲ ಉದ್ದೇಶಕ್ಕೆ ಪೂರಕವೆನಿಸುವ ರೀತಿಯಲ್ಲಿ ವಿದ್ಯಾಧರರನ್ನು ಕೆತ್ತನೆ ಮಾಡಲಾಗಿದೆ. ಇದರಿಂದಾಗಿ ಪ್ರಧಾನ ದೇವತೆಯ ಪಾರಮ್ಯವನ್ನು ಮತ್ತು ಶಿಲ್ಪದ ಕಳೆಯನ್ನು ಹೆಚ್ಚಿಸಿದಂತಾಗಿದೆ.

ವಿದ್ಯಾಧರರ ವಾಹನ ಕೋಣವೆಂದು ಪ್ರತಿಮಾಶಾಸ್ತ್ರ ಗ್ರಂಥಗಳಲ್ಲಿ ಹೇಳಲಾಗಿದೆ.[1] ಆದರೆ ಚಲುಕ್ಯ ಶಿಲ್ಪಕಲೆಯಲ್ಲಿ ಈ ಕುರಿತಾಗಿ ಒಂದು ನಿದರ್ಶನವೂ ಲಭ್ಯವಿಲ್ಲ.

ಚಲುಕ್ಯ ಶಿಲ್ಪಕಲೆಯಲ್ಲಿ ಅರಳಿಬಂದ ಕೆಲವು ಪ್ರಾತಿನಿಧಿಕ ವಿದ್ಯಾಧರ ಶಿಲ್ಪಗಳನ್ನು ಅವಲೋಕಿಸಬಹುದು. ಬಾದಾಮಿಯ ಶೈವ ಗುಹೆಯಲ್ಲಿ ಅರ್ಧನಾರೀಶ್ವರನ ಬೃಹತ್ ಪ್ರತಿಮೆಯಿದೆ. ಅದರ ಮೇಲ್ಭಾಗದ ಬಲಮೂಲೆಯಲ್ಲಿಯ ವಿದ್ಯಾಧರರ ದಂಪತಿ ಶಿಲ್ಪವು ವೈಶಿಷ್ಟ್ಯಪೂರ್ಣವಾಗಿದೆ; ಮನೋಹರವಾಗಿದೆ. ದಂಪತಿಗಳು ಒಬ್ಬರಿಗೊಬ್ಬರು ಎದುರಾಗಿರುವಂತೆ ಶಿಲ್ಪಿತರಾಗಿದ್ದು ವಿದ್ಯಾಧರೆಯು ವೀಕ್ಷಕನಿಗೆ ಅಭಿಮುಖವಾಗಿದ್ದಾಳೆ. ಆದರೆ ವಿದ್ಯಾಧರನು ನೋಡುಗನತ್ತ ಬೆನ್ನು ತಿರುಗಿಸಿದ್ದಾನೆ. ಆತನ ಬಲಗೈಯಲ್ಲಿ ವಿಲಕ್ಷಣ ಮಾಟದ ಸುಂದರ ಹೂದಾನಿ ಇದೆ. ಎಡಗೈಯಿಂದ ಚೆಲುವೆಯನ್ನು ತೆಕ್ಕೆಗೆ ತೆಗೆದುಕೊಳ್ಳುತ್ತ ಆಕಾಶದಲ್ಲಿ ವಿಹರಿಸುತ್ತಿದ್ದಾನೆ. ಅವರ ಎಡಬಲಗಳಲ್ಲಿ ಮೋಡಗಳನ್ನು ಬಿಡಿಸಲಾಗಿದೆ. ಗಾಳಿಯ ರಭಸಕ್ಕೆ ವಿದ್ಯಾಧರೆಯ ಉತ್ತರೀಯವು ಹಾರಾಡುತ್ತಿದೆ. ವಸ್ತ್ರಾಭರಣಗಳು ಅವಳ ಸೌಂದರ್ಯವನ್ನು ಇಮ್ಮಡಿಗೊಳಿಸಿವೆ. ಅವಳು ಸರ್ವಾಲಂಕಾರ ಭೂಷಿತಳು. ಆಕೆಯ ಕೇಶಬಂಧವು ಚಿತ್ತಾಕರ್ಷಕವಾಗಿದೆ. ಕೇಶರಾಶಿಯನ್ನು ಒಗ್ಗೂಡಿಸಿ ತಲೆಯ ಮೇಲ್ಭಾಗದಲ್ಲಿ ಕಿರೀಟದಂತೆ ಏರಿಸಿ ಒಪ್ಪವಾಗಿ ಕಟ್ಟಲಾಗಿದೆ. ಈ ಮುಡಿಯನ್ನು ಚಿನ್ನಾಭರಣ ಮತ್ತು ಮುತ್ತಿನ ಸರಗಳಿಂದ ಸಿಂಗರಿಸಲಾಗಿದೆ. ಇದನ್ನು ಕಿರೀಟ ಮುಡಿ ಎಂದು ಗುರುತಿಸಬಹುದು. ವಿದ್ಯಾಧರನ ಕಿರೀಟ ಮಕುಟವೂ ಕಲಾತ್ಮಕವಾಗಿ ಮೂಡಿಬಂದಿದೆ. ಕಲಾವಿದನ ವಿಶೇಷ ಆಸಕ್ತಿ , ಪ್ರಯತ್ನಗಳ ಫಲವಿದು. ಕಿರೀಟದ ಹಿಂಭಾಗದಲ್ಲಿರುವ ಶಿರಶ್ಚಕ್ರದ ವಿವರಗಳನ್ನು ಕೂಡ ಬಿಡಿಸಲಾಗಿದೆ. ಕಿರೀಟದ ಹಿಂಭಾಗದ ವಿನ್ಯಾಸವನ್ನು ಚಿತ್ರಿಸುವ ಅಪರೂಪದ ಕಂಡರಣೆ ಇದಾಗಿದೆ. ವಿದ್ಯಾಧರ ದಂಪತಿಗಳಿಬ್ಬರೂ ಕರ್ಣಾಭರಣ, ಕಂಠಾಭರಣ, ಕೇಯೂರ, ಕೈಕಡಗಗಳಿಂದ ಶೋಭಾಯಮಾನರಾಗಿದ್ದಾರೆ. **(ಚಿತ್ರ ೬೩)**



**ಚಿತ್ರ ೬೩. ವಿದ್ಯಾಧರರು, ಶೈವಗುಹೆ, ಬಾದಾಮಿ**

[1] Ramachandra Rao, S.K. op.cit. P. 1525

ಈ ಗೋಡೆಯ ಇನ್ನೊಂದು ಮೂಲೆಯಲ್ಲಿ ಇದೇ ಬಗೆಯ ಶಿಲ್ಪ ಸಂಯೋಜನೆಯೊಂದಿಗೆ ಮತ್ತೊಂದು ಜೋಡಿ ಮೂಡಿಬಂದಿದೆ. ಈ ಎರಡೂ ಜೋಡಿಗಳ ಮುಖಲಕ್ಷಣಗಳಲ್ಲಿ ತೋರಿ ಬರುವ ಸಾಮ್ಯವು ಗಮನ ಸೆಳೆಯುವಂತಹದು. ಈ ಎರಡೂ ಜೊತೆಗಳು ಒಬ್ಬ ರೂವಾರಿಯ ನಿರ್ಮಾಣವಾಗಿರುವ ಸಂಭಾವ್ಯವಿದೆ. ಅವರ ಮುಖಗಳ ನಿರೂಪಣೆಯಲ್ಲಿನ ಸಾದೃಶ್ಯ ಈ ಮಾತಿಗೆ ಸಾಕ್ಷಿ ನುಡಿಯುವಂತಿದೆ. ಪ್ರಸಕ್ತ ಶಿಲ್ಪದಲ್ಲಿ ವಿದ್ಯಾಧರನು ಬಲಗೈಯಲ್ಲಿ ಹೂಮಾಲೆಯನ್ನು ಹಿಡಿದುಕೊಂಡಿದ್ದಾನೆ. ಎಡಗೈಯನ್ನು ಪ್ರೇಯಸಿಯ ಕೊರಳನ್ನು ಹಿಂದಿನಿಂದ ಚಾಚಿ ಆಕೆಯ ಎಡ ಹೆಗಲ ಮೇಲೆ ಇರಿಸಿದ್ದಾನೆ. ಅದನ್ನು ಅವಳು ತನ್ನ ಎಡಗೈಯಲ್ಲಿ ಹಿಡಿದುಕೊಂಡು ಜೊತೆಯಾಗಿ ಆಕಾಶದಲ್ಲಿ ತೇಲುತ್ತಿದ್ದಾಳೆ. ಇಬ್ಬರೂ ಕಿರೀಟ, ಕಂಠಹಾರಗಳಿಂದ ಭೂಷಿತರು. ವಿದ್ಯಾಧರನ ಬಲಕರ್ಣಾಭರಣವು ಅಸಾಧಾರಣವಾಗಿ ದೊಡ್ಡದು. ಆತನು ಉದರಬಂಧ ಧರಿಸಿದರೆ ವಿದ್ಯಾಧರೆಯು ವೈಕಕ್ಷಕದಿಂದ ಅಲಂಕೃತಳು. ಅವರಿಬ್ಬರೂ ಮೋಡಗಳ ಮಧ್ಯೆ ತೂರಿಕೊಂಡು ಸಂಚರಿಸುತ್ತಿರುವಂತೆ ಚಿತ್ರಿಸಿರುವಲ್ಲಿ ಕಲಾವಿದನ ಕಲ್ಪನಾ ವಿಲಾಸ ಗರಿಗೆದರಿದೆ.

ಮೂರನೆಯ ಗುಹಾಲಯದಲ್ಲಿ ಭೂವರಾಹ ವಿಗ್ರಹದ ಮೇಲಿರುವ ಎರಡು ಜೋಡಿ ವಿದ್ಯಾಧರ ಶಿಲ್ಪಗಳು ಗಮನಾರ್ಹವಾಗಿವೆ. ಕಿರೀಟಧಾರಿಗಳಾದ ಅವರು ಸರ್ವಾಭರಣ ಭೂಷಿತರು. ಅವರು ಹೂಮಾಲೆಗಳ ಬದಲು ಕೈಯಲ್ಲಿ ಬಿಡಿ ಹೂವನ್ನು ಹಿಡಿದುಕೊಂಡು ಸಂಚರಿಸುವುದೊಂದು ಬಿನ್ನ ಚಿತ್ರಣ. ಮಂಜೂರಿನಲ್ಲಿ ಗರುಡನ ಎಡಬಲಗಳಲ್ಲಿರುವ ವಿದ್ಯಾಧರರ ಮೂರ್ತಿಗಳು ಮನಸೆಳೆಯುವ ಸುಂದರ ಕಲಾಕೃತಿಗಳು. (**ಚಿತ್ರ ೬೪**) ಇಬ್ಬರೂ



**ಚಿತ್ರ ೬೪. ವಿದ್ಯಾಧರರು, ಮಹಾವಿಷ್ಣು ಗೃಹ**

ವಿದ್ಯಾಧರರು ಖಡ್ಗಧಾರಿಗಳಾಗಿರುವುದೊಂದು ವಿಶೇಷ. ಒಬ್ಬಾತನು ಗುರಾಣಿಯನ್ನು ಹಿಡಿದಿದ್ದಾನೆ. ಇವು ವಿದ್ಯಾಧರರ ರಕ್ಷಣಾ ಸ್ವಭಾವವನ್ನು ಸೂಚಿಸುತ್ತವೆ. ಅವರ ಮುಖಗಳಲ್ಲಿ ಜೀವ ಕಳೆ ಲಾಸ್ಯವಾಡಿದೆ. ಸುಂದರವೂ ಕಲಾತ್ಮಕವೂ ಆಗಿರುವ ಈ ಶಿಲ್ಪ ಜೋಡಿಗಳಿಂದಾಗಿ ಸಮಗ್ರ ಮಂಜೂರು ಹೆಚ್ಚಿನ ಸೊಬಗನ್ನು ಪಡೆದಿದೆ.

ಸಾಮಾನ್ಯವಾಗಿ ವಿದ್ಯಾಧರರ ಶಿಲ್ಪ ಸಂಯೋಜನೆಯಲ್ಲಿ ದಂಪತಿಗಳು ತಮ್ಮ ಒಂದು ಕಾಲನ್ನು ಮುಂದೆ ಮಡಿಚಿದಂತೆ ಇನ್ನೊಂದನ್ನು ಹಿಂದೆ ನೀಳವಾಗಿ ಚಾಚಿರುವಂತೆ ಇಳಿಬಿಟ್ಟಿದ್ದಾರೆ. ಇದರಿಂದಾದ ವಿಶಿಷ್ಟ ಮೈ ಮಣಿತಗಳು ಅವರು ಆಕಾಶದಲ್ಲಿ ಚಲನೆಯಲ್ಲಿರುವುದನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತವೆ. ಇದೇ ಬಗೆಯ ಶಿಲ್ಪಾಭಿವ್ಯಕ್ತಿಯನ್ನು ಗುಪ್ತರ ಶಿಲ್ಪಕಲೆಯಲ್ಲೂ ಕಾಣುತ್ತೇವೆ. ಚಲುಕ್ಯೋತ್ತರ ಕಾಲದ ಶಿಲ್ಪಕಲೆಯಲ್ಲಿಯೂ ಈ ಸಂಪ್ರದಾಯವು ಮುಂದುವರೆದಿರುವುದು ಸ್ಪಷ್ಟ.

ಚಲುಕ್ಯ ಶಿಲ್ಪಿಗಳು ಗುಹಾಲಯದ ವಿತಾನಾಲಂಕರಣಕ್ಕಾಗಿ ವಿದ್ಯಾಧರ ಶಿಲ್ಪಗಳನ್ನು ವಿಶೇಷವಾಗಿ ಬಳಸಿಕೊಂಡಿದ್ದಾರೆ. ಬಾದಾಮಿಯ ಶೈವ ಗುಹೆಯ ಮೊಗಸಾಲೆಯ ಚತ್ತಿನಲ್ಲಿ ವಿದ್ಯಾಧರರ ಸುಂದರ ಜೋಡಿಗಳು ಮೈದಾಳಿವೆ. ಏಕ ಶಿಲಾನಿರ್ಮಿತ ದೇಗುಲದ ಚತ್ತಿನಲ್ಲಿ ಶಿಲ್ಪರಚನೆ ಮಾಡುವುದು ಶಿಲ್ಪಿಗೆ ಬಲು ದೊಡ್ಡ ಆಹ್ವಾನ. ಏಕೆಂದರೆ ಶಿಲ್ಪಿಯು ಅಂಗಾತ ಮಲಗಿಕೊಂಡು, ಕೈಗಳನ್ನು ಗುರುತ್ವ ಬಲಕ್ಕೆ ವಿರುದ್ಧವಾಗಿ ಎತ್ತಿ ಹಿಡಿದು ಕಂಡರಣೆ ಮಾಡಬೇಕಾಗುತ್ತದೆ. ಇದಕ್ಕೆ ಹೆಚ್ಚಿನ ಭೌತಿಕ ಶಕ್ತಿ ಮತ್ತು ವೃತ್ತಿ ಕೌಶಲ್ಯ ಅಗತ್ಯ. ಶಿಲೆಯನ್ನು ಕೆತ್ತಿದಾಗ ತೂರಿಕೊಂಡ ಕಲ್ಲಿನ ಚಕ್ಕೆಗಳು, ಕಣಗಳು ಆತನ ಕಣ್ಣಿನ ಮೇಲೆ ಬೀಳುತ್ತಿರುತ್ತವೆ. ಅದಕ್ಕಾಗಿ ಶಿಲ್ಪಿಯು ಎಂತಹ ವ್ಯವಸ್ಥೆ ಮಾಡಿಕೊಂಡಿದ್ದನೆಂಬುದು ಸ್ಪಷ್ಟವಾಗಿ ತಿಳಿದುಬರುವದಿಲ್ಲ. ಪ್ರಾಯಶಃ ಪಾರದರ್ಶಕವಾದ ತಿಳುವಾದ ಬಟ್ಟೆಯನ್ನು ಮುಖದ ಮೇಲೆ ಹರಡಿಕೊಂಡು ಕೆತ್ತನೆ ಮಾಡಿರಬಹುದಾಗಿದೆ. ಗುಹಾಶಿಲ್ಪವನ್ನು ರೂಪಿಸುವಾಗ ಅಕಸ್ಮಾತ್ ಸೂಕ್ಷ್ಮಭಾಗವೊಂದು ತುಂಡಾದರೆ ಅದನ್ನು ತಿದ್ದಲಾಗದು, ಸರಿಪಡಿಸಲಾಗದು, ಇನ್ನೊಂದರಿಂದ ಸ್ಥಾನಪಲ್ಲಟ ಮಾಡಲಾಗದು. ಇಷ್ಟು ಅಡೆತಡೆಗಳನ್ನು ಜಯಿಸಿ ಕಂಡರಣೆ ಮಾಡಬೇಕಾಗುತ್ತದೆ. ಇದರಿಂದಾಗಿ ಪ್ರಸ್ತುತ ವಿದ್ಯಾಧರ ಶಿಲ್ಪವು ಪ್ರಬುದ್ಧ ಶಿಲ್ಪಿಯ ಒಂದು ಉತ್ಕೃಷ್ಟ ಕಲಾಕೃತಿ ಎನಿಸಿಕೊಳ್ಳುತ್ತದೆ.

ಇಲ್ಲಿ ವಿದ್ಯಾಧರ ಜೋಡಿಯು ಒಂದು ವೃತ್ತದಲ್ಲಿ ಮೈವಡೆದಿದೆ. ಅವರು ಮೋಡಗಳಿಂದ ಆವೃತರು. ವಿದ್ಯಾಧರನು ಖಡ್ಗಧಾರಿಯಾಗಿದ್ದಾನೆ. ವಿದ್ಯಾಧರೆಯ ಉತ್ತರೀಯವು ಗಾಳಿಗೆ ಹಾರಾಡುತ್ತಿದೆ. ಇಬ್ಬರೂ ಸರ್ವಾಂಗ ಸುಂದರವಾಗಿ ಶಿಲ್ಪಿತರು. ಅವರೀರ್ವರ ಮುಖಗಳಲ್ಲಿ ಮಂದಹಾಸವು ಕೋಮಲವಾಗಿ ವ್ಯಕ್ತಗೊಂಡಿದೆ. ಅವರ ಮುಖದಲ್ಲಿ ಪ್ರಸನ್ನತೆಯ ಭಾವ ಎದ್ದು ಕಾಣುತ್ತದೆ. ಇದೂ ಕೂಡ ಒಬ್ಬ ಪರಿಣತ ಕಲಾವಿದನ ಶ್ರೇಷ್ಠ ಕಲಾನಿರ್ಮಿತಿಯಾಗಿದೆ.

ಇದೇ ಉತ್ಕೃಷ್ಟತೆಯನ್ನು ಪ್ರದರ್ಶಿಸುವ ಇನ್ನೊಂದು ವಿದ್ಯಾಧರ ಜೋತೆಯು ಇದೇ ವಿತಾನದ ಇನ್ನೊಂದು ಅಂಕಣದಲ್ಲಿದೆ. ದಂಪತಿಗಳು ಒಬ್ಬರಿಗೊಬ್ಬರು ಹೆಗಲ ಮೇಲೆ ಕೈ ಹಾಕಿಕೊಂಡು ಆಕಾಶಗಾಮಿಯಾಗಿ ಹೊರಟಿದ್ದಾರೆ. ದಾಂಪತ್ಯದ ಸಾರ್ಥಕ ಸ್ನೇಹವನ್ನು ಅನುಭವಿಸುವ ಮುಖಭಾವ ಅವರದು. ವಿದ್ಯಾಧರನು ಕಿರೀಟಧಾರಿಯಾಗಿದ್ದಾನೆ. ವಿದ್ಯಾಧರೆಯು ಕೇಶರಾಶಿಯನ್ನು ತಲೆಯ ಮೇಲೆ ಏರಿಸಿ ಕಟ್ಟಿದ್ದಾಳೆ. ಅದನ್ನು ಮುತ್ತಿನ ಸರಗಳು ಸಿಂಗರಿಸಿವೆ. ಈ ವಿವರಗಳನ್ನು ಶಿಲೆಯಲ್ಲಿ ಬಿಡಿಸುವಲ್ಲಿ ರೂವಾರಿಯ ಕಲಾಬದ್ಧತೆ ಎದ್ದು ಕಾಣುತ್ತದೆ. ಈ ಶಿಲ್ಪದಲ್ಲಿ ವಿದ್ಯಾಧರರು ಬಿಡಿಯಾದ ಪುಷ್ಪಗಳನ್ನು ಹಿಡಿದುಕೊಂಡು ಸಂಚರಿಸುವವರಂತೆ ಬಿಂಬಿತರಾಗಿರುವುದು ಒಂದು ಭಿನ್ನ ಅಭಿವ್ಯಕ್ತಿ. ಈ ಬಗೆಯ ಕಂಡರಣೆ ಎರಡನೆಯ ಗುಹೆಯ ಮತ್ತು ರಾವಲಫಡಿಯ ಚತ್ತುಗಳಲ್ಲಿ ಮೂಡಿಬಂದ ವಿದ್ಯಾಧರಗಳಲ್ಲಿ ಕಾಣಸಿಗುವುದಿಲ್ಲ.

ಗುಹಾಲಯಗಳಲ್ಲಿನ ವಿದ್ಯಾಧರರ ಶಿಲ್ಪ ನಿರೂಪಣೆಯಲ್ಲಿ ಕಲಾವಿದರು ತೋರಿದ ಕಲಾ ಕೌಶಲ್ಯ ಪ್ರಶಂಸನೀಯ-ವಾದುದು. ರಾಚನಿಕ ಮಂದಿರಗಳಲ್ಲಿ ಕಂಡು ಬರುವ ವಿದ್ಯಾಧರ ಶಿಲ್ಪಗಳು ಗಾತ್ರದಲ್ಲಿ, ಕಲಾತ್ಮಕತೆಯಲ್ಲಿ ಗೌಣವಾದವುಗಳು. ಮಂದಿರಗಳ ಹೊರ ಗೋಡೆಯಲ್ಲಿ ದೇವ ಕೋಷ್ಠಗಳ ಮೇಲ್ಭಾಗದಲ್ಲಿಯೂ ಇವು ಬಿಂಬಿತವಾಗಿವೆ. ಅವುಗಳಿಗೆ ಲಭ್ಯವಾದ ಸ್ಥಳಾವಕಾಶ ಸೀಮಿತವಾದುದು. ಆದಾಗ್ಯೂ ವಿದ್ಯಾಧರ ಶಿಲ್ಪಗಳನ್ನು ಸಂಯೋಜಿಸುವಲ್ಲಿ ಶಿಲ್ಪಿಗಳು ವೈವಿಧ್ಯವನ್ನೂ ಶಿಲ್ಪ ಸಂಪ್ರದಾಯವನ್ನೂ ಕಾಯ್ದುಕೊಂಡಿದ್ದಾರೆಂಬುದು ವಿದಿತವಾಗುತ್ತದೆ.

ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಲಕುಲೀಶ ಪ್ರತಿಮೆಯ ಮೇಲ್ಭಾಗದಲ್ಲಿ ಎರಡು ಜೋಡಿ ವಿದ್ಯಾಧರರು ಕೆತ್ತನೆಗೊಂಡಿದ್ದಾರೆ. ಅವರಲ್ಲಿ ಒಬ್ಬ ಉದ್ದನೆಯ ದೇಟು ಇರುವ ಕಮಲದ ಹೂವನ್ನು ಹಿಡಿದುಕೊಂಡಿದ್ದಾನೆ. ವಿದ್ಯಾಧರೆ ಹೂವಿರುವ ಪಾತ್ರೆಯನ್ನು ಹಿಡಿದಿರುವಳು. ನೇರವಾಗಿ ಮಳೆ, ಗಾಳಿ, ಬಿಸಿಲಿಗೆ ಮೈ ಒಡ್ಡಿಕೊಂಡು ಈ ಶಿಲ್ಪಗಳು ಸವಕಳಿಗೊಂಡಿವೆ. ಇನ್ನೊಂದೆಡೆ ಖಡ್ಗಧಾರಿಗಳಾದ ಇಬ್ಬರು ವಿದ್ಯಾಧರರು ಪ್ರತ್ಯೇಕವಾಗಿ ಚಿತ್ರಿತರಾಗಿದ್ದಾರೆ. ಅವರು ಒಬ್ಬರಿಗೊಬ್ಬರು ವಿರುದ್ಧ ದಿಕ್ಕಿನಲ್ಲಿ ಹಾರಾಡುತ್ತಿರುವುದೊಂದು ವಿಶೇಷ ನಿರೂಪಣೆ. ಇದೇ ದೇವಾಲಯದ ಹೊರಗೋಡೆಯಲ್ಲಿ ಇನ್ನೊಂದೆಡೆ ಒಬ್ಬನೇ ವಿದ್ಯಾಧರನು ಹೂಮಾಲೆಯೊಂದಿಗೆ ತಲೆಕೆಳಗಾಗಿ ಆಕಾಶದಿಂದ ರಭಸದಿಂದ ಇಳಿಯುತ್ತಿರುವ ಕುತೂಹಲಕಾರಿ ದೃಶ್ಯವಿದೆ. ಅಪಸ್ಮಾರನ ಮೇಲೆ ನರ್ತಿಸುವ ನಟರಾಜನ ಮೇಲ್ಭಾಗದಲ್ಲಿ ವಿದ್ಯಾಧರರು ದೇವನಿಗೆ ಮಾಲೆ ಅರ್ಪಿಸಲು ಆಕಾಶದಿಂದ ಅವತರಣ ಮಾಡುತ್ತಿರುವಂತೆ ಶಿಲ್ಪವನ್ನು ರೂಪಿಸಲಾಗಿದೆ. ಆಲಂಪುರ ಸ್ವರ್ಗ ಬ್ರಹ್ಮ ದೇವಾಲಯದ ಗರ್ಭಗೃಹದ ಬಾಗಿಲುವಾಡದ ಮಧ್ಯದಲ್ಲಿ ವಿದ್ಯಾಧರ ದಂಪತಿಗಳು ಗರ್ಭಗೃಹದಲ್ಲಿನ ಲಿಂಗಕ್ಕೆ ಕಿರೀಟವನ್ನು ತರುವಂತೆ ಕೆತ್ತನೆಗೊಂಡಿದ್ದಾರೆ. ಈ ವಸ್ತು ಭಿನ್ನತೆ ಗಮನ ಸೆಳೆಯುವಂತಹದು. ಆದರೆ ಈ ಬಗೆಯ ರಾಚನಿಕ ದೇವಾಲಯದ ವಿದ್ಯಾಧರರ ಕಂಡರಣೆಯಲ್ಲಿ ಹೆಚ್ಚಿನ ಕಲಾ ಕೌಶಲ್ಯ ಪ್ರದರ್ಶಿತವಾಗಿಲ್ಲ.

### ೩. ನಾಗ-ನಾಗಿಣಿ

ಭಾರತೀಯ ಧರ್ಮ ಮತ್ತು ಕಲೆಗಳಲ್ಲಿ ನಾಗದೇವನಿಗೆ ವಿಶಿಷ್ಟ ಸ್ಥಾನವಿದೆ. ಋಗ್ವೇದದ ಪ್ರಧಾನ ದೈವತ ಸರ್ಪ ಎನ್ನಲಾಗಿದೆ.[೭] ಅಥರ್ವವೇದದಲ್ಲಿ ಅನೇಕ ನಾಗರ ಹೆಸರುಗಳಿವೆ. ಹರಪ್ಪಾ ಸಂಸ್ಕೃತಿಯ ಮುದ್ರಿಕೆಗಳಲ್ಲಿ ನಾಗ ಚಿತ್ರಣವಿದೆ. ಕ್ರಿಸ್ತಶಕದ ಪ್ರಾರಂಭದ ಕಾಲದಿಂದಲೂ ನಾಗರಶಿಲ್ಪ ರಚನೆ ರೂಢಿಯಲ್ಲಿದೆ. ಮಹಾಭಾರತ ಮತ್ತು ವರಾಹ ಪುರಾಣಗಳಲ್ಲಿ ನಾಗ ಜನನದ ವಿವರಣೆಯಿದೆ.[೮] ಮಹಾಭಾರತದ ಪ್ರಕಾರ ನಾಗರು ಕಶ್ಯಪ ಪ್ರಜಾಪತಿಗೂ ಕದ್ರುವಿಗೂ ಜನಿಸಿದವರು. ಮಹಾಭಾರತವು ನಾಗರಸಂಖ್ಯೆ ಸಾವಿರಾರು ಎಂದು ಬಣ್ಣಿಸಿದೆ. ಇವರು ಪಾತಾಳ ಲೋಕದ ನಿವಾಸಿಗಳು. ಅನಂತ, ವಾಸುಕಿ, ಶಂಖ, ಪದ್ಮ, ಕಂಬಳ, ಕಾರ್ಕೋಟಕ, ಕಾಳಿಯ, ದನಂಜಯ ಎಂಬ ಎಂಟು ಜನ ಕಶ್ಯಪ ಪುತ್ರರು ದೇವತಾ ರೂಪಿಗಳು.[೯] ವರಾಹ ಪುರಾಣದಲ್ಲಿ ಕಶ್ಯಪನು ಏಳು ಜನ ಮಕ್ಕಳನ್ನು ದಾಕ್ಷಾಯಣಿಯಿಂದ ಪಡೆದನೆಂದು ಹೇಳಲಾಗಿದೆ. 'ಮಯಶಿಲ್ಪ'ದಲ್ಲಿ ವಾಸುಕಿ, ತಕ್ಷಕ, ಕಾರ್ಕೋತಕ, ಪದ, ಮಹಾಪದ್ಮ, ಶಂಖಪಾಲ ಮತ್ತು ಕುಳಿಕ ಎಂಬ ಏಳು ನಾಗಗಳ ವಿವರಗಳಿವೆ.[೧೦]

ನಾಗದೇವತೆಯು ಎಲ್ಲ ಪ್ರಧಾನ ದೇವತೆಗಳೊಂದಿಗೆ ಒಂದಿಲ್ಲೊಂದು ಬಗೆಯಲ್ಲಿ ಸಂಬಂಧಿತನು. ಇವನು ವಿಷ್ಣು, ಶಿವ, ಗಣಪತಿ, ದುರ್ಗಾ ಅವರೊಂದಿಗೆ ಕ್ರಮವಾಗಿ ಆಸನ, ಆಭರಣ, ಉದರಬಂಧ, ಕುಚಬಂಧವಾಗಿ ಕಾಣಸಿಗುತ್ತಾನೆ. ಭಾರತದಲ್ಲಿ ಶೈವ, ಶಾಕ್ತ, ವೈಷ್ಣವ, ಬೌದ್ಧ, ಜೈನ ಮೊದಲಾದ ಮತ ಸಂಪ್ರದಾಯದವರಲ್ಲಿ ನಾಗಪೂಜೆ ಈಗಲೂ ಪ್ರಚಲಿತದಲ್ಲಿದೆ.[೧೧]

[೭] ಕನ್ನಡ ವಿಶ್ವಕೋಶ, ಸಂ. ೧೦ ಪು. ೧೬೮

[೮] Ramachandra Rao, S. K., op. cit. P. 828

[೯] ಕನ್ನಡ ವಿಶ್ವಕೋಶ ಸಂಪುಟ, ೧೦, ಪು. ೧೬೮

[೧೦] Gopinatha Rao, T. A. Elements of Hindu Iconography Vol. II, Part II, P. 556-557

[೧೧] ಕನ್ನಡ ವಿಶ್ವಕೋಶ, ಸಂಪುಟ ೧೦, ಪುಟ. ೧೬೮

ನಾಗಾರಾಧನೆಯಿಂದ ಧನ, ಧಾನ್ಯ, ಸಂತಾನ ಪ್ರಾಪ್ತವಾಗುತ್ತದೆಂಬ ನಂಬಿಕೆಯಿದೆ. ಸಾಮಾನ್ಯವಾಗಿ ಸಂತಾನಾಪೇಕ್ಷೆಯಿಂದ ಸ್ತ್ರೀಯರು ನಾಗಪೂಜೆಯನ್ನು ಕೈಕೊಳ್ಳುತ್ತಾರೆ. ನಾಗದೇವನು ನಿಧಿ ನಿಕ್ಷೇಪಗಳ ರಕ್ಷಕನೆನಿಸಿದ್ದಾನೆ. ದಕ್ಷಿಣ ಭಾರತದಲ್ಲಿ ನಾಗರ ಕಲ್ಲುಗಳು ಅಶ್ವತ್ಥ ವೃಕ್ಷದಡಿಯಲ್ಲಿ ಪೂಜೆಗೊಳ್ಳುತ್ತವೆ. ಈ ಸಂಪ್ರದಾಯವು ಈಗಲೂ ಜೀವಂತವಾಗಿದೆ.

'ಶಿಲ್ಪರತ್ನ'ವು ನಾಗಶಿಲ್ಪದ ಲಕ್ಷಣಗಳನ್ನು ಹೀಗೆ ವಿವರಿಸಿದೆ. ನಾಗಶಿಲ್ಪವು ನಾಭಿಯಿಂದ ಮೇಲ್ಭಾಗದ ದೇಹವು ಮಾನವರೂಪದ್ದಾಗಿ, ಕೆಳಭಾಗವು ನಾಗದೇಹವುಳ್ಳದ್ದಾಗಿರುತ್ತದೆ. ನಾಗದೇವನ ತಲೆಯ ಮೇಲೆ ಹೆಡೆ ಇರುತ್ತದೆ. ನಾಗನಿಗೆ ಒಂದು ಹೆಡೆ ಇರಬಹುದು ಅಥವಾ ಮೂರು, ಐದು, ಏಳು ಇಲ್ಲವೆ ಒಂಬತ್ತು ಹೆಡೆಗಳಿರಬಹುದು. ನಾಗದೇವನ ಕೈಯಲ್ಲಿ ಖಡ್ಗ ಗುರಾಣಿಗಳಿರಬೇಕು.[೭೨]

ನಾಗನು ಸಂತಾನಶಕ್ತಿಯ ಸಂಕೇತವೆನಿಸಿದ್ದಾನೆ.[೭೩] ಯೋಗಶಾಸ್ತ್ರದಲ್ಲಿ ಇವನು ಕುಂಡಲಿನಿ ಶಕ್ತಿಯ ಪ್ರತೀಕ. ಸರ್ಪವು ಹಳೆಯ ಚರ್ಮವನ್ನು ಪಡೆಯುವುದರಿಂದ ಪರಿವರ್ತನೆ



**ಚಿತ್ರ ೬೫. ನಾಗರಾಜ, ಶೈವ ಗುಹೆ**

ಮತ್ತು ಪುನರುಜ್ಜೀವನದ ಸಂಕೇತ.[೭೪] ನಾಗನು ಕಾಲವನ್ನು ಅಂದರೆ ಅನಂತತೆಯನ್ನು ಪ್ರತಿನಿಧಿಸುವವನಾಗಿದ್ದಾನೆ. ಚಲುಕ್ಯರ ದೇವಾಲಯಗಳ ಬಾಗಿಲುವಾಡಗಳು ನಾಗಶಾಖೆಗಳಿಂದ ಅಲಂಕೃತವಾಗಿವೆ. ಇವು ಶ್ರೇಯಸ್ಕರ, ಮಂಗಲಕರ ಎಂದು ಭಾವಿಸಲಾಗಿದೆ. ಚಲುಕ್ಯ ಶಿಲ್ಪಗಳಲ್ಲಿ ನಾಗದೇವತೆಯು ಹಲವು ಬಗೆಯಾಗಿ ಕಾಣಿಸಿಕೊಂಡಿವೆ.

ಬಾದಾಮಿಯ ಶೈವ ಗುಹಾಲಯದ ಮೊಗಸಾಲೆಯ ವಿತಾನದಲ್ಲಿ ಮಧ್ಯದ ಅಂಕಣವು ನಾಗರಾಜನ ಶಿಲ್ಪದಿಂದ ಅಲಂಕೃತವಾಗಿದೆ. (**ಚಿತ್ರ ೬೫**) ಇದು ಚಲುಕ್ಯ ಶಿಲ್ಪಕಲೆಯಲ್ಲಿ

[೭೨] Ramachandra Rao, S. K., op. cit, P. 826

[೭೩] Adinarayana, M., op.cit, p.69

[೭೪] Devdutt Pattanaik, Myth = Mythya, New Delhi, P. 18

ಮೂಡಿ ಬಂದ ಮೊದಲ ನಾಗರಾಜ ಶಿಲ್ಪ. ಅನಂತರದಲ್ಲಿ ಈ ಕೆತ್ತನೆಯೇ ಲಾಕ್ಷಣಿಕವಾಗಿ ಮಾದರಿಯಾಯಿತು. ಚಲುಕ್ಯರ ಅತಿ ಪ್ರಾಚೀನ ನಾಗರಾಜ ಶಿಲ್ಪವಾಗುವುದರ ಜೊತೆಗೆ ಅತಿ ಸುಂದರ ಶಿಲ್ಪವಾಗಿರುವುದೊಂದು ಇದರ ಹಿರಿಮೆ.

ನಾಗರಾಜನು ನಾಭಿಯಿಂದ ಮೇಲ್ಭಾಗದಲ್ಲಿ ಮಾನವ ರೂಪದಲ್ಲಿದ್ದು ಈ ಭಾಗವು ವಿತಾನದ ಪಾತಳಿಯಿಂದ ಚಾಚಿಕೊಂಡು ಮೂರು ಆಯಾಮಗಳಿರುವ ದುಂಡು ಶಿಲ್ಪವಾಗಿ ಶಿಲ್ಪಿತವಾಗಿದೆ. ಈ ಬಗೆಯ ಶಿಲ್ಪ ಅಪರೂಪವಾದದ್ದು. ಇದು ಶಿಲ್ಪಿಯ ಪೂರ್ವ ಯೋಜಿತ ಕಂಡರಣೆ. ಇದು ಶಿಲ್ಪಿಯ ಅಗ್ಗಳಿಕೆ. ನಾಗರಾಜನ ಕೆಳಗಿನ ದೇಹ ಭಾಗವು. ನಾಗನದಾಗಿದ್ದು ಅದು ಸುರುಳಿಯಾಗಿ ಸುತ್ತಿಕೊಂಡಿದೆ. ಆತನ ತಲೆಯ ಮೇಲೆ ಐದು ಹೆಡೆಗಳ ಗೂಡಿದೆ. ನಾಗದೇಹದ ಪೊರೆಯನ್ನು ಕೂಡ ರೂವಾರಿಯು ವಾಸ್ತವದಲ್ಲಿರುವಂತೆ ತೋರಿಸಿದ್ದಾನೆ. ಶಿಲ್ಪಿಯ ಬದ್ಧತೆ ಪ್ರಶಂಸನೀಯವಾದುದಾಗಿದೆ. ನಾಗರಾಜನು ಶಿರಶ್ಚಕ್ರವಿರುವ ಕಿರೀಟ, ಕಂಠಾಭರಣ, ಕರ್ಣಾಭರಣಗಳಿಂದ ಭೂಷಿತನಾಗಿದ್ದಾನೆ. ಕೈಗಳೆರಡೂ ಭಗ್ನವಾಗಿವೆ. 'ಶಿಲ್ಪರತ್ನ'ವು ನಾಗದೇವತೆಯು ನಾಭಿಯಿಂದ ಮೇಲೆ ಮಾನವ ದೇಹದಿಂದ, ಕೆಳಗೆ ನಾಗದೇಹದಿಂದ ಕೂಡಿರಬೇಕೆಂದು ಸೂಚಿಸಿದೆ. ಅವಕ್ಕೆ ಒಂದು, ಮೂರು, ಐದು ಇಲ್ಲವೆ ಏಳು ಹೆಡೆಗಳಿರಬಹುದೆಂದೂ ಹೇಳಿದೆ. ಈ ಶಾಸ್ತ್ರಗ್ರಂಥದ ಕಾಲ ಹದಿನಾರನೆಯ ಶತಮಾನ. ಪ್ರಸ್ತುತ ನಾಗರಾಜ ಶಿಲ್ಪ ನಿರ್ಮಾಣಗೊಂಡದ್ದು ಆರನೆಯ ಶತಮಾನದಲ್ಲಿ . ಅದಾಗಿ 'ಶಿಲ್ಪರತ್ನ' ಲಿಖಿತಗೊಳ್ಳುವ ಮುನ್ನ, ಸಾವಿರ ವರ್ಷಗಳ ಹಿಂದೆಯೇ ಈ ಲಕ್ಷಣವಿರುವ ಶಿಲ್ಪವನ್ನು ಚಲುಕ್ಯ ರೂವಾರಿಗಳು ನಿರ್ಮಿಸಿದ್ದಾರೆ. ಇವರ ಶಿಲ್ಪ ನಿರ್ಮಾಣವೇ ಆನಂತರದ ಶಿಲ್ಪಗ್ರಂಥ ರಚನೆಗಳಿಗೆ ದಾರಿ ಮಾಡಿಕೊಟ್ಟಿತೆಂಬುದು ಸ್ಪಷ್ಟವಾಗುತ್ತದೆ. ಯಾವುದೇ ಶಿಷ್ಟಕಲೆಗೆ ಜನಪದವೇ ಮೂಲವಲ್ಲವೇ ? ಗುಹಾಲಯದಲ್ಲಿ ವಿತಾನದ ಅಲಂಕರಣೆಗೆ ನಾಗರಾಜ ಶಿಲ್ಪ ಕಂಡರಣೆಯನ್ನು ಪ್ರಾರಂಭಿಸಿದ ಚಲುಕ್ಯ ರೂವಾರಿಗಳು ರಾಚನಿಕ ಮಂದಿರಗಳಲ್ಲೂ ಮುಂದುವರೆಸಿದರು. ನಾಗರಾಳದ ನಾಗನಾಥ ದೇವಾಲಯ, ಬಾದಾಮಿಯ ಜಂಬುಲಿಂಗ ದೇವಾಲಯ ಹಾಗೂ ಐಹೊಳೆಯ ದುರ್ಗಾದೇವಾಲಯದ ವಿತಾನಗಳಲ್ಲಿ ಈ ಬಗೆಯ ಅಲಂಕಾರವನ್ನು ಕಾಣುತ್ತೇವೆ.

ನಾಗನಾಥ ದೇವಾಲಯದ ಮುಖ ಮಂಟಪದ ವಿತಾನದಲ್ಲಿ ಕೆತ್ತನೆಗೊಂಡ ನಾಗರಾಜ ಪ್ರತಿಮೆಯು ಬಹುಮಟ್ಟಿಗೆ ಶೈವ ಗುಹಾಲಯದಲ್ಲಿಯ ಶಿಲ್ಪವನ್ನು ಹೋಲುತ್ತದೆ. ಈತನೂ ಕೂಡ ಐದು ಹೆಡೆಗಳಿಂದ ಅಲಂಕೃತನಾಗಿದ್ದಾನೆ. ಕಿರೀಟ, ಕಂಠಾಭರಣಗಳಿಂದ ಭೂಷಿತನು. ಎರಡೂ ಕೈಗಳಲ್ಲಿ ಕಮಲದ ಮೊಗ್ಗನ್ನು ಹಿಡಿದಿರುವಂತೆ ಶಿಲ್ಪ ರಚನೆ ಮಾಡಲಾಗಿದೆ. ನಾಗದೇಹವು ನಾಲ್ಕು ಸುತ್ತಿನ ಸುರುಳಿಯನ್ನು ಪ್ರದರ್ಶಿಸುತ್ತದೆ. ಗುಹಾಲಯದ ನಾಗರಾಜ ಶಿಲ್ಪದಲ್ಲಿನ ಕಲಾ ಸೂಕ್ಷ್ಮತೆ ಇಲ್ಲಿಲ್ಲ. ಅಸಾಧಾರಣ ಭುಜಗಳಿರುವ ಭುಜಂಗನೀತ.

ಜಂಬುಲಿಂಗ ದೇವಾಲಯದ ಮುಖಮಂಟಪದ ವಿತಾನದಲ್ಲಿನ ನಾಗರಾಜನ ಕಂಡರಣೆಯಲ್ಲಿ ವೈವಿಧ್ಯವಿದೆ. ಇವನು ಏಳು ಹೆಡೆಗಳಿರುವ ನಾಗರಾಜ. ತನ್ನೆರಡು ಕೈಗಳಲ್ಲಿ ಹೂಮಾಲೆಯನ್ನು ಹಿಡಿದಿರುವುದೊಂದು ವಿಶೇಷ. ನಾಗರಾಜನನ್ನು ಸುತ್ತುವರಿದ ಚದುರಾಕಾರದ ಚೌಕಟ್ಟು ಹೆಚ್ಚು ಕಲಾತ್ಮಕವಾಗಿದೆ. ಪಟ್ಟದಕಲ್ಲಿನ ಮಲ್ಲಿಕಾರ್ಜುನ ದೇವಾಲಯದಲ್ಲಿ ನಾಗರಾಜನು ಮುಖಮಂಟಪದ ಬದಲಾಗಿ ಸಭಾಮಂಟಪದ ವಿತಾನದಲ್ಲಿ ಕಾಣಿಸಿಕೊಂಡಿದ್ದಾನೆ. ಈತನಿಗೂ ಏಳು ಹೆಡೆಗಳ ಅಲಂಕರಣವಿದೆ. ಆತನು ಅಂಜಲಿ ಮುದ್ರೆಯಲ್ಲಿ ಶಿಲ್ಪಿತನಾಗಿರುವುದೊಂದು ಇನ್ನೊಂದು ಬದಲಾವಣೆ.

ಐಹೊಳೆ ದುರ್ಗಾದೇವಾಲಯದ ಮುಖ ಮಂಟಪದ ಚತ್ತು ಹೆಚ್ಚಿನ ಸೂಕ್ಷ್ಮತೆ, ಕಲಾತ್ಮಕತೆಯಿಂದ ಕೂಡಿ ಸೊಗಸಾಗಿದೆ. ಇಲ್ಲಿ ಮೈವಡೆದ ನಾಗರಾಜನ ಶಿಲ್ಪವು ಒಂದು ಶ್ರೇಷ್ಠ ಕಲಾಕೃತಿ. **(ಚಿತ್ರ ೬೬)** ನಾಲ್ಕು ಸುತ್ತಿನ ಸುರಳೆಯಾಗಿರುವ ಈತನಿಗೆ ಏಳು ಹೆಡೆಗಳು

ಪ್ರಭಾವಳಿಯ ಪರಿಣಾಮವನ್ನು ಒದಗಿಸಿವೆ. ಆತನ ಮುಖದಲ್ಲಿ ಪ್ರಸನ್ನತೆಯಿದೆ. ನಾಗನ ಪಕ್ಕದಲ್ಲಿ ನಾಲ್ಕು ಜನ ನಾಗಿಣಿಯರನ್ನು ರೂಪಿಸಲಾಗಿದ್ದು, ಎರಡು ಮೂರ್ತಿಗಳು ನಾಶವಾಗಿವೆ. ನಾಗರಾಜನು ಕಿರೀಟಾದಿ ಆಭರಣಗಳಿಂದ ಶೋಭಿತನು. ಬಲಗೈಯಲ್ಲಿ ಹೂಮಾಲೆಯನ್ನು ಓಡಿದಿದ್ದಾನೆ. ಎಡಗೈಯಲ್ಲಿ ಹೂವಿನ ಪಾತ್ರೆಯಿದೆ. ನಾಗದೇಹದ ಮೇಲೆ ಹಾವಿನ ಪೊರೆಯ ಚಿತ್ತಾರವು ಯಥಾರ್ಥವಾಗಿದೆ.



ಚಿತ್ರ ೬೬. ನಾಗರಾಜ, ದುರ್ಗಾ ದೇವಾಲಯದ ವಿತಾನ

ಪಟ್ಟದಕಲ್ಲಿನಿಂದ ನಾಲ್ಕಾರು ಕಿಲೋಮೀಟರ ದೂರದಲ್ಲಿರುವ ಭದ್ರನಾಯಕನ ಜಾಲಿಹಾಳದ ಬಳಿ ಹುಲಿಗೆವ್ವನ ಕೊಳ್ಳವಿದೆ. ಅಲ್ಲಿನ ಗವಿಯಲ್ಲಿ ನಾಗರಾಜನ ಬಿಡಿ ಶಿಲ್ಪವೊಂದಿದೆ. ಇದೊಂದು ಅಪರೂಪದ ಮೂರ್ತಿ. ಇಲ್ಲಿ ನಾಗದೇವನು ಚತುರ್ಭುಜನಾಗಿದ್ದಾನೆ. ಮೇಲಿನ ಕೈಗಳಲ್ಲಿ ಶಂಖ, ಚಕ್ರಗಳನ್ನು ಹಿಡಿದಿದ್ದಾನೆ. ಇದರಿಂದಾಗಿ ಇವನು ಪ್ರಾಯಶಃ ವಿಷ್ಣುವಿನ ಆಸನ ಇಲ್ಲವೆ ಶಯ್ಯೆಯಾಗಿರುವ ಅನಂತ ಅಥವಾ ವಾಸುಕಿಯಾಗಿರಬೇಕು.[೧೫] ಆತನ ಒಂದು ಕೈ ಮುರಿದು ಹೋಗಿದೆ. ಇನ್ನೊಂದನ್ನು ನಾಗದೇಹದ ಮೇಲಿರಿಸಿದ್ದಾನೆ. ನಾಗರಾಜನು ಕರಂಡ ಮುಕುಟ, ಚಕ್ರಕುಂಡಲ, ಪದಕಸರ, ಯಜ್ಞೋಪವೀತ, ನಾಗಮುರಿಗೆ, ಉದರಬಂಧ ಮೊದಲಾದವುಗಳಿಂದ ಅಲಂಕೃತ ನಾಗಿದ್ದಾನೆ.

ನಾಗದೇವನು ನಾಗಿಣಿಯೊಂದಿಗೆ ಹಲವು ಶಿಲ್ಪಗಳಲ್ಲಿ ಕಾಣಿಸಿಕೊಂಡಿದ್ದಾನೆ. ಬಾದಾಮಿಯ ಮಹಾವಿಷ್ಣು ಗೃಹದ ಕಂಬವೊಂದರಲ್ಲಿನ ಬೋದಿಗೆಯು ನಾಗ ನಾಗಿಣಿಯರ

[೧೫] ಸುಂದರ. ಅ. 'ಕರ್ನಾಟಕ ಭಾರತಿ', ಸಂಪುಟ ೯, ಸಂಚಿಕೆ ೩, ಪು. ೮೨–೮೮

ಶಿಲ್ಪದಿಂದ ಶೋಭಿತವಾಗಿದೆ. **(ಚಿತ್ರ ೬೭)** ಮಧ್ಯಮ ಗಾತ್ರದ ಈ ಶಿಲ್ಪದಲ್ಲಿ ನಾಗ ನಾಗಿಣಿಯರು ಪೂರ್ಣವಾಗಿ ಮಾನವ ರೂಪದಲ್ಲಿ ಪ್ರಕಟಗೊಂಡಿದ್ದಾರೆ. ಕಿರೀಟದ ಹಿಂಭಾಗದಲ್ಲಿ ಐದು ಹೆಡೆಗಳು ಪ್ರಭಾವಳಿಯ ಪರಿಣಾಮವನ್ನು ತಂದುಕೊಟ್ಟಿವೆ. ನಾಗಿಣಿಯ ತಲೆಯ ಮೇಲೆ ಒಂದು ಹೆಡೆಯಿದೆ. ದಂಪತಿಗಳೀರ್ವರೂ ಪರಸ್ಪರ ಎದುರುಬದುರಾಗಿ ನಿಂತಿರುವುದರಿಂದ ನಾಗಿಣಿಯು ವೀಕ್ಷಕನತ್ತ ಬೆನ್ನು ಮಾಡಿದ್ದಾಳೆ. ಆಕೆ ವೈಕಕ್ಷಕ ಎಂಬ ವಿಶಿಷ್ಟ ಬಗೆಯ ಕಂಠಾಭರಣವನ್ನು ಧರಿಸಿದ್ದು ಅದರ ಹಿನ್ನೋಟ ಇಲ್ಲಿ ಚಿತ್ರಿತವಾಗಿದೆ. ಇದರಿಂದ ಚಲುಕ್ಯರ ಕಾಲದ ಈ ವಿಶಿಷ್ಟ ಆಭರಣದ ಹಿಂಭಾಗದ ರಚನೆಯನ್ನು ತಿಳಿಯಲು ಸಾಧ್ಯವಾಗಿದೆ.

ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಪ್ರತೋಳಿಯ ಉತ್ತರ ಗೋಡೆಯ ಮೇಲ್ಭಾಗದಲ್ಲಿ ಪ್ರಸ್ತರಕ್ಕೆ ಸಮೀಪವಾಗಿ ಅರೆಗಂಬದ ಮೇಲೆ ನಾಗದಂಪತಿಗಳ ಮೂರ್ತಿಗಳನ್ನು ಸಂಯೋಜಿಸಿರುವುದು ವಿಶಿಷ್ಟವೆನಿಸುತ್ತದೆ. ನಾಗ ನಾಗಿಣಿಯರು ಪೀಠದ ಮೇಲೆ ಆಸೀನರಾಗಿದ್ದಾರೆ. ಅವರು ಪೂರ್ತಿಯಾಗಿ ಮಾನವರೂಪದಲ್ಲಿ ಬಿಂಬಿತವಾಗಿದ್ದಾರೆ. ನಾಗದೇವನನ್ನು ವೀಣೆ ನುಡಿಸುತ್ತಿರುವಂತೆ ತೋರಿಸಲಾಗಿದೆ. ಈ ಬಗೆಯ ಚಿತ್ರಣ ಅಪರೂಪದ್ದು. ಇಬ್ಬರೂ ಮಿತವಾಗಿ ಆಭರಣವನ್ನು ಧರಿಸಿದ್ದಾರೆ. ನಾಗನ ಮೇಲೆ ಮೂರು ಹೆಡೆಗಳನ್ನು ನಾಗಿಣಿಯ ಮೇಲೆ ಒಂದು ಹೆಡೆಯನ್ನು ಕೆತ್ತನೆ ಮಾಡಲಾಗಿದೆ. ಇಬ್ಬರ ಮುಖಗಳಲ್ಲಿ ಸಹಜ ಸೌಂದರ್ಯವಿದೆ. ನಾಗದೇವನು ತನ್ನ ಸಂಗೀತಕ್ಕೆ ತಾನೇ ಅಚ್ಚರಿಪಡುವ ರೀತಿಯಲ್ಲಿ ಕಣ್ಣರಳಿಸಿದ್ದಾನೆ. ಸಂಗೀತದಲ್ಲಿ ತಲ್ಲೀನಳಾಗಿರುವ ಮುಖಭಾವ ನಾಗಿಣಿಯದು. ಇದು ಒಬ್ಬ ಪ್ರೌಢ ಕಲಾವಿದನ ಸುಂದರ ಕಲಾಕೃತಿ ಯಾಗಿದೆ. **(ಚಿತ್ರ ೬೮)** ಈ ಶಿಲ್ಪ ಸಂಯೋಜನೆಯು ಎರಡು ಕಲ್ಲುಗಳಿಂದಾಗಿದೆ !

ಚಲುಕ್ಯ ಶಿಲ್ಪಕಲೆಯಲ್ಲಿ ಅರಳಿನಿಂತ ಅತ್ಯಂತ ಭವ್ಯ ನಾಗದೇವನ ಶಿಲ್ಪವೆಂದರೆ ಮಂಗಲೇಶನ ವಿಷ್ಣುಗೃಹದ ಮಹಾವಿಷ್ಣು ವಿಗ್ರಹದ ಶಯ್ಯೆಯಾಗಿರುವ ಅನಂತನದು. ನಾಗ ಸುರುಳಿಯು ವಿಷ್ಣುವಿನ ಪೀಠವಾಗಿದೆ. ಅನಂತನ ಐದು ಹೆಡೆಗಳು ದೇವನ ತಲೆಯ ಮೇಲೆ ರಾಜ ಚತ್ತರಿಗೆಯಂತೆ ಚಾಚಿಕೊಂಡು ಆತನ ವೈಭವವನ್ನು ಹೆಚ್ಚಿಸಿವೆ. ಈ ಶಿಲ್ಪ ನಿರೂಪಣೆಯಲ್ಲಿ ಕಲಾವಿದನು ಅಭಿವ್ಯಕ್ತಗೊಳಿಸಿರುವ ಕಲ್ಪನೆ ಪ್ರಶಂಸನೀಯವಾದುದು. ಆದರೆ ಇದು ಸ್ವತಂತ್ರ ನಾಗಶಿಲ್ಪವಾಗಿರದೆ ಪರಾವಾಸುದೇವ ಪ್ರತಿಮೆಯ ಸಂಯೋಜನೆಯ ಅಂಗವಾಗಿದೆ.



ಚಿತ್ರ ೬೭. ನಾಗದಂಪತಿ, ಮಹಾವಿಷ್ಣು ಗೃಹ



ಚಿತ್ರ ೬೮. ನಾಗ ನಾಗಿನಿ ಪ್ರತೋಳಿ ವಿರೂಪಾಕ್ಷ ದೇವಾಲಯ

ಇದೇ ರೀತಿಯಾಗಿ ಜೈನ ಪರಂಪರೆಯಲ್ಲೂ ನಾಗನಿಗೆ ಮಹತ್ವದ ಸ್ಥಾನವಿದೆ. ಸುಪಾರ್ಶ್ವನಾಥ ಹಾಗೂ ಪಾರ್ಶ್ವನಾಥರ ಹೆಸರುಗಳಲ್ಲಿ ಸಾಮ್ಯವಿರುವಂತೆ ಅವರ ಲಾಂಛನಗಳಲ್ಲೂ ಸಾಮ್ಯವಿದೆ. ಇಬ್ಬರಿಗೂ ನಾಗನೇ ಲಾಂಛನ. ಜೈನ ಶಿಲ್ಪಕಲೆಯಲ್ಲಿ ತೀರ್ಥಂಕರರನ್ನು ಅವರ ಲಾಂಛನಗಳನ್ನಾಧರಿಸಿ ಗುರುತಿಸಲಾಗಿದೆ. ಪ್ರತಿಮಾಶಾಸ್ತ್ರದನ್ವಯ ಏಳು ಹೆಡೆಗಳ ನಾಗ ಪಾರ್ಶ್ವನಾಥನನ್ನು ಮತ್ತು ಐದು ಹೆಡೆಗಳ ನಾಗ ಸುಪಾರ್ಶ್ವನಾಥನನ್ನು ಸಂಕೇತಿಸುತ್ತವೆ. ಆದರೆ ಚಲುಕ್ಯರ ಕಾಲದ ಜೈನ ಶಿಲ್ಪಗಳಿಗೆ ಇದು ಅನ್ವಯಿಸುವುದಿಲ್ಲ.

ಬಾದಾಮಿ, ಐಹೊಳೆಯ ಜೈನ ಗುಹೆಗಳಲ್ಲಿ ಪಾರ್ಶ್ವನಾಥ ತೀರ್ಥಂಕರನ ಬೃಹತ್ ಪ್ರತಿಮೆಗಳಿವೆ. ಆತನು ಐದು ಹೆಡೆಯ ನಾಗನಿಂದ ಶೋಭಿತನಾಗಿದ್ದಾನೆ. ಈ ಶಿಲ್ಪಗಳಲ್ಲಿ ಅಭಿವ್ಯಕ್ತವಾದ ಕಥಾ ನಿರೂಪಣೆಯನ್ನು ಆಧರಿಸಿ ಇವು ಪಾರ್ಶ್ವನಾಥನ ಶಿಲ್ಪಗಳೆಂದು ಖಚಿತ ಪಡಿಸಲಾಗಿದೆ. ಇಲ್ಲಿಯ ನಾಗನು ಜೈನ ಪರಂಪರೆಯ ಧರಣೇಂದ್ರ ಯಕ್ಷ, ಹಿಂದೂ ಸಂಪ್ರದಾಯದ ನಾಗದೇವನಲ್ಲ. ಈ ನಾಗ ಪ್ರತಿಮೆಗಳು ಕಥಾ ನಿರೂಪಣೆಯ ಭಾಗವಾಗಿ ಮೂಡಿಬಂದಿವೆ. ಇವು ಸ್ವತಂತ್ರವಾದ ಅಲಂಕಾರ ಶಿಲ್ಪಗಳಲ್ಲ.

ಗುಹಾಲಯ ಮತ್ತು ರಾಚನಿಕ ಮಂದಿರಗಳಲ್ಲಿ ಪ್ರಕಟಗೊಂಡ ವರಾಹನ ಭವ್ಯ ವಿಗ್ರಹಗಳ ಸಂಯೋಜನೆಯಲ್ಲಿ ಮೇಲಿನ ಮೂಲೆಗಳು ವಿದ್ಯಾಧರ ಶಿಲ್ಪಗಳಿಂದ ಚೆಲುವು ಪಡೆದಂತೆ ಕೆಳಗೆ ನಾಗದಂಪತಿಗಳು ಸ್ಥಳಾವಕಾಶವನ್ನು ಆವರಿಸಿಕೊಂಡು ಶಿಲ್ಪ ಸಮತೋಲನಕ್ಕೆ ನೆರವಾಗಿವೆ. ಬಾದಾಮಿಯ ಎರಡೂ ವೈಷ್ಣವ ಗುಹೆಗಳಲ್ಲಿ ಈ ಬಗೆಯ ಕೆತ್ತನೆಯಿದೆ. ವರಾಹನ ಪಾದದ ಹತ್ತಿರ ಭಾಗಶಃ ಮಾನವರೂಪದಲ್ಲಿ ಮತ್ತು ಉಳಿದರ್ಧ ಅಧೋಭಾಗ ನಾಗರೂಪದಲ್ಲಿ ಇರುವ ನಾಗನಾಗಿಣಿಯರ ಮೂರ್ತಿಗಳನ್ನು ರೂಪಿಸಲಾಗಿದೆ.

ಮಹಾಕೂಟದ ಮಹಾಲಿಂಗ (ವಿಷ್ಣು?) ಗುಡಿಯ ದಕ್ಷಿಣಗೋಡೆಯ ದೇವಕೋಷ್ಠದಲ್ಲಿ ಕೆತ್ತಲಾದ ವರಾಹ ಶಿಲ್ಪವು ಚಲುಕ್ಯ ರೂವಾರಿಗಳ ಮೇರುಕೃತಿಗಳಲ್ಲಿ ಒಂದಾಗಿದೆ. ಶಿಲ್ಪದ ಕೆಳಭಾಗದಲ್ಲಿ ನಾಗ ದಂಪತಿಗಳ ಜೋಡಿಯು ಮನಮೋಹಕವಾಗಿ ರೂಪುಗೊಂಡಿದೆ. ಅವರು ಮೂರು ಸುತ್ತಿನ ಸುರುಳಿಯಾಗಿ ಮುದುಡಿಕೊಂಡಿದ್ದಾರೆ. ವರಾಹನು ನಾಗನ ಹೆಡೆಯ ಮೇಲೆ ಕಾಲಿರಿಸಿದ್ದಾನೆ. ನಾಗನು ವಿನೀತ ಭಾವದಿಂದ ಬಾಗಿಕೊಂಡು ಕೈ ಮುಗಿಯುತ್ತಿದ್ದಾನೆ. ನಾಗಿಣಿಯ ಮೈಮಣಿತದಲ್ಲಿ ಸ್ತ್ರೀ ಸಹಜ ಲಾಲಿತ್ಯವಿದೆ. ಈ ನಾಗದಂಪತಿಗಳು ಕಥಾನಕ ಶಿಲ್ಪದ ಭಾಗವಾಗಿದ್ದರೂ ಸ್ವತಂತ್ರ ಅಲಂಕಾರ ಶಿಲ್ಪವಾಗಿ ನಿರೂಪಣೆಗೊಂಡಂತೆ ಗೋಚರಿಸುತ್ತದೆ. ಇದರಂತೆ ಬಾದಾಮಿಯ ಮೇಲಿನ ಶಿವಾಲಯದ ಪಶ್ಚಿಮ ಗೋಡೆಯ ದೇವಕೋಷ್ಠದಲ್ಲಿ ಕೃಷ್ಣನ ಪದತಲದಲ್ಲಿ ಸಿಲುಕಿರುವ ಕಾಳೀಯನನ್ನು ಬಿಡಿಸಲಾಗಿದೆ. ಆತನ ಜೊತೆ ಇರುವ ನಾಗಿಣಿಯೂ ಕೃಷ್ಣನಿಗೆ ಕೈಮುಗಿಯುತ್ತಿದ್ದಾಳೆ. ಹೀಗೆ ನಿರೂಪಣಾ ಶಿಲ್ಪದ ಭಾಗವಾಗಿ ನಾಗದಂಪತಿಗಳನ್ನು ಕಂಡರಿಸಲಾಗಿದೆ. ಇವು ಶಿಲ್ಪಾಲಂಕಾರದ ಪ್ರಕ್ರಿಯೆಯಲ್ಲಿ ನೆರವಾಗಿವೆ.

ಬಾಗಿಲುವಾಡಗಳ ಅಲಂಕಾರಕ್ಕೆಂದು ನಾಗಶಿಲ್ಪವನ್ನು ವಿಶಿಷ್ಟ ರೀತಿಯಲ್ಲಿ ಬಳಸಲಾಗಿದೆ. ಚಲುಕ್ಯರ ದ್ವಾರ ಚೌಕಟ್ಟಿನ ಶಾಖೆಗಳಲ್ಲಿ ನಾಗಶಾಖೆಯು ಒಂದು ಲಾಕ್ಷಣಿಕ ಅಂಶವಾಗಿದೆ. ಲಲಾಟ ಬಿಂಬದಲ್ಲಿ ಗರುಡನು ನಾಗ ಬಾಲಗಳನ್ನು ಹಿಡಿದಿರುವಂತೆಯೂ, ನಾಗಗಳು ಬಾಗಿಲದ ತೋಳ್‌ಗುಂಟ ಕೆಳಗೆ ಇಳಿದು ಹೊಸ್ತಿಲ ಬಳಿ ಹೆಡೆ ಎತ್ತಿ ದೇವನಿಗೆ ನಮಿಸುತ್ತಿರುವಂತೆಯೂ ನಾಗಶಿಲ್ಪದ ರಚನೆ ಮಾಡಲಾಗಿರುತ್ತದೆ. ಇದು ಚಲುಕ್ಯರ ದ್ವಾರ ಮಂಟಪದ ವಿನ್ಯಾಸದ ವಿಶಿಷ್ಟತೆ ಎನಿಸಿದೆ. ಐಹೊಳೆಯ ದುರ್ಗಾ ದೇವಾಲಯದ ಸಭಾಮಂಟಪದ ಬಾಗಿಲುವಾಡದಲ್ಲಿ ಈ ಶಿಲ್ಪ ರಚನೆಯ ಹೆಚ್ಚುಗಾರಿಕೆಯನ್ನು ಗುರುತಿಸಬಹುದು. ವಾಡಿಕೆಯಂತೆ ಚೌಕಟ್ಟಿನ ಮೇಲ್ಭಾಗದಲ್ಲಿ ಗರುಡನು ನಾಗಬಾಲಗಳನ್ನು ಹಿಡಿದುಕೊಂಡಿದ್ದಾನೆ. ಈ ಬಾಗಿಲುವಾಡದ ಅಂಚುಗುಂಟ ಇಳಿದಿರುವ ನಾಗಗಳು ಅಲ್ಲಲ್ಲಿ

ನಿಂತು ನಮಸ್ಕರಿಸುತ್ತಿರುವಂತೆ ಹೆಡೆಗಳನ್ನು ಬಿಡಿಸಲಾಗಿದೆ. ಹೀಗೆ ನಾಗಗಳು ಬಾಗಿಲು ಚೌಕಟ್ಟಿನ ಆಲಂಕಾರಿಕ ಶಿಲ್ಪಗಳಾಗಿ ಮೂಡಿಬಂದಿವೆ.

ಇದರಂತೆ ದ್ವಾರಪಾಲರ ಗದೆಗಳನ್ನು ಸಿಂಗರಿಸಲೆಂದು ಕೂಡ ನಾಗಹೆಡೆಯನ್ನೂ ನಾಗದೇಹದ ಮಣಿತಗಳನ್ನು ಬಳಸಲಾಗಿದೆ. ಇದಕ್ಕೆಲ್ಲ ಮೂಲಕಾರಣ ಅದರ ದೇಹ ವಿಲಕ್ಷಣತೆ ಹಾಗೂ ಸೌಂದರ್ಯ! ಅದನ್ನು ಶಿಲ್ಪಿ ತನ್ನ ಕಲಾವಸ್ತುವಾಗಿ ಅವಕಾಶ ದೊರೆತಾಗಲೆಲ್ಲ ಬಳಸಿಕೊಂಡಿದ್ದಾನೆ. ಶಿಲ್ಪದಲ್ಲಿ ನಾಗನು ಸ್ವತಂತ್ರವಾಗಿ ಇಲ್ಲವೆ ದೇವತೆಗಳಿಗೆ ಆಸನವಾಗಿ, ಆಭರಣವಾಗಿ, ಆಯುಧವಾಗಿ ಪ್ರಕಟಗೊಂಡಿದ್ದಾನೆ.

## ೪. ದ್ವಾರಪಾಲರು

ದೇವಾಲಯದ ಅಲಂಕಾರ ಶಿಲ್ಪಗಳಲ್ಲಿ ದ್ವಾರಪಾಲರ ಶಿಲ್ಪಗಳು ಹೆಚ್ಚಿನ ಮಹತ್ವ ಪಡೆದಿವೆ. ಅದಕ್ಕೆ ಮುಖ್ಯ ಕಾರಣವೆಂದರೆ ಅವು ಅಲಂಕರಿಸುವ ದೇವಾಲಯದ ವಾಸ್ತುಅಂಗ. ಪ್ರಧಾನ ದೇವತೆಯ ಗರ್ಭಗೃಹದ ಬಾಗಿಲದ ಎಡಬಲಗಳಲ್ಲಿ ತಮ್ಮ ಪ್ರಭುವಿನ ಸೇವೆಗಾಗಿ ರಕ್ಷಣೆಗಾಗಿ ದ್ವಾರಪಾಲರು ನಿಂತಿರುತ್ತಾರೆ. ಸಾಮಾನ್ಯವಾಗಿ ಇವರು ಜೋಡಿಗಳಾಗಿ ಶಿಲ್ಪಿತರಾಗಿರುತ್ತಾರೆ.

ಒಬ್ಬ ದೇವತೆಗೆ ನಿರ್ದಿಷ್ಟ ದ್ವಾರಪಾಲರು ನಿಗದಿಗೊಂಡಿರುವುದು ಶಿಲ್ಪಶಾಸ್ತ್ರಗಳಿಂದ ತಿಳಿದುಬರುತ್ತದೆ. ಈ ಶಿಲ್ಪಗಳ ಪ್ರತಿಮಾ ಲಕ್ಷಣಗಳು ಪ್ರಧಾನ ದೇವತೆಯ ಶಿಲ್ಪ ಲಕ್ಷಣಗಳಿಗೆ ಅನುಗುಣವಾಗಿರುತ್ತವೆ. ಶೈವ ದ್ವಾರಪಾಲನು ತ್ರಿಶೂಲ, ಸರ್ಪ ಹಿಡಿದಿರುವಂತೆ ಶಿಲ್ಪ ನಿರೂಪಣೆ ಇರುತ್ತದೆ. ಇದರಿಂದ ಗರ್ಭಗುಡಿಯಲ್ಲಿ ಯಾವ ಮೂರ್ತಿಯೂ ಇಲ್ಲದಿದ್ದಲ್ಲಿ ದ್ವಾರಪಾಲರನ್ನು ಆಧರಿಸಿ ಆ ದೇವಾಲಯವು ಯಾವ ದೇವನಿಗಾಗಿ ಅರ್ಪಿತವಾದುದ್ದೆಂಬುದನ್ನು ಗುರುತಿಸಲು ಸಾಧ್ಯ. ಅದಾಗಿ ದ್ವಾರಪಾಲರ ಶಿಲ್ಪಗಳು ಹೆಚ್ಚಿನ ಮಹತ್ವ ಪಡೆಯುತ್ತವೆ.

ದ್ವಾರಪಾಲರು ಗದೆ ಇಲ್ಲವೆ ದಂಡವನ್ನು ಹಿಡಿದಿರುವಂತೆ ಕೆತ್ತನೆಗೊಂಡಿರುವುದು ಸಾಮಾನ್ಯ. ಗದೆಯು ದುಷ್ಟರನ್ನು ಸದೆ ಬಡೆಯುವ ಗುಣದ ಪ್ರತೀಕವಾದರೆ, ದಂಡವು ದತ್ತಾಧಿಕಾರದ ಸಂಕೇತ[೬]. ಈ ಮೇಲೆ ಸೂಚಿಸಲಾದಂತೆ ದ್ವಾರಪಾಲರ ಪ್ರಧಾನ ಕಾರ್ಯವೆಂದರೆ ದೇವಾಲಯ ಇಲ್ಲವೆ ಗರ್ಭಗೃಹವನ್ನು ರಕ್ಷಿಸುವುದಾಗಿದೆ. ರಾಜನ ಸೇವೆಗೆ ಸೇವಕರಿದ್ದಂತೆ ದೇವನ ಸೇವೆಗೆ ದ್ವಾರಪಾಲರು.

ದ್ವಾರಪಾಲರು ಪರಿವಾರ ದೇವತೆಗಳೆಂದು ಪರಿಗಣಿತರು. ಅಂದರೆ ಇವರು ಅರೆದೈವರು. ಗರ್ಭಗೃಹದ ಜೊತೆಗೆ ದೇಗುಲದ ಬೇರೆ ದ್ವಾರಗಳ ಶಾಖೆಗಳಲ್ಲಿಯೂ ಈ ಶಿಲ್ಪಗಳು ಕಾಣಿಸಿಕೊಳ್ಳಬಹುದು. ಚಲುಕ್ಯ ದೇವಾಲಯಗಳ ಸಭಾಮಂಟಪ, ಮುಖಮಂಟಪ ಇಲ್ಲವೆ ಮಹಾದ್ವಾರಗಳ ಪ್ರವೇಶದ್ವಾರಗಳಲ್ಲಿ ದ್ವಾರಪಾಲರು ಅಲಂಕಾರ ಪ್ರತಿಮೆಗಳಾಗಿ ಕಾಣಿಸಿಕೊಂಡಿದ್ದಾರೆ.

ದ್ವಾರಪಾಲರ ನಿಲುವು ಅವರ ಕಾರ್ಯಕ್ಕೆ ಅನುಗುಣವಾಗಿರುವಂತಹದು. ನಿಂತ ಭಂಗಿಯಲ್ಲಿ ಅವರನ್ನು ರೂಪಿಸಲಾಗುತ್ತದೆ. ಅವರನ್ನು ಸಮಭಂಗದಲ್ಲಿ ಇಲ್ಲವೆ ಕತ್ತರಿಗಾಲು ಹಾಕಿಕೊಂಡಂತೆ ಕೆತ್ತನೆ ಮಾಡಿರಬಹುದು. ದೇವಾಲಯವನ್ನು ಪ್ರವೇಶಿಸುವ ಭಕ್ತರನ್ನು 'ಜಾಗ್ರತೆ' ಎಂದು ಎಚ್ಚರಿಸುವ ರೀತಿಯಲ್ಲಿ ದ್ವಾರಪಾಲಕರ ಮುಖಭಾವ ಇರುವುದುಂಟು. ತುಂಬಾ ವಿಕಸಿತ ಚಲುಕ್ಯ ದೇವಾಲಯಗಳಲ್ಲಿ ದ್ವಾರಪಾಲರು ಉಬ್ಬಿದ ಕಣ್ಣುಗುಡ್ಡೆ, ಏರಿಸಿದ ಹುಬ್ಬುಗಳು, ಹೊರಚಾಚಿದ ಕೋರೆ ಹಲ್ಲುಗಳಿಂದ ಭಯವನ್ನು ಹುಟ್ಟಿಸುವಂತೆ ಕಂಡರಣೆಗೊಂಡಿದ್ದಾರೆ. ಅವರು ಹಿಡಿದಿರುವ ಆಯುಧಗಳು ದೇವರ ಸಾಮರ್ಥ್ಯ ಹಾಗೂ ಮರ್ದಿಸುವ ಗುಣವನ್ನು ನೆನಪಿಸುವುದರ ಮೂಲಕ ಭಾವುಕನಲ್ಲಿ ಭಯ, ಭಕ್ತಿಯನ್ನು

[೬] Ramachandra Rao, S. K., op. cit, P. 784

ಮೂಡಿಸುತ್ತವೆ. ಹೀಗೆ ದೇವಾಲಯದ ಪ್ರವೇಶದ್ವಾರವನ್ನು ಅಂದಗೊಳಿಸುವ ದ್ವಾರಪಾಲರು ಕೇವಲ ಮಂದಿರದ ಸೌಂದರ್ಯವರ್ಧಕರಾಗಿ ನಿಲ್ಲದೆ ಭಕ್ತರ ಮನದಲ್ಲಿ ತಕ್ಕುದಾದ ಭಾವನೆಯನ್ನು ಮೂಡಿಸುತ್ತಾರೆ.

ಸಾಮಾನ್ಯವಾಗಿ ದ್ವಾರಪಾಲರು ಮಾನವ ಸಹಜಗಾತ್ರದಲ್ಲಿ ರೂಪಿತರಾಗಿ ಬಾಗಿಲ ಬಳಿ ನಿಂತಿರುತ್ತಾರೆ. ಅವರ ಭದ್ರ ಬಾಹುಗಳು, ಹರವಾದ ವಕ್ಷ, ಎತ್ತರವಾದ ನಿಲುವು ಅವರ ಸಾಮರ್ಥ್ಯವನ್ನು ಪ್ರತಿಬಿಂಬಿಸುತ್ತವೆ. ದ್ವಾರಪಾಲರ ಶಿಲ್ಪಗಳಲ್ಲಿ ಪ್ರಭಾವಳಿ ಕಂಡು ಬರುವುದಿಲ್ಲ. ಆದರೆ ದ್ವಾರಪಾಲರು ತಪ್ಪದೆ ವಸ್ತ್ರಾಭರಣಗಳಿಂದ ಭೂಷಿತರಾಗಿರುತ್ತಾರೆ. ವಿಶೇಷವಾಗಿ ಚಲುಕ್ಯರ ರಾಚನಿಕ ಮಂದಿರಗಳಲ್ಲಿ ದ್ವಾರಪಾಲರು ವೈವಿಧ್ಯಪೂರ್ಣವಾಗಿ ಸಂಯೋಜಿತರಾಗಿದ್ದಾರೆ. ಈ ವೈವಿಧ್ಯವು ಶಿಲ್ಪಕಲಾ ಬೆಳವಣಿಗೆಯನ್ನು ಸೂಚಿಸುವಂತಹದು. ಇದರಿಂದಾಗಿ ದ್ವಾರಪಾಲ ಶಿಲ್ಪಗಳ ಅಧ್ಯಯನವು ಮಹತ್ವದ್ದಾಗಿರುತ್ತದೆ. ಚಲುಕ್ಯ ವಾಸ್ತುಕಲೆಯ ಅವಿಭಾಜ್ಯ ಅಂಗವಾದ ದ್ವಾರಪಾಲರು ಹಲವು ಬಗೆಯಾಗಿ ಕಾಣಿಸಿಕೊಂಡಿದ್ದಾರೆ.

**(ಅ) ಗುಹಾಲಯಗಳ ದ್ವಾರಪಾಲರು**

ಚಲುಕ್ಯರ ಗುಹಾಲಯಗಳು ೬-೭ನೆಯ ಶತಮಾನದ ಅವಧಿಯಲ್ಲಿ ಕೊರೆಯಲಾದವುಗಳು. ಅದಾಗಿ ಪ್ರಾರಂಭದ ಹಂತದ ದ್ವಾರಪಾಲರು ನಮಗೆ ಕಾಣ ಸಿಗುವುದು ಇಲ್ಲಿಯೇ. ಚಲುಕ್ಯಕಾಲದ ದ್ವಾರಪಾಲ ಶಿಲ್ಪಗಳು ಬೇರೆ ಬೇರೆ ಜಾಗೆಗಳಲ್ಲಿ ವಿಭಿನ್ನ ರೀತಿಯಾಗಿ ಕಾಣಿಸಿಕೊಂಡಿವೆ. ಅವನ್ನು ಸ್ಥೂಲವಾಗಿ ಹೀಗೆ ಅಭ್ಯಸಿಸಬಹುದಾಗಿದೆ.

ಐಹೊಳೆಯ ರಾವಲಫಡಿಯ ಹೊರಗೋಡೆಯ ಮೇಲೆ ತುಂಬಾ ನಶಿಸಿರುವ ದ್ವಾರಪಾಲ ಶಿಲ್ಪಗಳಿವೆ. ಈ ದ್ವಾರಪಾಲರು ಧರಿಸಿರುವ ಬಟ್ಟೆಗಳು ಕುತೂಹಲಕಾರಿಯಾಗಿವೆ. ಅವು ಭಾರತೀಯ ಸಂಪ್ರದಾಯದ ವಸ್ತ್ರಗಳಾಗಿರದೆ ಪ್ರಾಚೀನ ಕಾಲದ ವಿದೇಶಿಯ(ಗ್ರೀಕ)ರ ನಿಲುವಂಗಿಯನ್ನು ಹೋಲುತ್ತವೆ. ಆದ್ದರಿಂದ ಇವರನ್ನು ಯವನ ದ್ವಾರಪಾಲರೆಂದು ಗುರುತಿಸಲಾಗಿದೆ. ಇವನ್ನು ಅರೆದೈವ ಶಿಲ್ಪಗಳೆಂದು ಕರೆಯಲಾಗದು. ಅವರು ಮಾನವ ದ್ವಾರಪಾಲರು.

ಅದೇ ಗುಹೆಯ ಒಳಗೆ ಮೂಲೆಗಳಲ್ಲಿ ಸಾಂಪ್ರದಾಯಿಕ ಅರೆದೈವ ದ್ವಾರಪಾಲ ಮೂರ್ತಿಗಳನ್ನು ಕಾಣುತ್ತೇವೆ. ಈ ಮೂರ್ತಿಗಳು ಆವರಿಸಿದ ಜಾಗೆ ಅಪರೂಪದ್ದು. ಸಭಾಮಂಟಪದ ಈಶಾನ್ಯ ಮತ್ತು ಆಗ್ನೇಯ ಮೂಲೆಗಳಲ್ಲಿ ಈ ಶೈವ ದ್ವಾರಪಾಲರು ಮೂಡಿಬಂದಿದ್ದಾರೆ. ಒಬ್ಬನು ಸರ್ಪವನ್ನು ಇನ್ನೊಬ್ಬನು ಖಟ್ವಾಂಗವನ್ನು ಹಿಡಿದಿರುವಂತೆ ಕಂಡರಿಸ ಲಾಗಿದೆ.

ಬಾದಾಮಿಯ ಶೈವ ಗುಹೆಯಲ್ಲಿ ದ್ವಾರಪಾಲನು ಇನ್ನೊಂದು ರೀತಿಯಲ್ಲಿ ನಿರೂಪಿತನಾಗಿದ್ದಾನೆ. **(ಚಿತ್ರ ೬೯)** ದೇಗುಲದ ಪ್ರವೇಶದ್ವಾರದ ಎಡಬಲಗಳಲ್ಲಿ ಜೋಡಿಯಾಗಿ ದ್ವಾರಪಾಲರು ಕಾಣಿಸಿಕೊಳ್ಳುವುದು ವಾಡಿಕೆ. ಇಲ್ಲಿ ಒಬ್ಬ ದ್ವಾರಪಾಲನನ್ನು ಮಾತ್ರ ಕೆತ್ತನೆ ಮಾಡಿರುವುದು ಅಪವಾದವಾಗಿದೆ. ಶಿಲ್ಪಶಾಸ್ತ್ರಗ್ರಂಥಗಳ ರಚನೆಯ ಪೂರ್ವದಲ್ಲಿ



**ಚಿತ್ರ ೬೯. ದ್ವಾರಪಾಲಕ, ಶೈವ ಗುಹೆ, ಬಾದಾಮಿ**

ಕಾಣಿಸಿಕೊಂಡ ಶಿಲ್ಪಗಳಿವು ಎಂಬುದನ್ನು ಗಮನಿಸಬಹುದು. ದ್ವಿಭುಜಿಯಾದ ಈತನು ಕೈಯಲ್ಲಿ ಉದ್ದಾದ ತ್ರಿಶೂಲವನ್ನು ಓರೆಯಾಗಿ ದಂಡ ಹಿಡಿಯುವ ರೀತಿಯಲ್ಲಿ ಹಿಡಿದುಕೊಂಡಿದ್ದಾನೆ. ಈ ಕಿರೀಟಧಾರಿಯು ವಸ್ತ್ರಾಭರಣ ಭೂಷಿತನಾಗಿದ್ದಾನೆ. ದ್ವಾರಪಾಲ ಶಿಲ್ಪಗಳಿಗೆ ಪ್ರಭಾವಳಿ ಇರುವುದಿಲ್ಲ. ಆದರೆ ಇಲ್ಲಿ ಪ್ರಭಾವಳಿಯಂತೆ ತೋರುವ ಶಿರಸ್ಚಕ್ರವನ್ನು ರೂವಾರಿಯು ರೂಪಿಸಿ ಜಾಣ್ಮೆ ತೋರಿದ್ದಾನೆ.



ಚಿತ್ರ ೨೦. ದ್ವಾರಪಾಲ ೨ನೇ ಗುಹೆ

ಪಕ್ಕದಲ್ಲಿರುವ ವಿಷ್ಣುಗುಹೆಯಲ್ಲಿ ದ್ವಾರಪಾಲರು ಇನ್ನೊಂದು ರೀತಿಯಲ್ಲಿ ಪ್ರಕಟಗೊಂಡಿದ್ದಾರೆ. ದಂಡ, ಗದೆ ಮೊದಲಾದ ಆಯುಧಗಳಿಲ್ಲದೆ ಇರುವುದೊಂದು ವಿಶೇಷವಾದರೆ, ಶಾಂತಿಯ ಪ್ರತೀಕವಾಗಿರುವ ಪುಷ್ಪವೊಂದನ್ನು ಕೈಯಲ್ಲಿ ಹಿಡಿದುಕೊಂಡು ಪ್ರಶಾಂತ ಮುಖಭಾವದೊಂದಿಗೆ ಕಾಣಿಸಿಕೊಂಡಿರುವುದು ಇನ್ನೊಂದು ಭಿನ್ನತೆಯಾಗಿದೆ. **(ಚಿತ್ರ ೨೦)** ಸಾಮಾನ್ಯವಾಗಿ ದ್ವಾರಪಾಲರ ಮುಖದಲ್ಲಿ ಕಂಡುಬರುವ ರೌದ್ರ ಭಾವ ಇಲ್ಲಿಲ್ಲ. ಧ್ಯಾನ ನಿರತರಾಗಿರುವಂತೆ ತೋರುವ ಈ ಬಗೆಯ ದ್ವಾರಪಾಲ ಶಿಲ್ಪಗಳು ಅಜಂತೆಯ ಶಿಲ್ಪಶೈಲಿಯನ್ನು ಹೋಲುತ್ತಿದ್ದು ಇದು ಶಿಲ್ಪಕಲೆಯ ವಿಸರಣ ಪ್ರಕ್ರಿಯೆಯನ್ನು ಸೂಚಿಸುತ್ತದೆ. ಇಲ್ಲಿನ ವಿಷ್ಣು ದ್ವಾರಪಾಲರ ಪಕ್ಕದಲ್ಲಿ ಸ್ತ್ರೀ ಮೂರ್ತಿಯ ಕಂಡರಣೆ ಕೂಡ ಅಪರೂಪದ್ದು.

ಬಾದಾಮಿಯ ಮೊದಲ ಎರಡು ಗುಹಾಲಯಗಳಲ್ಲಿ ದ್ವಾರಪಾಲರು ಪ್ರವೇಶದ್ವಾರದಲ್ಲಿ ಮಾನವ ಸಹಜ ಗಾತ್ರದಲ್ಲಿ ಮೂರ್ತಗೊಂಡಿದ್ದರೆ ಮೂರನೆಯ ಗುಹಾಲಯದಲ್ಲಿ ಗರ್ಭಗೃಹದ ದ್ವಾರಶಾಖೆಗಳ ಕೆಳಗಿರುವ ಮಿಥುನ ಶಿಲ್ಪಗಳ ಕೆಳಗೆ ಸೋಪಾನದ ಎಡಬಲಗಳಲ್ಲಿ ಚಿಕ್ಕ ಗಾತ್ರದಲ್ಲಿ ಪ್ರಕಟವಾಗಿದ್ದಾರೆ. ಸೌಮ್ಯ ಮುಖಭಾವದ ಇವರು ಹೂವನ್ನು ಹಿಡಿದುಕೊಂಡು ಕಟ್ಯವಲಂಬಿತ ನಿಲುವಿನಲ್ಲಿದ್ದಾರೆ. ಹೀಗೆ ಈ ಪುಟ್ಟ ದ್ವಾರಪಾಲರು ಕಾಣಿಸಿಕೊಂಡ ವಾಸ್ತುಭಾಗವು ಅಪರೂಪದ ಜಾಗ. ಇವರು ಗರ್ಭಗೃಹದ ಹೊಸ್ತಿಲ ಮಟ್ಟಕ್ಕಿಂತ ಕೆಳಗೆ ಕೆತ್ತನೆಗೊಂಡಿದ್ದಾರೆ. ಇವರು ದೇವಾಲಯದ ಕಾವಲುಗಾರರಾಗಿರದೇ ಗರ್ಭಗೃಹದ ಕಾವಲುಗಾರರಾಗಿ ಶಿಲ್ಪಿತರು. ಮೊದಲಿನ ಎರಡು ದೇವಾಲಯಗಳಲ್ಲಿ ದೇವಾಲಯದ ಪ್ರವೇಶದ್ವಾರದ ಬಳಿ ಮಾನವಾಕೃತಿಯ ದ್ವಾರಪಾಲರನ್ನು ಗಮನಿಸಿದ್ದೇವೆ.

ಉತ್ತರ ಭಾರತದಲ್ಲಿನ ಬೌದ್ಧ ಮಂದಿರಗಳಲ್ಲಿ ಚಲುಕ್ಯ ಪೂರ್ವ ಕಾಲದ ದ್ವಾರಪಾಲರ ಶಿಲ್ಪಗಳನ್ನು ಕಾಣಬಹುದು. ಆ ಸಂಪ್ರದಾಯದನ್ವಯ ಐಹೊಳೆಯ ಬೌದ್ಧ ಗುಹೆಯಲ್ಲಿ ದ್ವಾರಪಾಲರು ಮೂಡಿ ಬಂದಿದ್ದಾರೆ. ಇದು ಭಾಗಶಃ ಗುಹೆಯೂ, ಭಾಗಶಃ ರಾಚನಿಕವೂ ಆಗಿರುವ ಎರಡಂತಸ್ತಿನ ಸ್ಮಾರಕ. ಅದರ ಕೆಳಗಿನ ಅಂತಸ್ತಿನ ದ್ವಾರ ಚೌಕಟ್ಟಿನಲ್ಲಿ ದ್ವಾರಪಾಲರಿದ್ದಾರೆ. ಗಾತ್ರದಲ್ಲಿ ಇವರು ಚಿಕ್ಕವರು. ಕೈಯಲ್ಲಿ ಕಮಲ ಪುಷ್ಪವನ್ನು ಹಿಡಿದಿದ್ದಾರೆ. ಇಲ್ಲಿನ ಮೀನಬಸದಿಯ ಗರ್ಭಗೃಹದ ಅಕ್ಕಪಕ್ಕದಲ್ಲಿಯೂ, ಪದ್ಮವನ್ನು ಹಿಡಿದು ಕಟ್ಯವಲಂಬಿತ ನಿಲುವಿನಲ್ಲಿ ದ್ವಾರಪಾಲರಿದ್ದಾರೆ. ಈ ಬಗೆಯ ಶಿಲ್ಪ ಸಂಯೋಜನೆಯನ್ನು ಬಾದಾಮಿಯ ಜಿನಾಲಯದ ದ್ವಾರಶಾಖೆಯಲ್ಲಿಯೂ ಕಾಣಬಹುದು. ಇವರು ಕಿರೀಟಧಾರಿಗಳು, ದ್ವಿಭುಜಿಗಳು. ಚಲುಕ್ಯರ ಶಿಲ್ಪಕಲೆಯ ಮೊದಲ ಹಂತದಲ್ಲಿ ಕಂಡುಬರುವ ದ್ವಾರಪಾಲರು ಹೀಗೆ ದ್ವಿಭುಜಿಗಳಾಗಿರುವುದು ಗಮನಾರ್ಹ ಶಿಲ್ಪಲಕ್ಷಣವಾಗಿದೆ. ಬೌದ್ಧ, ಶೈವ, ವೈಷ್ಣವ ಮತ್ತು ಜಿನ ಮಂದಿರಗಳ ಅಲಂಕರಣೆಯಲ್ಲಿ ದ್ವಾರಪಾಲ ಶಿಲ್ಪಗಳು ತಮ್ಮದೇ ಆದ ವೈಶಿಷ್ಟ್ಯವನ್ನು ಹೊಂದಿರುವುದು ಸ್ಪಷ್ಟವಾದರೂ ಅವೆಲ್ಲವುಗಳ ಶಿಲ್ಪ ಲಕ್ಷಣಗಳಲ್ಲಿ ಸೂತ್ರಕ್ಕೆ ಒಳಪಟ್ಟ ನಿರ್ದಿಷ್ಟವಾದ ಏಕರೂಪತೆ ಇಲ್ಲ. ದ್ವಾರಪಾಲರ ಶಿಲ್ಪ ಲಕ್ಷಣಗಳು

ಹರಳುಗೊಂಡಿರುವ ಪೂರ್ವದಲ್ಲಿ ನಿರ್ಮಾಣವಾದ ಕಲಾಕೃತಿಗಳಿವು ಎಂಬುದನ್ನು ನಾವು ಮರೆಯುವಂತಿಲ್ಲ .

**(ಆ) ರಾಚನಿಕ ಮಂದಿರಗಳ ದ್ವಾರಪಾಲರು**

ಚಲುಕ್ಯರ ರಾಚನಿಕ ಮಂದಿರಗಳಲ್ಲಿ ದ್ವಾರಪಾಲ ಶಿಲ್ಪಗಳು ಮಂಟಪದ ದ್ವಾರಬಂಧ, (ಇಲ್ಲವೆ ಪಕ್ಕದ ಅರೆಗಂಬ) ಮತ್ತು ಗರ್ಭಗೃಹದ ಬಾಗಿಲುವಾಡವನ್ನು ಅಲಂಕರಿಸಿವೆ. ಈ ಶಿಲ್ಪಗಳಲ್ಲಿಯೂ ರೂವಾರಿಗಳು ವೈವಿಧ್ಯವನ್ನು ಮೆರೆದಿದ್ದಾರೆ. ಆ ಮೂಲಕ ದ್ವಾರಪಾಲ ಶಿಲ್ಪಪ್ರಕಾರವನ್ನು ಬೆಳೆಸಿ ಶ್ರೀಮಂತಗೊಳಿಸಿದ್ದಾರೆ. ಸರಳ, ಪುಟ್ಟ ಶಿಲ್ಪಗಳನ್ನು ಮತ್ತು ಬೃಹದಾಕಾರದ ದ್ವಾರಪಾಲ ಪ್ರತಿಮೆಗಳನ್ನು ಸೃಷ್ಟಿಸಿ ದೇಗುಲಗಳ ಚೆಲುವನ್ನು ಹೆಚ್ಚಿಸಿದ್ದಾರೆ. ಈ ಶಿಲ್ಪ ಪ್ರಕಾರದಲ್ಲಿ ವಿಕಸನ ಪ್ರಕ್ರಿಯೆ ಸಾಗಿರುವುದನ್ನು ಇಲ್ಲಿ ಗುರುತಿಸಬಹುದು. ಪ್ರಬಂಧದ ವ್ಯಾಪ್ತಿಯನ್ನು ಅನುಲಕ್ಷಿಸಿ ಪ್ರಾತಿನಿಧಿಕವಾಗಿ ಶಿಲ್ಪಗಳನ್ನು ಇಲ್ಲಿ ಚರ್ಚೆಗೆ ಒಳಪಡಿಸಲಾಗಿದೆ.



**ಚಿತ್ರ ೨೧. ದ್ವಾರಪಾಲ, ಮಾಲಗಿತ್ತಿ ಶಿವಾಲಯ**

ಐಹೊಳೆಯ ಗೌಡರ ಗುಡಿ, ಮಹಾಕೂಟದ ಬಾಣಂತಿಗುಡಿ ಮೊದಲಾದ ಪ್ರಾರಂಭದ ವಾಸ್ತು ನಿರ್ಮಿತಿಗಳಲ್ಲಿ ದ್ವಾರಪಾಲರ ಶಿಲ್ಪಗಳು ಗೋಚರಿಸುವುದಿಲ್ಲ. ಈ ಶಿಲ್ಪ ಪ್ರಕಾರವನ್ನು ವಾಸ್ತು ಅಲಂಕರಣೆಗಾಗಿ ಬಳಸಿರುವುದನ್ನು ಬಾದಾಮಿಯ ಕೆಳಗಿನ ಶಿವಾಲಯದಲ್ಲಿ ಕಾಣುತ್ತೇವೆ. ಅಲ್ಲಿನ ಬಾಗಿಲುವಾಡದ ದ್ವಾರಶಾಖೆಯ ಎರಡೂ ಬದಿಗೆ ಕೆಳಭಾಗದಲ್ಲಿ ಪುಟ್ಟ ಗಣಶಿಲ್ಪಗಳಿವೆ. ಈ ಗುಡಿಯು ಗಣಪತಿಯ ಮಂದಿರವಾಗಿರಬಹುದೆಂಬ ವಾದಕ್ಕೆ ಪುಷ್ಟಿಕೊಡುತ್ತವೆ. ಇವುಗಳ ಕೇಶರಾಶಿ ವಿಶಿಷ್ಟ ರೀತಿಯದಾಗಿದೆ.

ಅಧ್ಯಯನ ಯೋಗ್ಯವಾದ ದ್ವಾರಪಾಲ ಶಿಲ್ಪಗಳು ಮಾಲಗಿತ್ತಿ ಶಿವಾಲಯದ ಹೊರಗೋಡೆಯ ದೇವಕೋಷ್ಠಗಳಲ್ಲಿವೆ. ಈ ಮಂದಿರವು ಮೂಲತಃ ಸೂರ್ಯದೇವಾಲಯ ವಾಗಿದ್ದು ಈ ದೇವಕೋಷ್ಠದ ದ್ವಾರಪಾಲರು ದಂಡ ಮತ್ತು ಪಿಂಗಲ ಎಂದು ಗುರುತಿಸಲಾಗಿದೆ.[೧೭] ಕಜಿನ್ಸರು ಇವನ್ನು ರಾಜವ್ಯಕ್ತಿಗಳ ಮೂರ್ತಿಗಳೆಂದು ತಪ್ಪಾಗಿ ಗ್ರಹಿಸಿದ್ದರು.[೧೮] ಸೂರ್ಯನ ಅಕ್ಕ ಪಕ್ಕದಲ್ಲಿ ಖಡ್ಗ ಧಾರಿಗಳಾದ ದಂಡ ಮತ್ತು ಪಿಂಗಲ ಎಂಬ ದ್ವಾರಪಾಲರನ್ನು ರೂಪಿಸಬೇಕೆಂದು ಮತ್ಸ್ಯಪುರಾಣವು ಸೂಚಿಸಿದೆ[೧೯] ದಕ್ಷಿಣ ಬದಿಯ ದೇವಕೋಷ್ಠದ ದ್ವಾರಪಾಲನು ಕೈಗಳಲ್ಲಿ ಖಡ್ಗ ಮತ್ತು ಗುರಾಣಿಯನ್ನು ಹಿಡಿದಿರುವನು. ಈತ ದಂಡ ಎಂಬ ದ್ವಾರಪಾಲ. **(ಚಿತ್ರ ೨೧)** ಉತ್ತರ ಬದಿಯ ದೇವಕೋಷ್ಠದಲ್ಲಿ ಪಿಂಗಲನನ್ನು ರೂಪಿಸಲಾಗಿದೆ. ಮೂರ್ತಿ ಬಹಳಷ್ಟು ಹಾನಿಗೊಳಗಾಗಿದೆ. ಇವರೀರ್ವರನ್ನು ಮಧ್ಯಮ ಗಾತ್ರದಲ್ಲಿ ರೂಪಿಸಲಾಗಿದೆ. ಶಿಲ್ಪ ಸಂಸ್ಕರಣ ದೃಷ್ಟಿಯಿಂದ ಇವು ಭಿನ್ನವಾಗಿದ್ದು ಇವನ್ನು ಕಟೆದ ರೂವಾರಿಗಳು ಪ್ರಾಯಶಃ ಉತ್ತರದ ಭಾಗದಿಂದ ಬಂದವರಾಗಿರಬಹುದು. ಶಿಲ್ಪ ಲಕ್ಷಣಗಳು ಅಜಂತೆಯ ಶಿಲ್ಪಗಳನ್ನು ನೆನಪಿಸುವಂತಿವೆ.

ಸಂಡೂರಿನ ಪಾರ್ವತಿ ಗುಡಿಯ ದ್ವಾರಪಾಲ ಮೂರ್ತಿಗಳು ಕುತೂಹಲಕಾರಿ

[೧೭] Shrinivas Padigar, 'Some Sculptures of Malagitti Sivalaya and their identification' The Journal of Karnataka University : Social Sciences, Vol. XIII, 1977, P. 63

[೧೮] Cousens, H., The Chalukyan Architecture of the Kanarese Districts (1996) PP. 53-54

[೧೯] ಪಂಢರೀನಾಥಾಚಾರ್ಯ ಗಲಗಲಿ (ಸಂ) ಮತ್ಸ್ಯಪುರಾಣ, ಭಾಗ ೨, ಪು. ೯೭೩



**ಚಿತ್ರ ೭೨. ದ್ವಾರಪಾಲರು ಪಾರ್ವತಿ ಗುಡಿ, ಸಂಡೂರು**

ಯಾಗಿವೆ. (**ಚಿತ್ರ ೭೨**) ಮಂದಿರದ ಹೊರಗೋಡೆಯ ದೇವಕೋಷ್ಠಗಳಲ್ಲಿ ದ್ವಾರಪಾಲರು ಕೆತ್ತನೆಗೊಂಡಿದ್ದಾರೆ. ದಕ್ಷಿಣ ಕೋಷ್ಠದಲ್ಲಿ ಕುಳ್ಳಗಿನ ಸ್ಥೂಲದೇಹದ ಮುದಿಯನೊಬ್ಬ ಬೊಕ್ಕ ತಲೆಯವನಾಗಿದ್ದು, ದಪ್ಪನಾದ ಬಡಿಗೆಯ ಮೇಲೆ ತನ್ನ ಭಾರ ಹೇರಿದಂತೆ ನಿಂತಿದ್ದಾನೆ. ಹಿಂಭಾಗದ ಕೂದಲು ಹೆಗಲವರೆಗೆ ಇಳಿಬಿದ್ದಿವೆ. ಆತನು ಅರ್ಧ ಅಧೋವಸ್ತ್ರ ಮತ್ತು ಪಾದರಕ್ಷೆ ಧರಿಸಿದ್ದಾನೆ. ಇನ್ನೊಬ್ಬ ದ್ವಾರಪಾಲನು ಪೂರ್ಣ ಅಧೋವಸ್ತ್ರ ಹಾಗೂ ತಲೆಯ ಮೇರೆ ಟೋಪಿ ಧರಿಸಿರುವನು. ಇಬ್ಬರೂ ಮೀಸೆ ಹೊತ್ತ ಗಂಡಸರು !

ಇಂತಹ ಬೊಕ್ಕ ತಲೆಯ ದ್ವಾರಪಾಲನನ್ನು ಮಹಾಕೂಟದ ಮಲ್ಲಿಕಾರ್ಜುನ ದೇವಾಲಯದ ಮುಖಮಂಟಪದ ಕಂಬದ ಮೇಲೆಯೂ ಕಾಣುತ್ತೇವೆ. ಕಾವಲುಗಾರನಂತೆ ದಂಡವನ್ನು ಹಿಡಿದಿರುವ ರೀತಿ ಮತ್ತು ಶಿಲ್ಪದ ಸ್ಥಾನವನ್ನಾಧರಿಸಿ ಅವನನ್ನು ದ್ವಾರಪಾಲನೆಂದು ತಿಳಿಯಬಹುದು. ಆದರೆ, ಐಹೊಳೆಯ ರಾವಲಫಡಿಯ ಹೊರಭಾಗದ ಯವನ ದ್ವಾರಪಾಲಕರಂತೆ ಈ ಮೂರ್ತಿಗಳನ್ನು ಕೂಡ ಅರೆ ದೈವ ಶಿಲ್ಪಗಳೆಂದು ಹೇಳಲಾಗದು. ಇವು ಮಾನವ ಶಿಲ್ಪಗಳು.

ರಾವಲಫಡಿಯ ಒಳಗೆ ಅರೆದೈವಿಕ ದ್ವಾರಪಾಲರು ಗೋಚರಿಸುವಂತೆ ಮಹಾಕೂಟದ ಈ ದೇಗುಲದ ಪೂರ್ವದ ಗೋಡೆಯ ದೇವಕೋಷ್ಠದಲ್ಲಿ ದ್ವಾರಪಾಲರಿದ್ದಾರೆ. ಹಾಗೆಯೇ ಇದರ ಸಭಾಮಂಟಪ ಮತ್ತು ಗರ್ಭಗೃಹದ ದ್ವಾರಶಾಖೆಗಳ ಕೆಳಗೆ ಗದೆ ಮತ್ತು ಪದ್ಮ ಪುಷ್ಪ ಹಿಡಿದ ದ್ವಾರಪಾಲರಿದ್ದಾರೆ.

ಕ್ರಿ. ಶ. ೬೯೯ರಲ್ಲಿ ನಿರ್ಮಿತವಾದ ಬಾದಾಮಿಯ ಜಂಬುಲಿಂಗ ದೇವಾಲಯವು ದಕ್ಷಿಣ ಭಾರತದ ಪ್ರಪ್ರಥಮ ತ್ರಿಕೂಟಾಲಯ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಬ್ರಹ್ಮ ವಿಷ್ಣು ಮಹೇಶ್ವರರಿಗಾಗಿ ಮೂರು ಪ್ರತ್ಯೇಕ ಗರ್ಭಗೃಹಗಳಿದ್ದು ಅವುಗಳ ಬಾಗಿಲುವಾಡಗಳು ದ್ವಾರಪಾಲರ ಶಿಲ್ಪಗಳಿಂದ ಅಲಂಕೃತವಾಗಿವೆ. ಸುಮಾರು ಎರಡು ಅಡಿ ಎತ್ತರದ ಶಿಲ್ಪಗಳಿವು. ಸದ್ಯ ದೇವಾಲಯವು ರಕ್ಷಿತ ಸ್ಮಾರಕವಾಗಿರದೆ ಸ್ಥಳೀಯರು ಮಾಡಿದ ಸುಣ್ಣದ ಲೇಪನಗಳಿಂದಾಗಿ ಸೌಂದರ್ಯ ಹೀನವಾಗಿದೆ. ಪ್ರಧಾನ ಗರ್ಭಗೃಹ ಈಶ್ವರನದು. ಇದರ ಬಾಗಿಲುವಾಡದ ಕೆಳಗೆ ರೂಪಿಸಲಾದ ದ್ವಾರಪಾಲರು ಬಹುಮಟ್ಟಿಗೆ ವಿರೂಪಗೊಂಡಿದ್ದಾರೆ. ಬ್ರಹ್ಮನ ಗರ್ಭಗೃಹದ ದ್ವಾರಪಾಲರಿಬ್ಬರೂ ಒಂದು ಕೈಯಲ್ಲಿ ಶೂಲವನ್ನು ಇನ್ನೊಂದರಲ್ಲಿ

ಪದ್ಮ ಹಿಡಿದಿರುವಂತೆ ನಿರೂಪಿತರಾಗಿದ್ದಾರೆ. ಆದರೆ ಇಲ್ಲಿನ ವಿಷ್ಣು ಗರ್ಭಗೃಹದ ದ್ವಾರಪಾಲರು ಹೆಚ್ಚಿನ ಗಮನ ಸೆಳೆಯುತ್ತಾರೆ. ಎಡಬದಿಯ (ಪಶ್ಚಿಮ) ದ್ವಾರಪಾಲನು ನೆಲದ ಮೇಲೆ ಇಡಲಾದ ಗದೆಯ ಮೇಲೆ ಬಲ ಮೊಳಕೈಯನ್ನಿಟ್ಟು ಅದರ ಮೇಲೆ ದೇಹದ ಭಾರವನ್ನು ಹಾಕಿ ನಿಂತಂತೆ ಆಕರ್ಷಕ ಭಂಗಿಯಲ್ಲಿ ನಿಂತಿದ್ದಾನೆ. ಎಡಗೈಯಲ್ಲಿ ಪದ್ಮವೊಂದನ್ನು ಹಿಡಿದಿದ್ದಾನೆ. ಇದೇ ಬಗೆಯ ರೂಪ ವಿನ್ಯಾಸ ಹೊಂದಿರುವ ದ್ವಾರಪಾಲನು ಇನ್ನೊಂದು ಬದಿಯಲ್ಲಿದ್ದಾನೆ. ಈತನ ಕೇಶವಿನ್ಯಾಸವು ವಿಲಕ್ಷಣವಾಗಿ ತೋರುತ್ತದೆ.

ವಿನಯಾದಿತ್ಯನ ಅರಸಿಗಾಗಿ ಆಲಂಪುರದಲ್ಲಿ ಸ್ವರ್ಗಬ್ರಹ್ಮ ದೇವಾಲಯವು ನಿರ್ಮಾಣಗೊಂಡಿತು. ಅದರ ಮಂಟಪದ ಪ್ರವೇಶ ದ್ವಾರದಲ್ಲಿ ಮಾನವಾಕೃತಿಯ ದ್ವಾರಪಾಲರನ್ನು ನಿರೂಪಿಸಲಾಗಿದೆ. ಅವರು ತ್ರಿನೇತ್ರರು, ಚತುರ್ಭುಜರು, ಗದೆಯನ್ನು ಆಶ್ರಯಿಸಿ ನಿಂತುಕೊಂಡಿದ್ದಾರೆ. ವಸ್ತ್ರಾಭರಣಗಳಿಂದ ಭೂಷಿತರು. ಗರ್ಭಗೃಹದ ದ್ವಾರ ಚೌಕಟ್ಟಿನ ಬದಿಗಳಲ್ಲಿ ಅರೆಗಂಬಗಳ ಮೇಲೆ ಬೃಹದಾಕಾರದ ದ್ವಾರಪಾಲರು ಶಿಲ್ಪಿತರಾಗಿದ್ದಾರೆ. ಈ ಬಗೆಯ ಶಿಲ್ಪ ಪ್ರಕಾರವು ಸಂಪ್ರದಾಯವೆಂಬಂತೆ ಮುಂದುವರೆಯಿತು.

ಆಲಂಪುರದ ಪದ್ಮಬ್ರಹ್ಮ ದೇವಾಲಯದ ಪ್ರವೇಶದ್ವಾರದಲ್ಲಿಯೂ ಇಂತಹ ದ್ವಾರಪಾಲರಿದ್ದಾರೆ. ಸುಮಾರು ಐದೂವರೆ ಅಡಿ ಎತ್ತರವಾದ ಮಾನವ ಸಹಜ ಗಾತ್ರದಲ್ಲಿ ದ್ವಾರಪಾಲರು ಚತುರ್ಭುಜರಾಗಿ ಮೂರ್ತಗೊಂಡಿದ್ದಾರೆ. ಪಕ್ಕದ ಗದೆಯನ್ನು ಸರ್ಪ ಸುತ್ತಿಕೊಂಡಿದೆ. ದ್ವಾರಪಾಲರನ್ನು ಕತ್ತರಿಗಾಲು ಹಾಕಿದಂತೆ ತೋರಿಸಲಾಗಿದೆ. ಅವರಿಬ್ಬರೂ ಕನ್ನಡಿಯಲ್ಲಿಯ ಪ್ರತಿಬಿಂಬವೆಂಬಂತೆ ದ್ವಿಪಾರ್ಶ್ವದ ಸಮತೆಯನ್ನು ಪ್ರದರ್ಶಿಸುತ್ತಿದ್ದಾರೆ. ಇವು ರೂವಾರಿಗಳ ಕೌಶಲ್ಯಕ್ಕೆ ಸಾಕ್ಷಿಯಾಗಿವೆ.

ಕಲಾತ್ಮಕತೆಯ ದೃಷ್ಟಿಯಿಂದ ಗಮನಿಸುವುದಾದರೆ ಐಹೊಳೆಯ ಹುಚ್ಚಪ್ಪಯ್ಯ ದೇವಾಲಯದ ದ್ವಾರಪಾಲನನ್ನು ಮರೆಯಲಾಗದು. ಸಭಾಮಂಟಪದ ದ್ವಾರಬಂಧದ ಎಡಬದಿಯ ಅರ್ಧಗಂಬದ ಮೇಲೆ ಮಾನವ ಸಹಜ ಗಾತ್ರದ ಮುಕ್ಕಣ್ಣ ದ್ವಾರಪಾಲನ ವಿಗ್ರಹವಿದೆ. ಆತನ ಬಲಗಾಲು ಗದೆಯನ್ನು ಸುತ್ತುವರೆದಿದೆ. ಇವನು ಚರ್ತುಭುಜನು. ಸರ್ಪ ಮತ್ತು ಪರಶುಗಳನ್ನು ಹಿಡಿದುಕೊಂಡಿದ್ದಾನೆ. ಉಳಿದೆರಡು ಕೈಗಳು ಕರ್ತರಿಹಸ್ತ ಮುದ್ರೆಯಲ್ಲಿವೆ. ಈತನು ಕಿರೀಟಧಾರಿ ಮತ್ತು ಆಭರಣ ಭೂಷಿತನು. ಶಿಲ್ಪವು ಅತ್ಯಂತ ನಯಗಾರಿಕೆಯಿಂದ ಕೂಡಿದ್ದು ಮನಮೋಹಕವಾಗಿದೆ. ಸಾಮಾನ್ಯವಾಗಿ ದ್ವಾರಪಾಲ ಶಿಲ್ಪಗಳಿಗೆ ಕೊರಳಹಾರದ ಅಲಂಕಾರವಿರುವದಿಲ್ಲ. ಈ ದ್ವಾರಪಾಲನ ಕೊರಳಲ್ಲಿ ಪುಷ್ಪಮಾಲೆ ಇರುವುದೊಂದು ವಿಶೇಷ ಸಂಗತಿ. ಬಲಬದಿಯ ಅರ್ಧಗಂಬದ ಮೇಲಿನ ದ್ವಾರಪಾಲನೂ ಹೀಗೆಯೇ ನಿರೂಪಿತನಾಗಿದ್ದಾನೆ. ಈ ದೇಗುಲದ ಗರ್ಭಗುಡಿಯ ದ್ವಾರಪಾಲರೂ ಕೂಡ ತ್ರಿನೇತ್ರರು, ಚತುರ್ಭುಜರು. ತ್ರಿಶೂಲ, ಸರ್ಪಗಳನ್ನು ಹಿಡಿದುಕೊಂಡು ಕಟ್ಯವಲಂಬಿತ ನಿಲುವಿನಲ್ಲಿದ್ದಾರೆ. ಇವರಿಗೆ ಪ್ರಭಾವಳಿಯ ಅಲಂಕಾರವೊಂದು ಸೇರ್ಪಡೆಯಾಗಿದೆ. ಸಾಮಾನ್ಯವಾಗಿ ದ್ವಾರಪಾಲ ಶಿಲ್ಪಗಳಿಗೆ ಪ್ರಭಾವಳಿ ಇರುವುದಿಲ್ಲ. ಕೊರಳಹಾರ ಹಾಗೂ ಪ್ರಭಾವಳಿಗಳ ಅಲಂಕಾರದಿಂದಾಗಿ ಈ ದ್ವಾರಪಾಲರ ದೈವತ್ವದ ಅಂಶ ಹೆಚ್ಚಿದೆ ಎನ್ನಬಹುದು. ಈ ಶಿಲ್ಪಗಳು ಭವ್ಯವೂ ಕಲಾತ್ಮಕವೂ ಆಗಿ ಗಮನ ಸೆಳೆಯುತ್ತವೆ.

ದ್ವಾರಪಾಲರನ್ನು ಪರಿವಾರ ದೇವತೆಗಳೆಂದು ಪರಿಗಣಿಸಲಾಗಿದೆ. ಶಿಲ್ಪಶಾಸ್ತ್ರ ಗ್ರಂಥಗಳು ಅವುಗಳ ಲಕ್ಷಣಾದಿಗಳನ್ನು ವಿವರಿಸುವುದರ ಜೊತೆಗೆ ಧ್ಯಾನಶ್ಲೋಕಗಳನ್ನು ನೀಡಿವೆ. ದ್ವಾರಪಾಲರು ಪ್ರಧಾನ ದೇವತೆಯ ಪ್ರತಿನಿಧಿಗಳಂತೆ ಕಾರ್ಯ ನಿರ್ವಹಿಸುತ್ತಾರೆ. ಅವರು ತಮ್ಮ ಪ್ರಭುವಿನ ಸಾಮರ್ಥ್ಯ ಪ್ರಭಾವಗಳನ್ನು ಪ್ರತಿಬಿಂಬಿಸುವವರಾಗಿದ್ದಾರೆ. ಶಾಸ್ತ್ರಗಳನ್ವಯ ಪ್ರಧಾನ ದೇವತೆಯ ಪೂಜೆ ಕೈಕೊಳ್ಳುವ ಮೊದಲು ದ್ವಾರಪಾಲರನ್ನು ಆಯಾ ಧ್ಯಾನ ಶ್ಲೋಕಗಳೊಂದಿಗೆ ಪೂಜಿಸುವುದು ಸಂಪ್ರದಾಯವಾಗಿದೆ.

ಚಲುಕ್ಯ ಶಿಲ್ಪಕಲೆಯಲ್ಲಿ ಉತ್ಕೃಷ್ಟವಾದ ದ್ವಾರಪಾಲರ ಮೂರ್ತಿಗಳು ಕಾಣಿಸಿಕೊಳ್ಳುವುದು ಪಟ್ಟದಕಲ್ಲಿನ ವಿಜಯೇಶ್ವರ (ಸಂಗಮೇಶ್ವರ), ಮಲ್ಲಿಕಾರ್ಜುನ, ವಿರೂಪಾಕ್ಷ ಹಾಗೂ ಪಾಪನಾಥ ದೇವಾಲಯಗಳಲ್ಲಿ. ವಿರೂಪಾಕ್ಷ ಮಂದಿರದ ದ್ವಾರಪಾಲರ ವಿಗ್ರಹಗಳು ಬೃಹದಾಕಾರ ದ್ದಾಗಿಯೂ, ಕಲಾತ್ಮಕವಾಗಿಯೂ ರೂಪಗೊಂಡು ಚಲುಕ್ಯರ ಕಾಲದ ಅಲಂಕಾರ ಶಿಲ್ಪಗಳಲ್ಲಿ ಶ್ರೇಷ್ಠ ಕಲಾಕೃತಿಗಳೆನಿಸಿವೆ. **(ಚಿತ್ರ ೭೩.ಅ.)**

ಪೂರ್ವ ಮುಖಮಂಟಪದ ಅರ್ಧಗಂಬದ ದ್ವಾರಪಾಲರಿಬ್ಬರೂ ಸಹಜ, ಸರಳವಾಗಿ ನಿರೂಪಿತರು. ಅವರು ದ್ವಿಭುಜಿಗಳು. ಒಂದು ಕೈ ಗದೆಯನ್ನು ಆಶ್ರಯಿಸಿದೆ. ಇನ್ನೊಂದು ಕಟ್ಯವಲಂಬಿತವಾಗಿದೆ. ಇಬ್ಬರೂ ಸಂಕೀರ್ಣ ಆಭರಣಗಳಿಂದ ಅಲಂಕೃತರು, ಕಿರೀಟಧಾರಿಗಳು.

ದಕ್ಷಿಣ ಮುಖಮಂಟಪದ ಬಾಗಿಲಿನ ಪಶ್ಚಿಮ ಬದಿಯ ಅರ್ಧಗಂಬದ ಮೇಲೆ ಕೆತ್ತನೆಗೊಂಡ ದ್ವಾರಪಾಲ ಶಿಲ್ಪವು ಚಲುಕ್ಯರ ಶಿಲ್ಪರಾಶಿಯಲ್ಲಿ ಎದ್ದು ಕಾಣುವಂತಹದು. ಅದೊಂದು ಅಸಾಧಾರಣ ಕಲಾನಿರ್ಮಿತಿ. ಕಂಬದ ಮೇಲೆ ಕೆತ್ತನೆಗೊಂಡ ಈ ಶಿಲ್ಪವು ದುಂಡು ಶಿಲ್ಪವೆನಿಸುವಂತೆ ಬಹು ಮಟ್ಟಿಗೆ ಕಂಬದಿಂದ ಪ್ರತ್ಯೇಕವಾಗಿರು ವಂತಹದು. ಮಾನವ ದೇಹದ ಸಹಜ ಗಾತ್ರದಲ್ಲಿ ಈ ದ್ವಾರಪಾಲನು ಕಂಬಕ್ಕೆ ಆನಿಸಿಕೊಂಡು ಸಜೀವವಾಗಿ ನಿಂತಿರುವಂತೆ ತೋರುತ್ತಾನೆ. ಈ ಮೂರ್ತಿಯನ್ನು ನಿರ್ಮಿಸಿದವನು ಬಲದೇವನೆಂಬ ಶಿಲ್ಪಿಯು. ಆತನೊಬ್ಬ ಮಹಾಶಿಲ್ಪಿ ಎಂಬುದನ್ನು ಈ ಕಲಾಕೃತಿ ಸಾಬೀತು ಪಡಿಸುತ್ತದೆ. **(ಚಿತ್ರ–೨೦)**



ಚಿತ್ರ ೭೩ ಅ. ದ್ವಾರಪಾಲ, ವಿರೂಪಾಕ್ಷ ಗುಡಿ ಮುಖಮಂಟಪ

ಮೂರ್ತಿಯ ಭುಜದ ಭಾಗವು ಮೂಲ ಕಂಬಕ್ಕೆ ಹೊಂದಿಕೊಂಡಿದ್ದು ಉಳಿದ ಭಾಗವೆಲ್ಲ ಸ್ವತಂತ್ರವಾಗಿ ಕಂಬದಿಂದ ವಿಗ್ರಹವು ಪ್ರತ್ಯೇಕವಾಗಿದೆ. ಆತನು ನಸು ಬಾಗಿ ನಿಂತಿದ್ದಾನೆ. ಅದು ಆತನ ಕಾರ್ಯ ತತ್ಪರತೆಯನ್ನು ಸೂಚಿಸುವಂತಿದೆ. ದ್ವಾರಪಾಲನು ತನ್ನ ಎಡಗಾಲಿನ ಮೇಲೆ ನಿಂತಿದ್ದಾನೆ. ಬಲಗಾಲನ್ನು ಕತ್ತರಿ ಹಾಕಿದ್ದಾನೆ. ಸರ್ಪ ಸುತ್ತಿಕೊಂಡ ಗದೆಯ ಮೇಲೆ ತನ್ನೆರಡು ಕೈಗಳ ಭಾರ ಹೇರಿದ್ದಾನೆ. ಆತನದು ಭಾವಪೂರ್ಣ ಗಂಭೀರ ಮುಖ. ಉಬ್ಬಿರುವ ಕಣ್ಣುಗಳ ಏರಿಸಿದ ಹುಬ್ಬುಗಳು ರೌದ್ರ ಭಾವವನ್ನು ಹೊರ ಹೊಮ್ಮಿಸುತ್ತವೆ. ಮುಖದಲ್ಲಿ ಜೀವಂತಿಕೆ ಮನೆ ಮಾಡಿಕೊಂಡಿದೆ. ಸುಂದರ ವಸ್ತ್ರಾಭರಣಗಳಿಂದ ಅಲಂಕೃತಗೊಂಡ ಈ ಭವ್ಯ ವಿಗ್ರಹವು ಅದನ್ನು ವೀಕ್ಷಿಸುವ ಕಲಾರಸಿಕರನ್ನು ಮಂತ್ರಮುಗ್ಧ–ಗೊಳಿಸುತ್ತದೆ.

ಈತನ ಪಕ್ಕದಲ್ಲಿರುವ ದ್ವಾರಪಾಲನ ಶಿಲ್ಪವು ಬಹುಪಾಲು ನಾಶಗೊಂಡಿರುವುದು ದುರ್ದೈವದ ಸಂಗತಿ. ಏಕೆಂದರೆ ಆ ಶಿಲ್ಪವೂ ಕೂಡ ಇದೇ ಗುಣಮಟ್ಟದ ಕಲಾ ಪ್ರೌಢಿಮೆಯಿಂದ ಕೂಡಿದ್ದಾಗಿರಬೇಕು.

ಉತ್ತರ ಮುಖಮಂಟಪದ ದ್ವಾರಪಾಲ ಮೂರ್ತಿಗಳು ಇದೇ ಶ್ರೇಣಿಯವೆನ್ನಬಹುದು. ಶಿಲ್ಪ ನಿರೂಪಣೆ, ರೂಪ ಸಂಸ್ಕರಣ ಇದೇ ಬಗೆಯದ್ದು. ಇಲ್ಲಿಯ ಶೈಲಿಯಂತೆ ಎಡಬದಿಯ ದ್ವಾರಪಾಲನು ನಸು ಚಾಚಿಕೊಂಡ ಕಣ್ಣುಗುಡ್ಡೆ ಹಣೆಗಣ್ಣುಗಳಿಂದಾಗಿ ಭೀಕರವಾಗಿ ತೋರುತ್ತಾನೆ. ಗದೆಯ ಮೇಲಿರಿಸಲಾದ ಆತನ ಕಾಲು ಈಗ ತುಂಡಾಗಿದೆ. ಈತನು ಚತುರ್ಭುಜನು, ಎರಡು ಕೈಗಳಿಂದ ಗದೆ ಹಿಡಿದುಕೊಂಡಿದ್ದಾನೆ. ಇನ್ನೊಂದರಲ್ಲಿ ಸರ್ಪವಿದೆ. ಮತ್ತೊಂದು ಕಟ್ಯವಲಂಬಿತ ವಾಗಿದೆ.



ಚಿತ್ರ ೭೩ ಅ. ದ್ವಾರಪಾಲ, ವಿರೂಪಾಕ್ಷ ಗುಡಿ ಗರ್ಭಗೃಹ

ಗರ್ಭಗೃಹದ ದ್ವಾರಬಂಧದ ಎಡಬಲದ ಅರ್ಧಗಂಬಗಳು ಇಂತಹದೇ ದ್ವಾರಪಾಲ ಮೂರ್ತಿಗಳಿಂದ ಅಂದಗೊಂಡಿವೆ. **(ಚಿತ್ರ ೭೩.ಆ.)** ಈ ದ್ವಾರಪಾಲರು ಧರಿಸಿದ ಆಭರಣಗಳ ಕೆತ್ತನೆಯಲ್ಲಿ ರೂವಾರಿಯ ಕೌಶಲ್ಯ ಅಭಿವ್ಯಕ್ತಗೊಂಡಿದೆ. ವಿಶೇಷತಃ ಕೀರ್ತಿಮುಖ ವಿನ್ಯಾಸವಿರುವ ಕೇಯೂರಗಳು ಚಿತ್ತಾಕರ್ಷಕವಾಗಿವೆ. ಕಲಾಪೂರ್ಣವಾಗಿವೆ. ಈ ರೀತಿಯ ಕೆತ್ತನೆಯನ್ನು ಹುಚ್ಚಪ್ಪಯ್ಯ ಗುಡಿಯಲ್ಲಿಯೂ ಕಾಣಬಹುದಾಗಿದೆ.

ಪಟ್ಟದಕಲ್ಲ ದೇವಾಲಯಗಳ ದ್ವಾರಪಾಲ ಶಿಲ್ಪಗಳು ತಮ್ಮದೇ ಆದ ಶೈಲಿಯನ್ನು ಪ್ರದರ್ಶಿಸುತ್ತವೆ. ಆದಾಗ್ಯೂ ಶಿಲ್ಪಗಳ ವಿವರಗಳಲ್ಲಿ ವಿವಿಧತೆ ವ್ಯಕ್ತವಾಗಿದೆ. ಈ ಶಿಲ್ಪಗಳಲ್ಲಿ ಅನುಕರಣಶೀಲತೆಯಿಲ್ಲ. ಪ್ರಯೋಗಶೀಲತೆ ಇದೆ. ಪಾಪನಾಥ ಗುಡಿಯ ಎರಡನೆಯ ಸಭಾಮಂಟಪದಲ್ಲಿ ಒಬ್ಬ ದ್ವಾರಪಾಲನು ತ್ರಿಶೂಲ (ಕೋಡು?) ಹೊಂದಿರುವಂತೆ, ಇನ್ನೊಬ್ಬನು ತನ್ನ ಜಡೆಯಲ್ಲಿ ಕಪಾಲ ಧರಿಸಿರುವಂತೆ ಚಿತ್ರಿತರಾಗಿದ್ದಾರೆ. ಈ ತೆರನಾದ ವೈವಿಧ್ಯದಿಂದಾಗಿ ಈ ಶಿಲ್ಪಗಳ ಸೊಗಸು ಹೆಚ್ಚಿದೆ. ಇದು ಚಲುಕ್ಯ ಶಿಲ್ಪಿಗಳ ಅಗ್ಗಳಿಕೆ.

## ೫. ನಿಧಿಶಿಲ್ಪಗಳು

ನಿಧಿ ದೇವತೆ ಕುಬೇರ. ಈತನು ಒಂಬತ್ತು ನಿಧಿಗಳ ಒಡೆಯ. ಪದ್ಮ, ಮಹಾಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ ಮತ್ತು ಖರ್ವ ಎಂದು ಆ ನಿಧಿಗಳಿಗೆ ಹೆಸರು. ಜೈನ ಪರಂಪರೆಯಲ್ಲೂ ನವನಿಧಿಯ ಕಲ್ಪನೆಯಿದ್ದು ಅಲ್ಲಿಯೂ ಪದ್ಮನಿಧಿ ಮತ್ತು ಶಂಖನಿಧಿಗಳಿವೆ. ಉಳಿದವು ಕಾಳ, ಮಹಾಕಾಳ, ನೈಸರ್ಪ, ಪಾಂಡುಕ, ಪಿಂಗಳ, ಮಾಣವರ ಮತ್ತು ಸರ್ವರತ್ನ ಎಂಬ ನಿಧಿಗಳು.

ಬ್ರಹ್ಮನು ಕುಬೇರನಿಗೆ ಶಂಖನಿಧಿ ಮತ್ತು ಪದ್ಮನಿಧಿ ಎಂಬ ಎರಡು ನಿಧಿಗಳನ್ನು ನೀಡಿದ ಬಗ್ಗೆ ಮಹಾಭಾರತದ ಸಭಾಪರ್ವದಲ್ಲಿ ಆಖ್ಯಾನವಿದೆ.[೨೦] ಯಕ್ಷನ ಅರಮನೆ ಬಾಗಿಲದ ಇಕ್ಕೆಲಗಳಲ್ಲಿ ಮಾನವರೂಪಿ ಶಂಖನಿಧಿ ಮತ್ತು ಪದ್ಮನಿಧಿಗಳ ವರ್ಣಚಿತ್ರಗಳಿರುವುದನ್ನು ಕಾಳಿದಾಸನು ತನ್ನ ಮೇಘದೂತದಲ್ಲಿ ಬಣ್ಣಿಸಿದ್ದಾನೆ[೨೧]. ಕುಬೇರನ ನವನಿಧಿಗಳಲ್ಲಿ ಪ್ರಧಾನ ನಿಧಿಗಳೆಂದರೆ ಶಂಖನಿಧಿ ಮತ್ತು ಪದ್ಮನಿಧಿ. ಇವರು ಶ್ರೇಯೋಭಿವೃದ್ಧಿ, ಐಶ್ವರ್ಯ, ಸಮೃದ್ಧಿ, ಸಂತಾನಫಲವನ್ನು ನೀಡುವವರೆಂಬ ಭಾವ ಜನಪದರದು.

ಶಂಖನಿಧಿ ಮತ್ತು ಪದ್ಮನಿಧಿಗಳು ಶಿಲ್ಪರೂಪದಲ್ಲಿ ಅಮರಾವತಿ ಹಾಗೂ ನಾಗಾರ್ಜುನಕೊಂಡಗಳಲ್ಲಿ ಕಂಡು ಬರುತ್ತವಾದರೂ ಬಾಗಿಲುವಾಡಗಳಲ್ಲಿ ಕಲಾ ಪರಂಪರೆಯಾಗಿ ಕಾಣಿಸಿಕೊಳ್ಳುವುದು ಚಲುಕ್ಯ ದೇವಾಲಯಗಳಲ್ಲಿಯೇ[೨೨]. ದ್ವಾರಬಂಧದ ಸೌಂದರ್ಯವನ್ನು ಹೆಚ್ಚಿಸಲೆಂದು ಮತ್ತು ಕಲ್ಯಾಣಕಾರಕರೆಂದು ಶಂಖನಿಧಿ ಮತ್ತು ಪದ್ಮನಿಧಿಗಳನ್ನು ಕುಬ್ಜ ಮಾನವ ರೂಪದಲ್ಲಿ ಕಂಡರಿಸಲಾಗಿದೆ. ಇವರು ದ್ವಿಭುಜರು. ಪುಟ್ಟ ಕೈಕಾಲುಗಳು, ದೊಡ್ಡದಾದ ಹೊಟ್ಟೆಯೊಂದಿಗೆ ಕುಳಿತ ಶ್ರೀಮಂತನಂತೆ ತೋರಿಸಲಾಗಿರುತ್ತದೆ. ಕೈಯಲ್ಲಿ ಶಂಖವನ್ನು ಹಿಡಿದವನು ಶಂಖನಿಧಿ. ಪದ್ಮವನ್ನು ಹಿಡಿದವನು ಪದ್ಮನಿಧಿ. ಶಂಖನಿಧಿಯ ಶಿಲ್ಪವನ್ನು ನಿರ್ದಿಷ್ಟವಾಗಿ ದ್ವಾರಬಂಧದ ಎಡ ಬದಿಯಲ್ಲಿಯೂ ಮತ್ತು ಪದ್ಮನಿಧಿಯನ್ನು ಬಲ ಬದಿಯಲ್ಲಿಯೂ ನಿರೂಪಿಸಲಾಗಿರುತ್ತದೆ.

ಚಲುಕ್ಯರ ಗುಹಾಲಯ ಮತ್ತು ರಾಚನಿಕ ಮಂದಿರಗಳಲ್ಲಿ ಕೂಡ ಶಂಖನಿಧಿ ಮತ್ತು ಪದ್ಮನಿಧಿ ಜೋಡಿ ಶಿಲ್ಪಗಳನ್ನು ಅಲಂಕಾರ ಶಿಲ್ಪಗಳಾಗಿ ಬಳಸಲಾಗಿದೆ. ದ್ವಾರ ಚೌಕಟ್ಟನ್ನು ಬಗೆಬಗೆಯ ಶಾಖೆಗಳಿಂದ ಸುಂದರಗೊಳಿಸುವುದರ ಜೊತೆಗೆ ಮಂಗಲಕರವಾದ ನಿಧಿ

[೨೦] Ramachandra Rao, S. K. op.cit. p. 880

[೨೧] Sivaramamurti, C., Sri Lakshmi in Indian Art and thought, New Delhi, (1982), P. 84

[೨೨] Sivaramamurti, C., Sri Lakshmi in Indian Art and thought, P. 82

ದೇವತೆಗಳನ್ನು ಕೆತ್ತನೆ ಮಾಡಲಾಗಿದೆ. ಹಾಗೆ ಮಾಡಿರುವಲ್ಲಿ ವೈವಿಧ್ಯವನ್ನು ಕಾಣುತ್ತೇವೆ. ಚಲುಕ್ಯರ ನಿಧಿಶಿಲ್ಪಗಳನ್ನು ಸಂಕ್ಷಿಪ್ತವಾಗಿ ಹೀಗೆ ಪರಿಶೀಲಿಸಬಹುದು.



ಚಿತ್ರ ೭೪. ಪದ್ಮನಿಧಿ, ರಾವಲ ಫಡಿ

ಚಲುಕ್ಯರ ಶಿಲ್ಪಕಲೆಯಲ್ಲಿ ಅತಿ ದೊಡ್ಡದಾದ ನಿಧಿಶಿಲ್ಪಗಳನ್ನು ನಾವು ಕಾಣುವುದು ಐಹೊಳೆಯ ರಾವಲಫಡಿಯ ಹೊರಗೋಡೆಯ ಮೇಲೆ. ಇವು ಪ್ರತ್ಯೇಕವಾದ ಮಾಡಗಳಲ್ಲಿ ಕೆತ್ತನೆಗೊಂಡಿದ್ದು ಅವುಗಳ ಮೇಲೆ ದ್ರಾವಿಡ ಶಿಖರದ ವಿನ್ಯಾಸ ಚೌಕಟ್ಟನ್ನು ರೂಪಿಸಲು ಪ್ರಯತ್ನಿಸಲಾಗಿದೆ. ಪದ್ಮನಿಧಿಯ ಹೆಗಲ ಮೇಲೆ ಕಿವಿಯ ಹತ್ತಿರ ಕಮಲ ಪುಷ್ಪವಿದೆ. ಅದರಿಂದ ಸಂಪತ್ತು ಹೊರ ಸೂಸುವ ರೀತಿಯಲ್ಲಿ ಆತನ ತಲೆಯ ಸುತ್ತ ಪ್ರಭಾವಳಿಯಂತೆ ತೋರುವಂತೆ ಅಲಂಕರಣ ಮಾಡಲಾಗಿದೆ. ಇದೇ ಬಗೆಯ ನಿರೂಪಣೆಯನ್ನು ಶಂಖನಿಧಿಯಲ್ಲೂ ಕಾಣಬಹುದು. ಆತನ ಬಲಗೈಯಲ್ಲಿ ಶಂಖವಿದೆ. ಅದರಿಂದ ಸಂಪತ್ತು ಹೊರ ಹೊಮ್ಮುವಂತೆ ಕಂಡರಣೆಯಿದೆ. ಈರ್ವರೂ ಲಂಬೋದರರಾಗಿ ಶಿಲ್ಪಿತರಾಗಿದ್ದಾರೆ. ಪದ್ಮನಿಧಿಯ ಹೊಟ್ಟೆ ಪಾರ್ಶ್ವನೋಟ ನೀಡುವಂತಹದು. ನೇರವಾಗಿ ಸೂರ್ಯ ಪ್ರಕಾಶ, ಗಾಳಿಗೆ ಒಗ್ಗಿಕೊಂಡ ಕಾರಣ ಇವೆರಡೂ ಶಿಲ್ಪಗಳು ಸವಕಳಿಗೊಂಡು ಸೌಂದರ್ಯವನ್ನು ಕಳೆದುಕೊಂಡಿವೆ. **(ಚಿತ್ರ. ೭೪)**

ಬಾದಾಮಿಯ ಶೈವಗುಹೆ ಹಾಗೂ ಚಿಕ್ಕ ವೈಷ್ಣವ ಗುಹೆಯಲ್ಲಿಯೂ ನಿಧಿ ಶಿಲ್ಪಗಳು ಅಲಂಕಾರ ಶಿಲ್ಪಗಳಾಗಿ ಮೂಡಿಬಂದಿವೆ. ಆದರೆ ಮಹಾವಿಷ್ಣುಗೃಹ ಮತ್ತು ಜಿನಾಲಯದಲ್ಲಿ ಇವುಗಳಿಲ್ಲ. ಬಾದಾಮಿಯ ಮೊದಲೆರಡು ಗುಹೆಗಳಲ್ಲಿ ಗರ್ಭಗೃಹದ ದ್ವಾರಬಂಧದ ಇಕ್ಕೆಲಗಳಲ್ಲಿ ಅರೆಗಂಬಗಳ ಮೇಲೆ ನಿಧಿಶಿಲ್ಪಗಳಿವೆ. ಶೈವಗುಹೆಯಲ್ಲಿ ಬೋದಿಗೆಗೆ ಹೊಂದಿಕೊಂಡಿರುವ ಆಯತಾಕಾರದ ಚೌಕಟ್ಟಿನಲ್ಲಿ ನಿಧಿ ದೇವತೆಗಳು ಯೋಗಪಟ್ಟದೊಂದಿಗೆ ಕುಳಿತಂತೆ ಕೆತ್ತನೆಗೊಂಡಿದ್ದಾರೆ. ವೈಷ್ಣವ ಗುಹೆಯಲ್ಲಿ ನಿಧಿಗಳನ್ನು ವರ್ತುಲ ವಿನ್ಯಾಸದಲ್ಲಿ ಅರ್ಧಪರ್ಯಂಕಾಸನದಲ್ಲಿ ಸಂಯೋಜಿಸ ಲಾಗಿದೆ. ಈ ಶಿಲ್ಪಗಳಲ್ಲಿ ಪದ್ಮ ಮತ್ತು ಶಂಖಗಳು ಹೊರ ಚಿಮ್ಮುವ ನಾಣ್ಯ, ಚಿನ್ನಾದಿಗಳು ಕಾರಂಜಿಯಂತೆ ತೋರುತ್ತವೆ ಮತ್ತು ಅರ್ಧವರ್ತುಲಾಕಾರವಾಗಿರುವ ಅವು ಪ್ರಭಾವಳಿಯಂತೆ ಕಾಣುತ್ತವೆ. ಶೈವ ಗುಹೆಯ ನಿಧಿಶಿಲ್ಪಗಳು ತೌಲನಿಕವಾಗಿ ಹೆಚ್ಚು ಕಲಾತ್ಮಕವಾಗಿವೆ. ಅವು ಪರಿಣತ ರೂವಾರಿಯ ನಿರ್ಮಿತಿಗಳು. **(ಚಿತ್ರ ೭೫ ಅ ; ಆ)**



ಚಿತ್ರ ೭೫ ಅ. ಶಂಕ ನಿಧಿ, ಶೈವ ಗುಹೆ



ಚಿತ್ರ ೭೫ ಆ. ಪದ್ಮ ನಿಧಿ, ೨ನೇ ಗುಹೆ



ಚಿತ್ರ ೨೬. ಆ. ಪದ್ಮನಿಧಿ, ಹುಚ್ಚಪ್ಪಯ್ಯ ಗುಡಿ



ಚಿತ್ರ ೨೬. ಅ. ಹುಚ್ಚಪ್ಪಯ್ಯ ಗುಡಿಯ ಪ್ರವೇಶ ದ್ವಾರದಲ್ಲಿ ನಿಧಿ ಶಿಲ್ಪಗಳು

ಇದೇ ರೀತಿಯಲ್ಲಿ ರಾಚನಿಕ ಮಂದಿರಗಳಲ್ಲಿಯೂ ನಿಧಿ ಶಿಲ್ಪಗಳನ್ನು ಅಲಂಕಾರಕ್ಕಾಗಿ ಅಳವಡಿಸಲಾಗಿದೆ. ಐಹೊಳೆಯ ಹುಚ್ಚಪ್ಪಯ್ಯ ಗುಡಿಯ ಪ್ರವೇಶದ್ವಾರದ ಎರಡೂ ಬದಿಗಳಲ್ಲಿಯ ಪದ್ಮನಿಧಿ, ಶಂಖನಿಧಿಗಳು ಗಮನಾರ್ಹವಾಗಿವೆ. ಸ್ಥೂಲಕಾಯದ ನಿಧಿಗಳನ್ನು ಅರ್ಧಪರ್ಯಂಕಾಸನದಲ್ಲಿರುವಂತೆ ತೋರಿಸಲಾಗಿದೆ. ಇವರು ಶಿರಸ್ಚಕ್ರವಿರುವ ಕಿರೀಟ, ಮುತ್ತಿನ ಯಜ್ಞೋಪವೀತ, ಕಂಠಾಭರಣ, ಕರ್ಣಾಭರಣಗಳಿಂದ ಆಭೂಷಿತರು. ಶಂಖವು ತುಂಡಾಗಿದೆ. ಮುಖ, ಕೈ, ಕಾಲುಗಳು ಹಾನಿಗೊಂಡಿವೆ. **(ಚಿತ್ರ ೭೬: ಅ, ಆ)**

ಬಾದಾಮಿಯ ಜಂಬುಲಿಂಗ ದೇವಾಲಯದ ಸಭಾಮಂಟಪದ ಪ್ರವೇಶದ್ವಾರದ ಅರ್ಧಕಂಬಗಳ ಕೆಳಭಾಗದಲ್ಲಿ ನಿಧಿ ಶಿಲ್ಪಗಳು ಕೆತ್ತನೆಗೊಂಡಿದೆ. ಹಾಗೆಯೆ ಪಟ್ಟದಕಲ್ಲಿನ ಶಿಖರದ ಶುಕನಾಸಿಯ ಕೆಳಗೆ ನಿಧಿಶಿಲ್ಪಗಳಿರುವುದು ಕೂಡ ಅಪರೂಪದ ಉದಾಹರಣೆ. ಸ್ಥಳದಾಯ್ಕೆ ಭಿನ್ನವಾದುದು. ಅದರಂತೆ ಐಹೊಳೆಯ ಮಲ್ಲಿಕಾರ್ಜುನ ಗುಡಿ ಗುಂಪಿನ ಪ್ರಧಾನ ಗುಡಿಯ ಕಂಬಗಳ ಫಲಕಗಳಲ್ಲಿ ನರಸಿಂಹ, ಶಿವ, ನರ್ತಕರ ಶಿಲ್ಪಗಳೊಂದಿಗೆ ಪದ್ಮನಿಧಿಯು ಕಂಡು ಬರುವುದು ಕೂಡ ಅಪರೂಪದ್ದು.

ಚಲುಕ್ಯರ ಉತ್ಕೃಷ್ಟ ನಿಧಿಶಿಲ್ಪಗಳನ್ನು ನಾವು ಕಾಣುವುದು ಪಟ್ಟದಕಲ್ಲಿನ ವಿರೂಪಾಕ್ಷದೇವಾಲಯದಲ್ಲಿ . ಈ ಮಂದಿರದ ಸಭಾಗೃಹದ ಪ್ರವೇಶದ್ವಾರದ ಬಳಿಯ ಒಳಗೋಡೆಗಳಲ್ಲಿನ ನಿಧಿಶಿಲ್ಪಗಳು ನಮ್ಮನ್ನು ಸೆರೆಹಿಡಿಯುತ್ತವೆ. ಇವು ತುಂಬ ಕಲಾತ್ಮಕವಾಗಿ ರಚಿತವಾದವುಗಳು. ರಾವಲಫಡಿಯ ನಿಧಿ ಶಿಲ್ಪಗಳಂತೆ ಇವರು ಪ್ರತ್ಯೇಕ ಮಾಡಗಳಲ್ಲಿ ಶಿಲ್ಪಿತರಾಗಿದ್ದಾರೆ. ಇಬ್ಬರು ಸ್ಥೂಲಕಾಯದವರು. ಕೈ ಕಾಲುಗಳ ಉಗುರುಗಳನ್ನು ಕೂಡ ಬಿಡಿಸಿರುವುದು ಶಿಲ್ಪಿಯ ಮನೋವಿಲಾಸವನ್ನು ಸೂಚಿಸುತ್ತದೆ. ಶಂಖನಿಧಿಯು ಎಡಗಾಲ ಹೆಬ್ಬೆರಳಿನಲ್ಲಿ ಉಂಗುರವನ್ನು ಧರಿಸಿದ್ದಾನೆ! ನಿಧಿಗಳೀರ್ವರೂ ಆಭರಣಗಳಿಂದ ಭೂಷಿತರಾಗಿದ್ದಾರೆ. ಪದ್ಮ ಮತ್ತು ಶಂಖಗಳಿಂದ ಹೊರ ಚಿಮ್ಮುವ ಸಂಪತ್ತಿನ ಧಾರೆ ಅರ್ಧವೃತ್ತಕಾರದಲ್ಲಿ ವಿನ್ಯಾಸಗೊಂಡಿದೆ. ದೇವಾಲಯವನ್ನು ಪ್ರವೇಶಿಸುವ ಭಕ್ತನಿಗೆ ಹೀಗೆ ಐಶ್ವರ್ಯ ಹರಿದು ಬರಲಿ ಎಂಬ ಶುಭ ಹಾರೈಕೆ ಈ ನಿಧಿಶಿಲ್ಪಗಳದ್ದು ! **(ಚಿತ್ರ ೭೭)**



ಚಿತ್ರ ೭೭. ಶಂಖ ನಿಧಿ, ವಿರೂಪಾಕ್ಷ ಗುಡಿ, ಪಟ್ಟದಕಲ್ಲ

## ೬. ನದೀಶಿಲ್ಪಗಳು

ಭಾರತೀಯ ಶಿಲ್ಪಕಲೆಯಲ್ಲಿ ಗಂಗಾ ಮತ್ತು ಯಮುನಾ ನದಿಗಳ ಮಾನವರೂಪದ ಶಿಲ್ಪಗಳು ವಿಶಿಷ್ಟ ಮನ್ನಣೆ ಪಡೆದಿವೆ. ಅವುಗಳಲ್ಲಿ ಗಂಗೆಗೆ ಹೆಚ್ಚಿನ ಪ್ರಾಧಾನ್ಯ. ಹಿಮಾಲಯದ ಪೆರ್ದೊರೆಯಾದ ಗಂಗೆಯು ಭಾರತೀಯರ ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಜೀವನದ ಮೇಲೆ ಅತ್ಯಂತ ಪ್ರಭಾವ ಬೀರಿದ ನದಿ. ಹಾಗಾಗಿ ಅದಕ್ಕೆ ಹೆಚ್ಚಿನ ಪಾವಿತ್ರ್ಯ ಲಭಿಸಿದೆ. ಅದನ್ನು ಸುರನದಿ ಎಂದೇ ಕರೆಯಲಾಗುತ್ತದೆ. ನದಿಗಳ ಪಾರಮ್ಯವನ್ನು ಬಣ್ಣಿಸುವ ಕಾವ್ಯಗಳು ಸೃಷ್ಟಿಗೊಂಡಿವೆ. ದೇವಾಲಯಗಳಲ್ಲಿ ನದೀ ದೇವತೆಗಳಿಗೆ ಹೆಚ್ಚಿನ ಸ್ಥಾನ ನೀಡಲಾಗಿದೆ.

ಮಹಾಕವಿ ಕಾಳಿದಾಸನು ತನ್ನ ಕಾವ್ಯದಲ್ಲಿ ನದೀ ದೇವತೆಗಳನ್ನು ಶಿವನ ಪರಿಚಾರಿಕೆಯರೆಂದು ಬಣ್ಣಿಸಿದ್ದಾನೆ. ಇದು ಒಂದು ಶಿಲ್ಪ ಸಂಪ್ರದಾಯವಾಗಿ ಇಂದಿಗೂ ಪ್ರಚಲಿತದಲ್ಲಿದೆ. ಗಂಗೆಯ ಪಾವಿತ್ರ್ಯವನ್ನು, ಪಾರಮ್ಯವನ್ನು ಸಾರುವ ಹಲವಾರು ಪುರಾಣ ಕತೆಗಳು ಹುಟ್ಟಿಕೊಂಡಿವೆ. ಪ್ರಾಚೀನ ಸಂಸ್ಕೃತ ಕವಿಗಳು ಗಂಗೆಯನ್ನು ಸ್ತುತಿಸುವ ಹಲವಾರು ಶ್ಲೋಕಗಳನ್ನು ರಚಿಸಿದ್ದಾರೆ. ೧೭ನೆಯ ಶತಮಾನದ ಜಗನ್ನಾಥ ಪಂಡಿತ ಕವಿಯು ಬರೆದ ಗಂಗಾ ಲಹರಿ ಶ್ಲೋಕಗಳನ್ನು ಈಗಲೂ ಗಂಗಾ ಸ್ನಾನದ ಸಮಯದಲ್ಲಿ ಪಠಿಸುವುದು ರೂಢಿಯಲ್ಲಿದೆ. ಶಿವಗಂಗೆಯಾಗಿ ಶೈವರಿಂದ, ವಿಷ್ಣುಪಾದಿಯಾಗಿ ವೈಷ್ಣವರಿಂದ ಪೂಜೆಗೊಳ್ಳುವ ನದಿ ಇವಳು. ಹಾಗೆಯೇ ಕೃಷ್ಣ ಭಕ್ತಿಪಂಥದ ಕವಿಗಳು ಯಮುನೆಯನ್ನು ಮಾತೆಯೆಂದು ಭಾವಿಸಿ ಅನೇಕ ಭಕ್ತಿ ಗೀತೆಗಳನ್ನು ರಚನೆ ಮಾಡಿದ್ದಾರೆ. ವಿಷ್ಣುಧರ್ಮೋತ್ತರ ಪುರಾಣದಲ್ಲಿ ವರುಣನ ಇಕ್ಕೆಲಗಳಲ್ಲಿ ಗಂಗೆ–ಯಮುನೆಯರ ಶಿಲ್ಪಗಳಿರಬೇಕೆಂದು ಆದೇಶಿಸಲಾಗಿದೆ.[೨೩]

ಉದಯಗಿರಿಯಲ್ಲಿ ಜೈನಗುಹೆಗಳ (೬,೧೯) ದ್ವಾರಬಂಧಗಳಲ್ಲಿ ಮಕರವಾಹನ ಹೊಂದಿರುವ ದೇವಿ ಪ್ರತಿಮೆಗಳಿವೆ. ಇವನ್ನು ಯಕ್ಷಿಯ ಶಿಲ್ಪಗಳೆಂದು ತಿಳಿಯಲಾಗಿದೆ. ಮೊದಲಬಾರಿಗೆ ಈ ನದೀ ದೇವತೆಗಳ ಶಿಲ್ಪಗಳು ಕಾಣಸಿಗುವುದು ಗುಪ್ತರ ಕಾಲದ ದೇವಾಲಯಗಳಲ್ಲಿ[೨೪]. ಅಹಿಚ್ಛತ್ರದ ದೇವಾಲಯದ ಪ್ರವೇಶ ದ್ವಾರದ ಇಕ್ಕೆಲಗಳಲ್ಲಿ ಸಹಜ ಮಾನವ ಗಾತ್ರದ ಗಂಗೆ, ಯಮುನೆಯರ ಮೃಣ್ಮಯ ಪ್ರತಿಮೆಗಳು (terracotta) ನಿರೂಪಿತವಾಗಿವೆ. ಇವು ನಾಲ್ಕನೆಯ ಶತಮಾನದವು. ಗಂಗೆಯು ಮಕರದ ಮೇಲೆಯೂ, ಯಮುನೆಯು ಕೂರ್ಮದ ಮೇಲೆಯೂ ನಿಂತಿರುವಂತೆ ರೂಪಿಸಲಾಗಿದೆ. ಐದನೆಯ ಶತಮಾನದ (ದೇವಗಡ) ದಶಾವತಾರ ಗುಡಿಯಲ್ಲಿ ದ್ವಾರಬಂಧದ ಮೇಲ್ಭಾಗದಲ್ಲಿ ನದೀದೇವತೆಗಳ ಕಂಡರಣೆಯಿದೆ. ಈ ನದೀ ಶಿಲ್ಪಗಳು ಮಂಗಲಕರವಾದವುಗಳು. ಇವು ಫಲವಂತಿಕೆ ಮತ್ತು ಸಮೃದ್ಧಿಯ ಕುರುಹಗಳೂ ಹೌದು. ಚಿತ್ತಾಕರ್ಷಕ ವಸ್ತ್ರಾಭರಣ ಹಾಗೂ ಮೈಮಾಟದಲ್ಲಿ ಬಿಂಬಿತವಾಗಿ ಈ ಮೂರ್ತಿಗಳು ಚೆಲುವಿನ ಆಗರವೆನಿಸಿವೆ. ಹೀಗೆ ಈ ಶಿಲ್ಪಗಳಲ್ಲಿ ಪಾವಿತ್ರ್ಯ, ದೈವಿಕತೆಗಳ ಜೊತೆಗೆ ಸೌಂದರ್ಯವು ಬೆಸೆದುಕೊಂಡಿದೆ. ಇವು ಪವಿತ್ರವಾದ ಅಲಂಕಾರ ಶಿಲ್ಪಗಳು. ಆದ್ದರಿಂದ ದೇವಾಲಯದಲ್ಲಿ ಇವುಗಳಿಗೆ ಹೆಚ್ಚಿನ ಮಹತ್ವವಿದೆ.

ಮೊದಮೊದಲು ದ್ವಾರಬಂಧದಲ್ಲಿ ಬೃಹದಾಕಾರವಾಗಿ ನಿರೂಪಿತವಾದ ಈ ಮೂರ್ತಿಗಳು ನಂತರದ ಕಾಲದಲ್ಲಿ ಬಾಗಿಲುವಾಡದ ಶಾಖೆಗಳ ಕೆಳಗೆ ಕಿರುಗಾತ್ರದಲ್ಲಿ ಮೂಡಿಬಂದಿವೆ. ದ್ವಾರಬಂಧವು ಉಳಿದ ಅಲಂಕಾರ ಶಿಲ್ಪಗಳಿಂದ ಸಾಂದ್ರಗೊಂಡಿರುವುದೇ ಇದಕ್ಕೆ ಕಾರಣವೆನ್ನಬಹುದು. ನದೀದೇವತೆಗಳ ಪಕ್ಕದಲ್ಲಿ ಛತ್ರಿ ಹಿಡಿದ ಚೆಲುವಾದ ಪರಿಚಾರಿಕೆಯರು ಶಿಲ್ಪಿತವಾಗಿರುವುದೂ ಉಂಟು. ರಾಜವೈಭವವನ್ನು ಇದು ಸೂಚಿಸುವಂತಹದು. ಈ ಬಗೆಯ ಚಿತ್ರಣವನ್ನು ಚಲುಕ್ಯ ದೇವಾಲಯಗಳಲ್ಲಿ ಹೇರಳವಾಗಿ ಕಾಣುತ್ತೇವೆ.

[೨೩] ಕನ್ನಡ ವಿಶ್ವಕೋಶ ಸಂ. ೧೩; ಪು. ೬೦೦

[೨೪] Agarawal V.S. Studies in Indian Art, pp. 220-221

ಚಲುಕ್ಯರ ಮೊದಲಿನ ವಾಸ್ತು ನಿರ್ಮಿತಿಗಳಾದ ಗುಹಾಲಯಗಳಲ್ಲಿ ನದೀ ದೇವತೆಗಳ ಶಿಲ್ಪಗಳು ವಿರಳ. ಬಾದಾಮಿಯ ಶೈವ ಗುಹಾಲಯದ ಮಹಾಮಂಟಪದ ಪ್ರವೇಶದ್ವಾರವು ಪಂಚಶಾಖೆಗಳಿಂದ ಅಲಂಕೃತವಾಗಿದೆ. ಅವುಗಳ ಕೆಳಭಾಗದಲ್ಲಿ ಎರಡು ಪುಷ್ಪದಳ ಶಾಖೆಗಳ ನಡುವೆ ಸುಮಾರು ಎರಡು ಅಡಿ ಎತ್ತರದ ಮಧ್ಯಮ ಗಾತ್ರದ ಸ್ತ್ರೀ ಪ್ರತಿಮೆಗಳಿವೆ. ಈ ಚೆಲುವೆಯರು ಕೈಯಲ್ಲಿ ಕಮಲ ಪುಷ್ಪ ಹಿಡಿದಿದ್ದಾರೆ. ಕೆ. ವ್ಹಿ. ಸೌಂದರ ರಾಜನ್ ಅವರು ಇವರನ್ನು ಗಂಗೆ-ಯಮುನೆಯರೆಂದು ಗುರುತಿಸಿದ್ದಾರೆ.[೨೫] ಆದರೆ ಅವರ ವಾಹನಗಳ ಕೆತ್ತನೆ ಅಲ್ಲಿಲ್ಲವಾದ್ದರಿಂದ ಸಂದೇಹಕ್ಕೆ ಎಡೆಯಿದೆ. ಆರನೆಯ ಶತಮಾನದ ಹೊತ್ತಿಗೆ ಭಾರತದಲ್ಲಿ ಗಂಗಾ ಯಮುನೆಯರ ಶಿಲ್ಪಗಳು ಲಾಕ್ಷಣಿಕ ನಿರ್ದಿಷ್ಟತೆ ಪಡೆದಿದ್ದರೂ ದಕ್ಷಿಣದಲ್ಲಿ ಇನ್ನೂ ಸ್ವೀಕೃತವಾಗಿರಲಿಲ್ಲವೆಂದು ತಿಳಿಯಬಹುದು. ಐಹೊಳೆಯ ರಾವಲಫಡಿಯಲ್ಲಿ ಮಾತ್ರ ಗಂಗಾಧರ ಮೂರ್ತಿಯ ಮೇಲ್ಭಾಗದಲ್ಲಿ ಅಂಜಲಿ ಮುದ್ರೆಯಲ್ಲಿರುವ ಮೂರು ಸ್ತ್ರೀ ಶಿಲ್ಪಗಳು ಗಂಗಾ, ಯಮುನಾ, ಸರಸ್ವತಿಯರವೆಂದು ಗುರುತಿಸಲಾಗಿದೆ.[೨೬] ಮಧ್ಯದಲ್ಲಿಯದು ಗಂಗೆಯೆಂದೂ, ಎಡಬಲದಲ್ಲಿನ ಶಿಲ್ಪಗಳು ಯುಮನೆ, ಸರಸ್ವತಿಯರದೆಂದೂ ಹೇಳಲಾಗಿದೆ.[೨೭] ಶಿವನು ತನ್ನ ಜಡೆಯಲ್ಲಿ ಈ ಮೂರು ನದಿಗಳನ್ನು ಧರಿಸಿದ್ದನೆಂದು ಶಿಲ್ಪಿ ಭಾವಿಸಿದ್ದನೆಂಬ ಅಣ್ಣಿಗೇರಿಯವರ ತರ್ಕವನ್ನು ಸ್ವೀಕರಿಸುವುದು ಕಷ್ಟ [೨೮]. ಏಕೆಂದರೆ ಶಿವನು ಮೂರು ನದಿಗಳನ್ನು ಧರಿಸಿದ ಬಗ್ಗೆ ಉಲ್ಲೇಖವಿಲ್ಲ . ಆತ ಗಂಗಾಧರ ಮಾತ್ರ. ಹಾಗಾಗಿ ಇವು ಮೂರು ಭಿನ್ನ ಭಿನ್ನ ನದೀದೇವತೆಗಳ ಮೂರ್ತಿಗಳಾಗಿರದೇ ಗಂಗೆಯೊಬ್ಬಳ ಮೂರು ಪ್ರವಾಹಗಳ ಪ್ರತೀಕವಾಗಿರುವ ಸಂಭಾವ್ಯವಿದೆ. ಪುರಾಣಗಳು ಗಂಗಾನದಿಯನ್ನು ತ್ರಿಪಥಗಾ ಎಂದು ಬಣ್ಣಿಸಿವೆ. ತ್ರಿಪಥಗಾ ಎಂಬುದು ಗಂಗೆಯ ನಾಮಾಂತರವೂ ಹೌದು. ಗಂಗಾ ನದಿಯು ಸ್ವರ್ಗ, ಮರ್ತ್ಯ ಹಾಗೂ ಪಾತಾಳಗಳೆಂಬ ಮೂರು ಲೋಕಗಳಲ್ಲಿ ಪ್ರವಹಿಸುವುದರಿಂದ ಈ ನದೀ ದೇವತೆಯು ತ್ರಿಪಥಗಾಮಿನಿ, ತ್ರಿಪಥಗೆ ಎನಿಸಿದ್ದಾಳೆ. ರಾವಲಫಡಿಯ ಗಂಗಾಧರ ಮೂರ್ತಿಯ ಮೇಲಿನ ಮೂವರು ಸ್ತ್ರೀಯರು ಗಂಗಾನದಿಯ ಮೂರು ಪ್ರವಾಹಗಳ ಪ್ರತೀಕವೆಂದು ತಿಳಿಯಬಹುದು. ಈ ನದಿಯು ತ್ರಿಪಥಗಾಮಿನಿ ಎಂಬುದನ್ನು ರೂವಾರಿಯು ಮೂರು ಶಿಲ್ಪಗಳ ಮೂಲಕ ಸೂಚಿಸಿದಂತಿದೆ. ಗಂಗೆಯ ವಿಶಿಷ್ಟ ರೂಪವನ್ನು ನೆನಪಿಸುವ ಶಿಲ್ಪ ಇದಾಗಿದೆ.

ಚಲುಕ್ಯರ ಪ್ರಾರಂಭಿಕ ರಾಚನಿಕ ಮಂದಿರಗಳಲ್ಲಿ ನದೀ ದೇವತೆಗಳ ಮೂರ್ತಿಗಳು ಕಂಡರಣೆಗೊಂಡಿಲ್ಲ. ಎಂಟನೆಯ ಶತಮಾನದ ಹೊತ್ತಿಗೆ ಗಂಗಾ ಯಮುನೆಯ ಶಿಲ್ಪಗಳು ನಿರ್ದಿಷ್ಟ ರೂಪದಲ್ಲಿ ವಾಹನಗಳೊಂದಿಗೆ ದೇವಾಲಯದಲ್ಲಿ ನೆಲೆಕಂಡವು. ಅದಕ್ಕೊಂದು ರಾಜಕೀಯ ಘಟನೆ ಹಿನ್ನೆಲೆಯೆಂದು ತಿಳಿಯಲಾಗಿದೆ. ಯುವರಾಜನಾಗಿದ್ದ ವಿಜಯಾದಿತ್ಯನು ಉತ್ತರದ ಅರಸನಾದ ವಜ್ರಟನನ್ನು ಯುದ್ಧದಲ್ಲಿ ಸೋಲಿಸಿ ವಿಜಯದ ದ್ಯೋತಕವಾಗಿ ಉತ್ತರ ಭಾರತವನ್ನು ಪ್ರತಿನಿಧಿಸುವ ಗಂಗಾ ಮತ್ತು ಯಮುನಾ ನದಿಗಳ ಕುರುಹುಗಳನ್ನು ಮತ್ತು ಪಾಳಿಧ್ವಜಾದಿ ಚಿಹ್ನೆಗಳನ್ನು ತಂದೆಯಾದ ವಿನಯಾದಿತ್ಯನಿಗೆ ಅರ್ಪಿಸಿದನೆಂಬುದು ಶಾಸನಗಳಿಂದ ವೇದ್ಯವಾಗುತ್ತದೆ.[೨೯] ಈ ವಿಜಯದ ಪ್ರತೀಕವಾಗಿ ಚಲುಕ್ಯರ ದೇವಾಲಯಗಳ ದ್ವಾರಬಂಧಗಳು, ನದೀ ಶಿಲ್ಪಗಳಿಂದ ಅಲಂಕೃತವಾಗ ತೊಡಗಿದವೆಂದು ಗ್ರಹಿಸಲಾಗಿದೆ. ಆದರೆ ವಿಜಯಾದಿತ್ಯನ ಮೂರನೆಯ ವರ್ಷದ ಆಳ್ವಿಕೆಯಲ್ಲಿ (ಕ್ರಿ.ಶ. ೬೯೯) ನಿರ್ಮಿತವಾದ ಜಂಬುಲಿಂಗ (ಬ್ರಹ, ವಿಷ್ಣು, ಈಶ್ವರ) ದೇವಾಲಯದಲ್ಲಿ ಗಂಗಾ ಮತ್ತು ಯಮುನೆಯರ ಶಿಲ್ಪಗಳು ಇಲ್ಲದಿರುವುದು ವಿಚಾರಣೀಯವಾಗಿವೆ. ಈ ವೇಳೆಗಾಗಲೇ ಉತ್ತರ ಭಾರತದ ದೇಗುಲಗಳಲ್ಲಿ ನದೀ ಶಿಲ್ಪಗಳನ್ನು ಅಲಂಕಾರಕ್ಕಾಗಿ ಅಳವಡಿಸಲಾಗಿದ್ದು, ಚಲುಕ್ಯ ರೂವಾರಿಗಳು ಅದರಿಂದ ಪ್ರೇರಣೆ ಪಡೆದಿರುವ ಸಾಧ್ಯತೆ ಇದೆ. ಕ್ರಮೇಣ ನದೀ ಶಿಲ್ಪಗಳು ಅಲಂಕಾರ ಶಿಲ್ಪಗಳಾಗಿ ಮತ್ತು ಕಲಾ ಪರಂಪರೆಯಾಗಿ ಮುಂದುವರೆದಿರುವುದು ಕಂಡುಬರುತ್ತದೆ.

[೨೫] Cave temples of the Deccan, New Delhi, p.55

[೨೬] Gupte, R. S., Art and Architecture of Aihole, p. 106

[೨೭] Rajasekhar. S., Early Chalukya Art at Aihole, p. 173

[೨೮] ಐಹೊಳೆ : ಸಂಸ್ಕೃತಿ, ಕಲೆ, ಪು. ೬೮.

[೨೯] EI, Vol. XXXVI, pp. 313-316
ÊÜá¢Üá¤ I.A. Vol. IX, PP. 125-130

ಗುಪ್ತರ ಕಾಲದಲ್ಲಿ ಮೊದಲಿನ ದೇವಾಲಯಗಳಲ್ಲಿ ದ್ವಾರಬಂಧದ ಮೇಲ್ಭಾಗದ ಇಕ್ಕೆಲಗಳಲ್ಲಿ ನದೀ ಶಿಲ್ಪಗಳ ಕಂಡರಣೆ ಕಂಡು ಬರುತ್ತದೆ. ದೇವಗಡದ ದಶಾವತಾರ ಗುಡಿಯನ್ನು ಇಲ್ಲಿ ಉದಾಹರಿಸಬಹುದು. ಮಧ್ಯಪ್ರದೇಶದ ಜಬಲಪುರ ಜಿಲ್ಲೆಯ ತಿಗಾವಾದಲ್ಲಿ ಗರ್ಭಗೃಹದ ಪ್ರವೇಶದ್ವಾರದ ಎಡಬಲಗಳಲ್ಲಿ ಗಂಗಾ ಯಮುನೆಯರ ಮೂರ್ತಿಗಳಿವೆ. ಚಲುಕ್ಯರ ಗುಡಿಗಳಲ್ಲಿ ಹೀಗೆ ನದೀ ದೇವತೆಗಳ ಮೂರ್ತಿಗಳು ಸಾಮಾನ್ಯವಾಗಿ ದ್ವಾರಬಂಧಗಳ ಶಾಖೆಗಳ ಅಡಿಯಲ್ಲಿವೆ. ಐಹೊಳೆಯ ಹುಚ್ಚಿಮಲ್ಲಿ ಗುಡಿಯ ಮಂಟಪದ ಬಾಗಿಲವಾಡದಲ್ಲಿ ಗಂಗಾ ಯಮುನೆಯರ ಶಿಲ್ಪಗಳಿವೆ. ಕಲೆಯ ದೃಷ್ಟಿಯಿಂದ ಇವು ಬಡವಾಗಿವೆ. ಗರ್ಭಗೃಹದ ದ್ವಾರಬಂಧದ ಕೆಳಗಿನ ಚೌಕುಗಳಲ್ಲಿಯೂ ಈ ಜಲದೇವತೆಗಳ ಪುಟ್ಟ ಮೂರ್ತಿಗಳಿವೆ.



ಚಿತ್ರ ೭೮. ಯಮುನಾ, ಲಾಡಖಾನ ಗುಡಿ

ಆದರೆ ಲಾಡಖಾನ ಗುಡಿಯಲ್ಲಿ ಮುಖಮಂಟಪದ ಕಂಬಗಳ ಮೇಲೆ ನದೀ ದೇವತೆಗಳನ್ನು ಕೆತ್ತಿರುವುದು ವಿಶೇಷವಾಗಿದೆ. ಇಲ್ಲಿಯ ಆಗ್ನೇಯ ಕಂಬದ ಮುಂಭಾಗದ ಮೇಲೆ ಮಧ್ಯಮ ಗಾತ್ರದ ಯಮುನೆಯ ಶಿಲ್ಪವನ್ನು ರೂಪಿಸಲಾಗಿದೆ. **(ಚಿತ್ರ ೭೮)** ದೇವತೆಯು ಸರ್ವಾಲಂಕಾರ ಭೂಷಿತೆಯಾಗಿ ತನ್ನ ವಾಹನವಾದ ಆಮೆಯ ಮೇಲೆ ನಿಂತಿರುವಳು. ಅವಳ ಕಾಲ ಬಳಿ ಇಬ್ಬರು ಕುಬ್ಜ ಸ್ತ್ರೀಯರು ಮತ್ತು ಮೇಲ್ಭಾಗದಲ್ಲಿ ಇಬ್ಬರು ಗಂಧರ್ವರ ಮೂರ್ತಿಗಳನ್ನು ಸಂಯೋಜನೆಗೊಳಿಸಿದ್ದರಿಂದ ಚಿತ್ತಾಕರ್ಷಕವಾಗಿದೆ. ಈಶಾನ್ಯ ಮೂಲೆಯ ಕಂಬದ ಮೇಲೆ ಇದ್ದಿರಬಹುದಾದ ಗಂಗಾ ವಿಗ್ರಹವು ಹಾನಿಗೊಳಗಾಗಿದೆ.

ಆಂಧ್ರಪ್ರದೇಶದ ಕೂಡವೇಲಿ ಸಂಗಮೇಶ್ವರ ದೇವಾಲಯದಲ್ಲಿ ನದೀ ದೇವತೆಗಳು ದೇವ ಕೋಷ್ಠಗಳಲ್ಲಿ ಕಾಣಿಸಿಕೊಂಡಿರುವುದೊಂದು ಅಪರೂಪದ ಉದಾಹರಣೆ[೩೦]. ಈ ಗುಡಿಯ ಹೊರಗೋಡೆಯಲ್ಲಿ ಆಗ್ನೇಯ ಬದಿಯಲ್ಲಿ ಯಮುನೆಯು ಆಮೆಯ ಮೇಲೆ ನಿರೂಪಿತಳಾಗಿದ್ದಾಳೆ. ಹೀಗೆ ಮುಂಭಾಗದ ಗೋಡೆಯ ದೇವಕೋಷ್ಠದಲ್ಲಿ ನದೀದೇವತೆಯನ್ನು ಸಂಯೋಜಿಸಿರುವುದು ವೈಶಿಷ್ಟ್ಯ ಪೂರ್ಣವಾಗಿದೆ. ಮೂಲತಃ ಇದಕ್ಕೆ ಅನುಗುಣವಾದ ಗಂಗಾವಿಗ್ರಹವು ಈಶಾನ್ಯ ಬದಿಯಲ್ಲಿ ಇದ್ದಿರಬೇಕು.

ಪಟ್ಟದಕಲ್ಲಿನ ಸಂಗಮೇಶ್ವರ ದೇವಾಲಯವು ಚಲುಕ್ಯ ದೊರೆ ವಿಜಯಾದಿತ್ಯನ ಕೊಡುಗೆ. ಪ್ರಾಯಶಃ ಇದು ಪಟ್ಟದಕಲ್ಲಿನಲ್ಲಿ ನಿರ್ಮಾಣಗೊಂಡ ಮೊದಲ ದೇವಾಲಯ. ಇದರ ಗರ್ಭಗೃಹದ ದ್ವಾರಬಂಧದ ತಳದಲ್ಲಿ ನದೀ ದೇವತೆಗಳನ್ನು ಕೆತ್ತಲಾಗಿದೆ. ದೇವಿಯ ಪಕ್ಕದಲ್ಲಿ ಸ್ತ್ರೀಯರ ಗುಂಪು ಇದ್ದು, ಒಬ್ಬಳು ಕೊಡೆಯನ್ನು ಹಿಡಿದು ಸೇವೆ ನಿರತಳಾಗಿದ್ದಾಳೆ. ವಾಹನಗಳು ನಾಶವಾಗಿವೆ.

ಗಳಗನಾಥ ದೇವಾಲಯದ ಅಂತರಾಳದ ಬಾಗಿಲುವಾಡವು ನಾಲ್ಕು ಶಾಖೆಗಳಿಂದ ಅಲಂಕೃತವಾಗಿದ್ದು, ಹೊಸ್ತಿಲ ಬಳಿ ಗಂಗಾ-ಯಮುನೆಯರ ಶಿಲ್ಪಗಳನ್ನು ರೂಪಿಸಲಾಗಿದೆ. ದೇವತೆಯು ಕುಬ್ಜೆಯ ಮೇಲೆ ಕೈಯಿಟ್ಟಿದ್ದಾಳೆ. ಆಕೆ ದೇವಿಗೆ ಕೊಡೆ ಹಿಡಿದಿರುವಳು. ಪಕ್ಕದಲ್ಲಿ ಗಿಡವಿರುವುದರಿಂದ ಈ ಬಗೆಯ ಶಿಲ್ಪ ಯೋಜನೆಗೆ ಹೊಸತನ್ನು ಸೇರಿಸಿದಂತಾಗಿದೆ.

[೩೦] ಕೂಡವೇಲಿಯ ಈ ದೇವಾಲಯವನ್ನು ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯು ಆಲಂಪುರಕ್ಕೆ ಸ್ಥಳಾಂತರಿಸಿದೆ.



ಚಿತ್ರ ೭೯. ಗಂಗಾ, ಕಾಶಿ ವಿಶ್ವನಾಥ ಗುಡಿ, ಪಟ್ಟದಕಲ್ಲ

ಐಹೊಳೆಯ ಕೊಂತಿಗುಡಿಯ ಗರ್ಭಗೃಹದ ದ್ವಾರಶಾಖೆಗಳಲ್ಲಿ ನದೀದೇವತೆಗಳಿದ್ದಾರೆ. ದ್ವಾರಬಂಧದ ಬಲಶಾಖೆಯಲ್ಲಿ ಯಮುನೆಯು ಆಮೆಯ ಮೇಲೆ ತ್ರಿಭಂಗಿಯಲ್ಲಿ ನಿಂತಿದ್ದಾಳೆ. ಅವಳ ಬಲಗೈ ಲೋಲಹಸ್ತವಾಗಿದೆ. ಎಡಶಾಖೆಯಲ್ಲಿ ಗಂಗೆಯು ಮಕರದ ಮೇಲೆ ನಿಂತಿದ್ದು, ಎಡಗೈ ಲೋಲಹಸ್ತವಾಗಿದೆ.

ಪಟ್ಟದಕಲ್ಲಿನ ಕಾಶೀವಿಶ್ವನಾಥ ದೇಗುಲದಲ್ಲಿ ಗರ್ಭಗೃಹದ ಗಂಗಾ–ಯಮುನೆಯರು ಹೆಚ್ಚು ಕಲಾತ್ಮಕವಾಗಿ ನಿರೂಪಿತರು. ದೇವಿಯ ಬಟ್ಟೆಯು ಗಾಳಿಗೆ ಹಾರಾಡುತ್ತಿರುವಂತೆ ತೋರಿಸಲಾಗಿದೆ. (ಚಿತ್ರ ೭೯) ಪಕ್ಕದಲ್ಲಿರುವ ಸ್ತ್ರೀ ದೇಹವನ್ನು ಹೊರಳಿಸಿ ದೇವಿಗೆ ಕೊಡೆ ಹಿಡಿದಿರುವ ರೀತಿಯಲ್ಲಿ ರೂವಾರಿಯ ಸೃಜನಶೀಲತೆ ವ್ಯಕ್ತವಾಗಿದೆ. ಪಾಪನಾಥ ಗುಡಿಯ ಮಂಟಪದ ಪ್ರವೇಶದ್ವಾರವು ಅತ್ಯಂತ ಅಲಂಕೃತವಾಗಿಯೂ, ಕಲಾತ್ಮಕವಾಗಿಯೂ ಅರಳಿಕೊಂಡಿದೆ. ಬಾಗಿಲವಾಡವು ನದೀದೇವತೆಗಳಿಂದ ಶೋಭಿತವಾಗಿದೆ. ಜಲದೇವತೆಯು ಕೈಯೊಂದನ್ನು ಕುಬ್ಜಗಣನ ತಲೆಯ ಮೇಲೆ ಇರಿಸಿದ್ದಾಳೆ. ಎಡಬದಿಯಲ್ಲಿಯ ಶಿಲ್ಪ ಸಮೂಹವು ವೈಶಿಷ್ಟ್ಯಪೂರ್ಣವಾಗಿದೆ. ಐದು ಸ್ತ್ರೀ ಶಿಲ್ಪಗಳ ಸಮೂಹವದು. ನಡುವಿನದು ಯಮನೆಯ ಮೂರ್ತಿ. ತನ್ನ ವಾಹನವಾದ ಆಮೆಯ ಮೇಲೆ ನಿಂತಿರುವಳು.

ಆಲಂಪುರದ ವೀರಬ್ರಹ್ಮ ದೇವಾಲಯದ ಗರ್ಭಗೃಹದ ಬಾಗಿಲವಾಡವು ಸೂಕ್ಷ್ಮ ಕೆತ್ತನೆಗಳಿಂದಾಗಿ ಹೆಚ್ಚು ಅಲಂಕೃತವಾಗಿದೆ. ನದೀದೇವತೆಗಳನ್ನು ಚೌಕಟ್ಟಿನಲ್ಲಿ ಸಂಯೋಜಿಸಲಾಗಿದೆ. ಜಲದೇವತೆಯು ಬದಿಯ ದ್ವಾರಪಾಲನಂತೆ ಕತ್ತರಿಗಾಲಿನಲ್ಲಿ ನಿಂತಿರುವಳು. ನದೀದೇವತೆಯ ಕಂಡರಣೆಯಲ್ಲಿ ಕಾಣುವ ಹೊಸಬಗೆಯ ನಿಲುವು ಇದಾಗಿದೆ.

ಗರುಡ ಬ್ರಹ್ಮ, ಪದ್ಮಬ್ರಹ್ಮ, ವಿಶ್ವಬ್ರಹ್ಮ, ಸ್ವರ್ಗಬ್ರಹ್ಮ, ದೇವಾಲಯಗಳಲ್ಲಿಯೂ ನದೀದೇವತೆಗಳ ನಿರೂಪಣೆ ಇದೆ. ಗಂಗಾ ಯಮುನೆಯರು ತಮ್ಮ ವಾಹನಗಳ ಮೇಲಿರುವಂತೆ ಮತ್ತು ಕೊಡೆ ಹಿಡಿದಿರುವ ಸ್ತ್ರೀಯೊಂದಿಗೆ ಸೇವೆ ಸ್ವೀಕರಿಸುವಂತೆ ಕೆತ್ತನೆ ಮಾಡಿರುವುದು ಚಲುಕ್ಯ ದೇವಾಲಯಗಳಲ್ಲಿಯ ನದೀ ದೇವತೆಗಳ ಶಿಲ್ಪ ಸಂಪ್ರದಾಯವೆನಿಸಿದೆ.

ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯವು ಕಲಾ ಪರಿಣತಿಗೆ ಪ್ರಖ್ಯಾತವಾದುದು. ನದೀದೇವತೆಗಳ ಕೆತ್ತನೆಯ ವಿಷಯದಲ್ಲಿಯೂ ಅಷ್ಟೆ. ಇದರ ಗರ್ಭಗೃಹದ ಬಾಗಿಲುವಾಡವು ನದೀದೇವತೆಗಳಿಂದ ಶೋಭಿತವಾಗಿದೆ. ಐದು ಚೆಲುವೆಯರ ಗುಂಪು ಚೌಕಟ್ಟಿನಲ್ಲಿ ಸಂಯೋಜಿತಗೊಂಡಿದೆ. (ಚಿತ್ರ ೮೦) ಬಳಕುವ ತಿಳುದೇಹದ ಈ ಸ್ತ್ರೀ ಪ್ರತಿಮೆಗಳು ಮೋಹಕವಾಗಿವೆ; ಲಾಲಿತ್ಯಮಯವಾಗಿವೆ. ಈ ಐವರಲ್ಲಿ ದೊಡ್ಡ ಶಿಲ್ಪವು ಯಮುನೆಯದು. ಪರಿಚಾರಿಕೆಯರು ಚೌರಿ, ಕೊಡೆ, ಹಿಡಿದು ಸೇವೆ ಸಲ್ಲಿಸುತ್ತಿದ್ದಾರೆ. ಇನ್ನೊಂದು ಶಾಖೆಯಲ್ಲಿ ಗಂಗೆಯನ್ನು ರೂಪಿಸಲಾಗಿದೆ. ಅವಳು ಕುಬ್ಜ ಸ್ತ್ರೀಯರಿಂದ ಸೇವಿತಳು. ಮಲ್ಲಿಕಾರ್ಜುನ ದೇವಾಲಯದ ಗರ್ಭಗೃಹದ ದ್ವಾರಬಂಧವೂ ಕೂಡ ನದೀ ದೇವತೆಗಳಿಂದ ಅಲಂಕೃತವಾಗಿದೆಯಾದರೂ ಸೂಕ್ಷ್ಮ ಕೆತ್ತನೆ ಮತ್ತು ಕಲಾತ್ಮಕತೆಯಲ್ಲಿ ಅವು ವಿರೂಪಾಕ್ಷ ದೇವಾಲಯದ ನದೀ ದೇವತೆಗಳಿಗೆ ಸಾಟಿ ಇಲ್ಲ .



ಚಿತ್ರ ೮೦. ಯಮುನಾ, ವಿರೂಪಾಕ್ಷ ಗರ್ಭಗುಡಿ ದ್ವಾರಬಂಧ

ಚಲುಕ್ಯರನ್ನು ಜಯಿಸಿದ ರಾಷ್ಟ್ರಕೂಟರು ಕೂಡ ಗಂಗಾ ಯಮುನೆಯರ ಶಿಲ್ಪಗಳ ಕೆತ್ತನೆಯನ್ನು ಪ್ರೋತ್ಸಾಹಿಸಿದರು. ತಮ್ಮ ದೇವಾಲಯಗಳಲ್ಲಿ ಅಲಂಕಾರ ಶಿಲ್ಪವಾಗಿ ಅಳವಡಿಸಿಕೊಂಡರು. ಐಹೊಳೆಯ ಹಾಲಿಬಸಪ್ಪ (ಅಳ್ಳಿಬಸಪ್ಪ) ದೇವಾಲಯವು ರಾಷ್ಟ್ರಕೂಟರ ಕೊಡುಗೆ. ಅದರ ಸಭಾಮಂಟಪದ ಪ್ರವೇಶದ್ವಾರವು ಇಕ್ಕೆಲಗಳಲ್ಲಿ ಮಧ್ಯಮ ಗಾತ್ರದ ಜಲದೇವತೆಗಳಿಂದ ಅಲಂಕೃತವಾಗಿದೆ. ಎಲ್ಲೋರದ ಜಗತ್ಪ್ರಸಿದ್ಧ ಕೈಲಾಸ ದೇವಾಲಯದಲ್ಲಿ ಈ ಜಲದೇವತೆಗಳ ವಿಸ್ತೃತ ಕೆತ್ತನೆಯಿದೆ. ದೇವಾಲಯಗಳಲ್ಲಿ ನದೀ ದೇವತೆಗಳ ಈ ಶಿಲ್ಪ ಕಂಡರಣೆಯು ಆಲಂಕಾರಿಕ ಶಿಲ್ಪವಾಗಿ ಮುಂದುವರೆಯಿತೆಂಬುದಕ್ಕೆ ವಿಜಯನಗರ (ಹಂಪಿ)ದ ಕೃಷ್ಣ ದೇವಾಲಯವು ಸಾಕ್ಷಿ ನುಡಿಯುವಂತಿದೆ.

## ೭. ರತಿ–ಮನ್ಮಥರು

ಸಾಮಾನ್ಯವಾಗಿ ದೇವಾಲಯದ ದ್ವಾರಬಂಧದಲ್ಲಿ ಕಾಣಿಸಿಕೊಳ್ಳುವ ಕಾಮರತಿಯರ ಶಿಲ್ಪಗಳು ಮಂಗಲಕರ, ಶ್ರೇಯಸ್ಕರ ಎಂದು ನಂಬಲಾಗಿದೆ. ಕಾಮನು ಬ್ರಹ್ಮನ ಪುತ್ರ. ರೂಪದಲ್ಲಿ ಅತ್ಯಂತ ಮನೋಹರ. ಈತನ ಮಡದಿ ರತಿ. ಪುರಾಣಗಳು ಅಪ್ರತಿಮ ಸುಂದರಿ ಎಂದು ಇವಳನ್ನು ವರ್ಣಿಸಿವೆ. ಶಿವ ಪುರಾಣ ಮೊದಲಾದವು ಕಾಮನ ಜನನದ ಬಗ್ಗೆ ಹಲವಾರು ಕತೆಗಳನ್ನು ಹೆಣೆದಿವೆ. ಕಾಳಿದಾಸನು ತನ್ನ ಕುಮಾರ ಸಂಭವದಲ್ಲಿ ಕಾಮನನ್ನು ರಮ್ಯವಾಗಿ ಬಣ್ಣಿಸಿದ್ದಾನೆ.

ಶಿಲ್ಪಗಳಲ್ಲಿ ಕಾಮನು ದ್ವಿಭುಜವಾಗಿ ಚಿತ್ರಿತನು. ಕಾಮ ಬಿಲ್ಲುಗಾರ. ಆತನ ಬಿಲ್ಲು ಕಬ್ಬಿನ ಕಾಂಡದಿಂದಾದುದು. ಆತನ ಬಾಣಗಳು ಐದು. ಇವು ತಾವರೆ, ಅಶೋಕ, ಮಾವು, ಮಲ್ಲಿಗೆ ಮತ್ತು ಕನ್ನೈದಿಲೆ ಎಂಬ ಕುಸುಮ ಬಾಣಗಳು. ಮನ್ಮಥನ ಈ ಬಾಣಗಳು ಸಮ್ಮೋಹನ, ಸಂತಾಪನ, ಸಂದೀಪನ, ಸಂಶೋಷಣ ಮತ್ತು ದ್ರಾವಣ ಎಂಬ ಸ್ಥಿತಿಯನ್ನುಂಟು ಮಾಡಬಲ್ಲವು. ಕಾಮನು ಬಯಕೆಯನ್ನು ಪ್ರತಿನಿಧಿಸುತ್ತಾನೆ. ಈತನ ಬಾಣಗಳಿಂದ ಬಯಕೆಯ ಬಾಧೆವುಂಟಾಗುತ್ತದೆ. ಕರ್ಣ, ನಾಸಿಕ, ನೇತ್ರ, ಜಿಹ್ವೆ ಮತ್ತು ತ್ವಚೆಗಳಿಂದ ಬಯಕೆ ಉದ್ದೀಪನಗೊಳ್ಳುತ್ತದೆ. ಒಂದು ಇಂದ್ರಿಯಕ್ಕೆ ಒಂದು ಕುಸುಮ ಬಾಣ. ಹೀಗಾಗಿ ಕಾಮನಿಗೆ ಪಂಚಬಾಣ ಎಂಬ ನಾಮಾಂತರವಿದೆ. ಬಯಕೆ ಇಲ್ಲದೆ ಕೃತಿ ಇರಲಾರದು. ಕೃತಿ ಇಲ್ಲದೆ ಪ್ರತಿಫಲವಿಲ್ಲ . ಕ್ರಿಯೆ ಪ್ರತಿಫಲಗಳಿಲ್ಲದೆ ಏನೂ ಇರಲಾರದು. ಗಿಳಿ ಆತನ ವಾಹನ. ಇವನ ಧ್ವಜದಲ್ಲಿ ಮಕರ ಇಲ್ಲವೇ ಮೀನು ಇರುವುದುಂಟು.

ಉತ್ತರ ಭಾರತದಲ್ಲಿ ಗುಪ್ತರ ಕಾಲದ ದೇವಾಲಯಗಳಲ್ಲಿ ರತಿ ಮನ್ಮಥರ ಶಿಲ್ಪಗಳು ಕಾಣಿಸಿಕೊಂಡಿವೆ. ಬಾದಾಮಿಯ ಎರಡನೆಯ ಗುಹಾಲಯದ ಕಂಬವೊಂದರಲ್ಲಿ ರತಿ ಮನ್ಮಥರ ಚಿತ್ರಣವಿದೆ. ಚಲುಕ್ಯರ ಶಿಲ್ಪಕಲೆಯಲ್ಲಿ ಪ್ರಾಯಶಃ ಇದು ರತಿಮನ್ಮಥರ ಮೊದಲ ಉದಾಹರಣೆ. ಆರನೆಯ ಶತಮಾನದ ಮಧ್ಯಭಾಗದಲ್ಲಿ ಇದನ್ನು ಕೆತ್ತಲಾಗಿದೆ. ಈ ಗುಹೆಯ ಮುಖಮಂಟಪದ ಮುಂದಿನ ಸಾಲಿನ ಕಂಬವೊಂದರಲ್ಲಿ ಈ ಕಾಮ–ರತಿಯರಿದ್ದಾರೆ. ಮನ್ಮಥನು ಎಡಗೈಯಲ್ಲಿ ಕಬ್ಬಿನ ಚಾಪವನ್ನು ಹಿಡಿದ್ದಾನೆ. ಬಿಲ್ಲಿನ ತುದಿಯಲ್ಲಿನ ಎಲೆಗಳು ತಲೆಯ ಮೇಲ್ಭಾಗದಲ್ಲಿ ಬಾಗಿಕೊಂಡಿವೆ. ಆತನ ಬಲಬದಿಯಲ್ಲಿ ಕಾಮನ ಪರಿಚಾರಕನಾದ ವಸಂತನು ಬತ್ತಳಿಕೆಯನ್ನು ಹಿಡಿದುಕೊಂಡು ನಿಂತಿದ್ದಾನೆ. ಕಾಮನು ಬಲಗೈಯಿಂದ ಬಾಣವೊಂದನ್ನು ಬತ್ತಳಿಕೆಯಿಂದ ಹೊರಗೆ ತೆಗೆದುಕೊಳ್ಳುತ್ತಿದ್ದಾನೆ.

ಮನ್ಮಥನ ಬಲಬದಿಯಲ್ಲಿ ರತಿಯು ಆತನ ಅಧೋವಸ್ತ್ರದತ್ತ ಬಲಗೈಯನ್ನು ಚಾಚಿರುವಳು. ಕಾಮನು ಕುಸುಮ ಬಾಣವನ್ನು ಹಿಡಿಯುತ್ತಿದ್ದಂತೆ ರತಿ ಆತನ ಅಧೋವಸ್ತ್ರನ್ನು ಹಿಡಿಯುತ್ತಿರುವಂತೆ ಚಿತ್ರಿಸುವಲ್ಲಿ ಕಲಾವಿದನ ಕಲ್ಪನೆ ಲಾಸ್ಯವಾಡಿದೆ.

ಈ ಶಿಲ್ಪ ಸಂಯೋಜಿಸುವಲ್ಲಿ ವಸಂತನ ನಿರೂಪಣೆಗಾಗಿ ಸಾಕಷ್ಟು ಸ್ಥಳ ಲಭ್ಯವಾಗಿಲ್ಲ . ಇದರಿಂದಾಗಿ ಕಲಾವಿದನಿಗೆ ವಸಂತನ ಕುದುರೆ ಮುಖವನ್ನು ಸ್ಪಷ್ಟವಾಗಿ ಕಂಡರಿಸಲು



ಚಿತ್ರ ೮೧. ಕಾಮ-ರತಿ, ಬೋದಿಗೆ, ಮಹಾವಿಷ್ಣು ಗೃಹ

ಸಾಧ್ಯವಾಗಿಲ್ಲ. ಈ ಅಸ್ಪಷ್ಟತೆಯಿಂದಾಗಿ ಬ್ಯಾನರ್ಜಿಯವರು ಅದನ್ನು ಮಂಗ ಎಂದು ಗ್ರಹಿಸಿದರೆ[೩೧] ಕೆ. ವಿ. ಸೌಂದರ ರಾಜನ್ ಅವರು ನಂದಿಯೆಂದು ಗುರುತಿಸುತ್ತಾರೆ.[೩೨] ಕಬ್ಬಿನ ಬಿಲ್ಲು ಮತ್ತು ಬತ್ತಳಿಕೆಗಳು ಅವರು ಕಾಮರತಿಯರೆಂಬುದನ್ನು ಸ್ಪಷ್ಟ ಪಡಿಸುತ್ತವೆ. ಹಾಗಾಗಿ ಗಣನು ಅಶ್ವಮುಖಿ ವಸಂತನೇ ಆಗಿರಲು ಸಾಧ್ಯ. ಕಲಾವಿದನು ಕುದುರೆ ಮುಖದ ಸಾದೃಶ್ಯವನ್ನು ಸಾಧಿಸುವಲ್ಲಿ ವಿಫಲನಾಗಿದ್ದಾನೆ. ಇದು ಕೆತ್ತನೆಯಲ್ಲಿ ಆಕಸ್ಮಿಕವಾಗಿ ಉಂಟಾದ ದೋಷವಿರಬಹುದು. ಅಶ್ವವು ಲೈಂಗಿಕತೆಯ ಸಂಕೇತವಾಗಿದ್ದು , ಕಾಮನ ಪರಿಚಾರಕನು ಅಶ್ವಮುಖಿಯಾಗಿರುವುದು ಅರ್ಥಪೂರ್ಣವಾದುದು.

ಮಹಾವಿಷ್ಣು ಗೃಹದ ಅಲಂಕೃತ ಬೋದಿಗೆ ಶಿಲ್ಪಗಳನ್ನು ಹಿಂದೆ ಗಮನಿಸಿದ್ದೇವೆ. ಪೂರ್ವದಿಂದ ನಾಲ್ಕನೆಯ ಕಂಬವನ್ನು ಲಕ್ಷಿಸೋಣ. ಈ ಕಂಬದ ಪೂರ್ವಬದಿಯ ಬೋದಿಗೆಯಲ್ಲಿ ಕಾಮ–ರತಿಯರಿದ್ದಾರೆ. ಚಲುಕ್ಯ ರೂವಾರಿಗಳು ರೂಪಿಸಿದ ಉತ್ಕೃಷ್ಟವಾದ ರತಿ–ಮನ್ಮಥರ ಕೆತ್ತನೆ ಇದು (**ಚಿತ್ರ ೮೧**). ಮನ್ಮಥನು ಕಿರೀಟದವರೆಗೆ ಎಡಗೈಯನ್ನು ಎತ್ತರಿಸಿ ಧನುಸ್ಸನ್ನು ಹಿಡಿದಿದ್ದಾನೆ. ಅದರ ತುದಿಯಲ್ಲಿನ ಎಲೆಗಳು ಆತನ ತಲೆಯ ಮೇಲ್ಭಾಗದಲ್ಲಿ ಚಾಚಿವೆ. ಬಾಣವನ್ನು ಹಿಡಿದಿರುವ ಬಲಗೈ ಟೊಂಕದ ಬಳಿ ಇದೆ. ಮನ್ಮಥನ ಪಕ್ಕದಲ್ಲಿ ಅಶ್ವಮುಖಿ ವಸಂತನು ಬತ್ತಳಿಕೆಯನ್ನು ಹಿಡಿದುಕೊಂಡು ನಿಂತಿದ್ದಾನೆ. ರತಿಯು ಕಾಮಾಸ್ತಕಳಾಗಿ ತನ್ನ ಕಾಲಿನಿಂದ ಕಾಮನ ಕಾಲನ್ನು ಬಳಸಿದ್ದಾಳೆ. ಆ ಮೂಲಕ ಆಕೆಯ ಭಾವ ತೀವ್ರತೆಯನ್ನು ರೂವಾರಿ ಚೆನ್ನಾಗಿ ಬಿಂಬಿಸಿದ್ದಾನೆ. ರತಿಯ ಮೈ ಮಣಿತಗಳಿಂದಾಗಿ ಶಿಲ್ಪವು ಸಮತೋಲನವನ್ನು ಕಳೆದುಕೊಳ್ಳದಂತೆ ಎಚ್ಚರಿಕೆ ವಹಿಸಿದ್ದಾನೆ. ಇದು ಶಿಲ್ಪಿಯ ನೈಪುಣ್ಯ. ಮನ್ಮಥನ ಬಲಕ್ಕೆ ಮಕರಧ್ವಜದ ಚಿತ್ರಣವಿದೆ.

ಇದೇ ಗುಹಾಲಯದಲ್ಲಿ ಹರಿಹರನ ಬೃಹತ್ ವಿಗ್ರಹದ ಬಲಕ್ಕಿರುವ ಅರೆಗಂಬದ ಬೋದಿಗೆಯು ಮನ್ಮಥನ ಮೂರ್ತಿಯಿಂದ ಶೋಭಿತವಾಗಿದೆ. ಆತನ ಜೊತೆಯಲ್ಲಿ ರತಿ ಇಲ್ಲ. ಆತನು ಒಬ್ಬಂಟಿಗನಾಗಿ ಕಂಡು ಬರುವ ಅಪರೂಪದ ಕಂಡರಣೆಯಿದು. ಮನ್ಮಥನು ಮಾವಿನಮರದ ಅಡಿಯಲ್ಲಿ ಬಾಣವನ್ನು ಹಿಡಿದುಕೊಂಡು ನಿಂತಿರುವನು. ಪಕ್ಕದಲ್ಲಿ ಕುಸುಮ ಬಾಣಗಳ ಬತ್ತಳಿಕೆನ್ನು ಹಿಡಿದ ವಸಂತನಿದ್ದಾನೆ. ಈ ಮಾವಿನಮರವು ಬೋದಿಗೆಯ ಎರಡು ಬದಿಗಳಲ್ಲಿ ಚಾಚಿಕೊಂಡಿರುವಂತೆ ಶಿಲ್ಪಿಸಿರುವ ಜಾಣ್ಮೆ ರೂವಾರಿಯದು.

ಚಲುಕ್ಯರ ಜಿನಾಲಯದಲ್ಲಿಯೂ ಒಂಟಿ ಮನ್ಮಥನ ವಿಗ್ರಹವಿದೆ. ಬಾದಾಮಿಯ ಜೈನ ಗುಹೆಯ ಬಾಗಿಲವಾಡವು ಸುಂದರ ಶಾಖೆಗಳಿಂದ ಅಲಂಕೃತವಾಗಿದೆ. ಅದರ ಎಡ (ಪಶ್ಚಿಮ) ಬದಿಯ ದ್ವಾರಶಾಖೆಯ ಅಡಿಯಲ್ಲಿ ಮನ್ಮಥನು ಕಿರೀಟ, ಕಂಠಹಾರ ಮೊದಲಾದ ಆಭರಣಗಳಿಂದ ಭೂಷಿತನಾಗಿ ಕಟ್ಯವಲಂಬಿತನಾಗಿ ನಿಂತಿದ್ದಾನೆ. ಎಡಗೈಯಲ್ಲಿ ಕಬ್ಬಿನ ಚಾಪವಿದೆ. ಅದರ ಎಲೆಗಳು ತಲೆಯನ್ನು ಸುತ್ತುವರೆದ ಕಾರಣ ಪ್ರಭಾವಳಿಯ ಪರಿಣಾಮವುಂಟಾಗಿದೆ. ಇದು ಮಧ್ಯಮ ಗಾತ್ರದ ಮೂರ್ತಿ. ಪ್ರಮಾಣ ಬದ್ಧವಾಗಿ ಲಕ್ಷಣವಾಗಿ ಮೂಡಿಬಂದಿದೆ.

ಚಲುಕ್ಯರ ಗುಹಾದೇವಾಲಯಗಳಲ್ಲಿ ರತಿಮನ್ಮಥರು ಕಡಿಮೆ ಸಂಖ್ಯೆಯಲ್ಲಿ ಕಾಣಿಸಿಕೊಂಡಿದ್ದಾರೆ. ಅದರೆ ಅವರ ಲೀಲೆಯನ್ನು ತೋರಿಸುವ ಮಾನವ ದಂಪತಿಗಳ ಶಿಲ್ಪಗಳನ್ನು ರೂವಾರಿಗಳು ತಮ್ಮ ಕಲಾಭಿವ್ಯಕ್ತಿಗೆ ಆಯ್ಕೆ ಮಾಡಿಕೊಂಡಿದ್ದಾರೆ. ರಾಜನಿಕ ಮಂದಿರಗಳ ಅಲಂಕರಣೆಯಲ್ಲಿಯೂ ಕಾಮ–ರತಿಯರ ಶಿಲ್ಪಗಳು ಕಡಿಮೆಯೇ. ಪ್ರಧಾನವಾಗಿ ದ್ವಾರಬಂಧ ಮತ್ತು ಕಂಬಗಳ ಶೃಂಗಾರಕ್ಕಾಗಿ ಇವನ್ನು ರಚಿಸಲಾಗಿದೆ.

[೩೧] Banerji, R.D., Basreliefs of Badami, Calcutta, P. 15

[೩೨] Soundara Rajan, K. V. Cave temples of the Deccan, p. 52


ಚಿತ್ರ ೮೨. ಕಾಮ-ರತಿ, ಮಾಲಗಿತ್ತಿ ಶಿವಾಲಯ

ಮಾಲಗಿತ್ತಿ ಶಿವಾಲಯದ ಗರ್ಭಗೃಹದ ದ್ವಾರಬಂಧವು ಹೆಚ್ಚು ಕಲಾತ್ಮಕ ವಾದುದು. ಈ ಬಾಗಿಲುವಾಡದ ವಿಶೇಷವೆಂದರೆ ಅದರಲ್ಲಿ ಪ್ರಧಾನವಾಗಿ ಕಾಣುವ ರತಿ–ಮನ್ಮಥರ ವಿಗ್ರಹಗಳು ಸುಮಾರು ಎರಡು ಅಡಿ ಎತ್ತರ ಇವೆ. **(ಚಿತ್ರ ೮೨)** ಚಲುಕ್ಯರ ರಾಚನಿಕ ದೇವಾಲಯಗಳಲ್ಲಿ ಕಂಡು ಬರುವ ರತಿ ಮನ್ಮಥರ ಉತ್ತಮ ಉದಾಹರಣೆಗಳಿವು.

ದ್ವಾರಬಂಧದ ಶಾಖೆಗಳ ಅಡಿಯಲ್ಲಿ ಎರಡು ಚೌಕಟ್ಟುಗಳಿವೆ. ಬಲ ಚೌಕಟ್ಟಿನಲ್ಲಿ ಕಾಮನು ಎಡಗೈಯಲ್ಲಿ ಕಬ್ಬಿನ ಧನುಸ್ಸು ಹಿಡಿದಿರುವನು. ಅದರ ಎಲೆಗಳು ತಲೆಯ ಮೇಲೆ ಬಾಗಿರುವದರಿಂದ ಪ್ರಭಾವಳಿಯ ಭ್ರಮೆಯನ್ನು ಮೂಡಿಸುತ್ತದೆ. ಬಲಗೈಯಲ್ಲಿ ಬಾಣವಿದೆ. ಆತನ ಎಡಕ್ಕೆ ಒಯ್ಯಾರದ ನಿಲುವಿನ ರತಿಯಿದ್ದಾಳೆ. ಇಲ್ಲಿ ಅಶ್ವಮುಖಿ ವಸಂತ ಇಲ್ಲ .

ಇನ್ನೊಂದು ಚೌಕಟ್ಟಿನಲ್ಲಿ ರತಿಯು ಕಾಮನ ಬಲ ಪಕ್ಕದಲ್ಲಿ ನಿಂತಿರುವಳು. ಈ ಬಗೆಯ ಸ್ಥಾನ ಹೊಂದಾಣಿಕೆಯಿಂದ ಅಂದರೆ ರತಿ–ಶಿಲ್ಪಗಳು ಒಂದರಲ್ಲಿ ಕಾಮನ ಎಡಕ್ಕೆ, ಇನ್ನೊಂದರಲ್ಲಿ ಬಲಕ್ಕೆ ಕೆತ್ತನೆಯಾದ ಕಾರಣ ಬಾಗಿಲುವಾಡಕ್ಕೆ ದ್ವಿಪಾರ್ಶ ಸಮರೂಪತೆ ಪ್ರಾಪ್ತವಾಗಿದೆ. ಈ ಚೌಕಟ್ಟಿನಲ್ಲಿ ವಸಂತನನ್ನು ರೂಪಿಸಲಾಗಿದೆ. ಅವನು ಕಾಮದೇವನತ್ತ ಮುಖಮಾಡಿ ಹೆಗಲ ಮೇಲೆ ಬತ್ತಳಿಕೆ ಹೊತ್ತುಕೊಂಡು ಸೇವೆ ಸಲ್ಲಿಸುತ್ತಿದ್ದಾನೆ. ಬತ್ತಳಿಕೆಯನ್ನು ಹಿಡಿದುಕೊಂಡ ರೀತಿಯು ವಿಲಕ್ಷಣವಾದುದು. ಕಾಮನ ಎಡಗೈಯಲ್ಲಿ ಕಬ್ಬಿನ ಬಿಲ್ಲು ಇದೆ. ಕೈಯನ್ನು ಕಿರೀಟದೆತ್ತರಕ್ಕೆ ಎತ್ತರಿಸಿದ್ದಾನೆ. ಕಬ್ಬಿನ ಎಲೆಗಳು ತಲೆಯ ಮೇಲೆ ಬಾಗಿರುವುದರಿಂದ ಶಿಲ್ಪದ ಕಳೆ ಹೆಚ್ಚಿದೆ.

ಐಹೊಳೆಯ ಕೊಂತ ಗುಡಿ(ನಂ.೧)ಯ ಮಂಟಪದ ಕಂಬ, ಜ್ಯೋತಿರ್ಲಿಂಗ ಗುಡಿಯ ನಂದಿಮಂಟಪದ ಕಂಬ ಮತ್ತು ಪಾಪನಾಥ ಗುಡಿಯ ಉತ್ತರಗೋಡೆಯ ಮೇಲೆ ರತಿ ಮನ್ಮಥರ ಮೂರ್ತಿಗಳನ್ನು ಕೊರೆಯಲಾಗಿದೆ. ಹೀಗೆ ವಿವಿಧ ವಾಸ್ತು ಅಂಗಗಳ ಅಲಂಕರಣೆಗಾಗಿ ಕಾಮರತಿಯರ ವಿಗ್ರಹಗಳನ್ನು ಬಳಸಲಾಗಿದೆ. ಆದಾಗ್ಯೂ ಚಲುಕ್ಯರ ದೇಗುಲಗಳಲ್ಲಿ ರತಿ ಮನ್ಮಥರ ಶಿಲ್ಪಗಳು ಅಷ್ಟೊಂದು ಜನಪ್ರಿಯವಾದಂತೆ ಕಂಡು ಬರುವದಿಲ್ಲವೆಂದು ಹೇಳಬೇಕು.

**೮. ದಿಕ್ಪಾಲರು**

ದಿಕ್ಪಾಲರು ವೇದಕಾಲದ ದೇವತೆಗಳು. ಹಾಗಾಗಿ ಹಿಂದೂ ಧರ್ಮೀಯರಲ್ಲಿ ದಿಕ್ಪಾಲರ (ಲೋಕಪಾಲರ) ಪರಿಕಲ್ಪನೆ ತುಂಬಾ ಪ್ರಾಚೀನವಾದುದು. ಇಡೀ ಲೋಕವು ಎಂಟು ಮಂದಿ ದಿಕ್ಪಾಲರಿಂದ ರಕ್ಷಿತವಾಗಿದೆ ಎಂಬುದನ್ನು ಪ್ರಾಚೀನ ಧಾರ್ಮಿಕ ಗ್ರಂಥಗಳು ಉಲ್ಲೇಖಿಸುತ್ತವೆ. ಹಿಂದೂ ಪರಂಪರೆಯಲ್ಲಿ ಹೋಮ, ಹವನಾದಿ ವಿಧಿ ವಿಧಾನಗಳನ್ನು ನೆರವೇರಿಸುವಾಗ ದಿಕ್ಪಾಲರನ್ನು ಪೂಜಿಸುವುದು ಸಂಪ್ರದಾಯವಾಗಿ ಈಗಲೂ ಬಳಕೆಯಲ್ಲಿದೆ.

ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಎಂಬ ದಿಕ್ಕುಗಳಿಗೆ ಕ್ರಮವಾಗಿ ಇಂದ್ರ, ವರುಣ, ಕುಬೇರ, ಯಮ ಎಂಬವರು ಒಡೆಯರು. ಆಗ್ನೇಯ ನೈಋತ್ಯ, ವಾಯವ್ಯ, ಈಶಾನ್ಯ ಎಂಬ ವಿದಿಕ್ಕುಗಳಿಗೆ ಕ್ರಮವಾಗಿ ಅಗ್ನಿ, ನಿರ್ಯತಿ, ವಾಯು, ಈಶಾನರು ಪ್ರಭುಗಳು. ಹೀಗೆ

ಒಂದೊಂದು ದಿಕ್ಕಿಗೆ ಒಬ್ಬೊಬ್ಬ ಅಧಿಪತಿ. ಇವರನ್ನು ಒಟ್ಟಾಗಿ ಅಷ್ಟದಿಕ್ಪಾಲರೆಂದು ಕರೆಯಲಾಗುತ್ತದೆ. ಪ್ರತಿಯೊಬ್ಬ ದಿಕ್ಪಾಲನಿಗೆ ನಿರ್ದಿಷ್ಟ ವಾಹನವಿದೆ. ಅದು ದಿಕ್ಪಾಲರನ್ನು ಗುರುತಿಸುವಲ್ಲಿ ನೆರವಾಗುತ್ತವೆ.




ಚಲುಕ್ಯರ ಗುಹಾಲಯಗಳಲ್ಲಿ ಮತ್ತು ರಾಚನಿಕ ಮಂದಿರಗಳಲ್ಲಿ ದಿಕ್ಪಾಲರ ಚಿತ್ರಗಳನ್ನು ಅಲಂಕಾರಕ್ಕಾಗಿ ಬಳಸಿದ್ದಾರೆ. ಸಾಮಾನ್ಯವಾಗಿ ದಿಕ್ಪಾಲರ ಶಿಲ್ಪಗಳು ವಿತಾನಗಳಲ್ಲಿ ಕಂಡು ಬರುತ್ತವೆ. ಮಂಟಪದ ಚತ್ತುಗಳನ್ನು ಈ ಬಗೆಯ ಮೂರ್ತಿಗಳಿಂದ ಸಿಂಗರಿಸಲಾಗಿದೆ. ಈ ದಿಕ್ಪಾಲರು ಒಂದು ಮಂಡಲದ ಅಂಗವಾಗಿ, ಸಂಯುಕ್ತ ಶಿಲ್ಪವಾಗಿ ನಿರೂಪಿತರಾಗಿರುವುದು ಸಾಮಾನ್ಯ. ಆದರೆ ಬಿಡಿಯಾಗಿಯೂ ದಿಕ್ಪಾಲರು ಕಾಣಿಸಿಕೊಂಡಿದ್ದಾರೆ. ಇವರು ವಿತಾನ, ಕಂಬ ಹಾಗೂ ಗೋಡೆಗಳಿಗೆ ಚೆಲುವನ್ನು ತುಂಬಿದ್ದಾರೆ. ಬಾದಾಮಿಯಲ್ಲಿ ಮೂರನೆಯ ಗುಹಾಲಯದ ಚತ್ತು ಮತ್ತು ಕಂಬದ ಮೇಲಿನ ಸುಂದರ ವೃತ್ತಾಕಾರದ ಪದಕಗಳಲ್ಲಿ ವರುಣ ಚಿತ್ರಿತನು. ಪಾಪನಾಥ ಗುಡಿಯ ಹೊರಗೋಡೆಯ ಮೇಲೆ ಅಲಂಕಾರ ಶಿಲ್ಪಗಳ ರೂಪದಲ್ಲಿ ಅಗ್ನಿ, ವರುಣ, ಇಂದ್ರರು ತಮ್ಮ ವಾಹನದೊಂದಿಗೆ ಕಾಣಿಸಿಕೊಂಡಿದ್ದಾರೆ.

ಚಲುಕ್ಯರ ಕಾಲದ ಅತ್ಯಂತ ಸುಂದರವಾದ ದಿಕ್ಪಾಲರ ಮೂರ್ತಿಗಳು ಐಹೊಳೆಯ ಭಾರತೀಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿವೆ. ಸುಮಾರು ಎರಡು ಅಡಿ ಎತ್ತರದ ಬಿಡಿ ಶಿಲ್ಪಗಳಾದ ಇವು ಜ್ಯೋತಿರ್ಲಿಂಗ ಗುಡಿ ಗುಂಪಿನ ಆವರಣದಲ್ಲಿ ಲಭ್ಯವಾಗಿವೆ. ಅವುಗಳ ಮೂಲ ಸ್ಥಳ ಸ್ಪಷ್ಟವಿಲ್ಲ . ಆ ಆವರಣದಲ್ಲಿ ವಿಶಿಷ್ಟ ವಿನ್ಯಾಸದ ಬಾವಿಯಿದೆ. ಪ್ರಾಯಶಃ ಅದರ ಗೋಡೆಯ ಮೇಲೆ ಅಲಂಕಾರಿಕ ಶಿಲ್ಪಗಳಾಗಿ ಇವು ಕಾಣಿಸಿಕೊಂಡಿರಬೇಕು. ಬಾವಿಯು ಹೀಗೆ ಶಿಲ್ಪಗಳಿಂದ ಅಲಂಕೃತವಾಗಿರುತ್ತದೆಂಬುದಕ್ಕೆ ಹುಚ್ಚಿಮಲ್ಲಿ ಗುಡಿಯ ಮುಂದಿರುವ ಬಾವಿ ಇನ್ನೊಂದು ಉದಾಹರಣೆಯಾಗಿದೆ.

ಕೇವಲ ಆರು ದಿಕ್ಪಾಲರ ಮೂರ್ತಿಗಳು ಉತ್ಖನನದಲ್ಲಿ ದೊರೆತಿವೆ. ಅವೆಲ್ಲ ಒಂದೇ ಗಾತ್ರದಲ್ಲಿವೆ. ದಿಕ್ಪಾಲರು ದಂಪತಿ ಸಮೇತರಾಗಿ ತಮ್ಮ ವಾಹನಗಳ ಮೇಲೆ ಕುಳಿತಿರುವಂತೆ ರೂಪಿತರು. ಸಾಮಾನ್ಯವಾಗಿ ವಿತಾನದಲ್ಲಿ ಕಾಣಿಸಿಕೊಳ್ಳುವ ದಿಕ್ಪಾಲರು ಅರೆಯುಬ್ಬು ಶಿಲ್ಪಗಳಾಗಿ ಕಾಣಸಿಗುತ್ತಾರೆ. ಈ ದಿಕ್ಪಾಲರನ್ನು ಬಿಡಿ ಬಿಡಿಯಾದ ಕಲ್ಲುಗಳಲ್ಲಿ, ಕಡೆದು ಮಾಡಿರುವುದರಿಂದ ಇವು ದುಂಡುಶಿಲ್ಪಗಳಾಗಿರದಿದ್ದರೂ ಆ ಪರಿಣಾಮವನ್ನು ಕೊಡುವಂತೆ ರೂಪಿತವಾಗಿವೆ. ಅವುಗಳ ಮೈವಳಿಕೆಯಲ್ಲಿ ಕಲಾವಿದನ ನೈಪುಣ್ಯ ವ್ಯಕ್ತವಾಗಿದೆ. ಇವು ಕಲಾತ್ಮಕವಾದ ಮತ್ತು ಕ್ರಿಯಾತ್ಮಕವಾದ ಸುಂದರ ಕಲಾಕೃತಿಗಳು.

ದಿಕ್ಪಾಲರು ಸಂಕೀರ್ಣ ಶಿಲ್ಪವಾಗಿ ವಿತಾನಗಳನ್ನು ಅಲಂಕರಿಸಿದ್ದಾರೆ. ಈ ವಿತಾನಗಳತ್ತ ಪಕ್ಷಿನೋಟ ಹರಿಸೋಣ. ಚಲುಕ್ಯರ ಉತ್ಕೃಷ್ಟ ಗುಹಾದೇವಾಲಯವೆಂದರೆ ಮಂಗಳೇಶನು (ಕ್ರಿ.ಶ. ೫೭೮) ಕೊರೆಯಿಸಿದ ಮಹಾವಿಷ್ಣು ಗೃಹ. ಇದರ ಮುಖ ಮಂಟಪ (ಅಗ್ರಮಂಟಪ)

ಹಾಗೂ ಸಭಾ ಮಂಟಪದ ಚತ್ತುಗಳಲ್ಲಿ ಅಲಂಕಾರಕ್ಕೆಂದು ದಿಕ್ಪಾಲರ ಶಿಲ್ಪಗಳನ್ನು ಬಳಸಲಾಗಿದೆ. ಈ ಬಗೆಯ ಶಿಲ್ಪಗಳನ್ನು ಕುರಿತಂತೆ ಇವು ಕಲಾವಿದರ ಮೊದಲ ಪ್ರಯತ್ನಗಳು.

ದಿಕ್ಪಾಲರು ನಿರ್ದಿಷ್ಟ ದಿಕ್ಕುಗಳಿಗೆ ಅಧಿಪತಿಗಳು ಎಂಬುದನ್ನು ಹಿಂದೆ ಗಮನಿಸಿದ್ದೇವೆ. ಆದರೆ ಚಲುಕ್ಯರ ಶಿಲ್ಪಗಳ ಕಂಡರಣೆಯಲ್ಲಿ ಈ ನಿಯಮವನ್ನು ಸಂಪೂರ್ಣವಾಗಿ ಪಾಲಿಸಲಾಗಿಲ್ಲ . ಆದುದರಿಂದ ಮೂರ್ತಿ ಲಕ್ಷಣಗಳು ಶಾಸ್ತ್ರಬದ್ಧಗೊಳ್ಳುವ ಪೂರ್ವದಲ್ಲಿ ಇವುಗಳ ರಚನೆಯಾಗಿದೆ ಎಂದು ಭಾವಿಸಬಹುದಾಗಿದೆ. ಈ ಸಂಗತಿ ಈ ಶಿಲ್ಪ ನಿರೂಪಣೆಯ ಪ್ರಾಚೀನತೆಯನ್ನು ಸಾರುತ್ತದೆ.

ಮಹಾವಿಷ್ಣುಗೃಹದ ವಿತಾನವು ಏಳು ಅಂಕಣಗಳನ್ನು ಹೊಂದಿದೆ. ಪೂರ್ವಬದಿಯ ಮೊದಲನೆಯ ಅಂಕಣದಲ್ಲಿ ಚತ್ತಿನ ಮೇಲ್ಮೈಯಿಂದ ನಸು ಚಾಚಿರುವ ವರ್ತುಲದಲ್ಲಿಯ ಶಿಲ್ಪವು ವರುಣನೆಂಬುದಾಗಿ ಕೆ. ವ್ಹಿ. ಸೌಂದರ ರಾಜನ್ ಅವರ ಅಭಿಪ್ರಾಯ. ಸಿಂಹಾಸನದ ಮೇಲೆ ಉತ್ಕುಟಿತ ಭಂಗಿಯಲ್ಲಿ ಕುಳಿತ ದಿಕ್ಪಾಲನು ಬಲಗೈಯಲ್ಲಿ ಅಂಕುಶವನ್ನು, ಎಡಗೈಯಲ್ಲಿ ಪದ್ಮವನ್ನು ಹಿಡಿದಿರುವನೆಂದು ಮತ್ತು ಸಿಂಹಾಸನವು ಎರಡು ಮಕರ ಮುಖಗಳಿಂದ ಅಲಂಕೃತವಾಗಿರುವುದೆಂದು ಅವರು ಗುರುತಿಸುತ್ತಾರೆ.[೩೩] ಈ ವರುಣನು ಮಕರದ ಮೇಲೆ ಕುಳಿತು ಗದೆಯನ್ನು ಹಿಡಿದಿರುವನೆಂದು ಆರ್. ಡಿ. ಬ್ಯಾನರ್ಜಿ ಹೇಳುತ್ತಾರೆ.[೩೪] ಎಸ್. ವ್ಹಿ. ಪಾಡಿಗಾರರು ದಿಕ್ಪಾಲನು ಹಿಡಿದಿರುವ ಆಯುಧವು ಗದೆ ಎಂದು ಒಪ್ಪಿಕೊಳ್ಳುತ್ತ, ಅದು ಯಮನ ಪ್ರತಿಮೆಯೆಂಬ ನಿಲುವು ತಾಳುತ್ತಾರೆ. ಅಲ್ಲಿರುವ ಮಕರ ಮುಖಗಳು ಸಿಂಹಾಸನದ ಅಲಂಕೃತ ಭಾಗವೆಂದು ಹೇಳಿ ಅವು ದಿಕ್ಪಾಲನ ವಾಹನವನ್ನು ಸೂಚಿಸುತ್ತಿಲ್ಲವೆಂದು ಖಚಿತ ಪಡಿಸುತ್ತಾರೆ. ದಂಡ ನೀಡುವ ದಿಕ್ಪಾಲನಾದ ಯಮನ ಕೈಯಲ್ಲಿ ರೂವಾರಿಯು ಗದೆಯನ್ನು ನೀಡಿರಬಹುದಾಗಿದೆ. ಹಾಗಾಗಿ ಪ್ರಸ್ತುತ ಶಿಲ್ಪವು ಯಮನದೆಂದು ತಿಳಿಯಬಹುದು. ಅಂಕಣದ ಉಳಿದ ಭಾಗವೆಲ್ಲ ಕಿನ್ನರರು, ಗಂಧರ್ವರು, ಮತ್ತು ಜ್ಯಾಮಿತಿ ನಕ್ಷೆಗಳಿಂದ ಅಲಂಕೃತವಾಗಿವೆ.

ಎರಡನೆಯ ಅಂಕಣವು ಇಂದ್ರನಿಗೆ ಮೀಸಲಾಗಿದೆ. ದೊಡ್ಡದಾದ ವರ್ತುಲವು ಚೌಕ ಅಂಕಣದ ಬದಿಗಳನ್ನು ಸ್ಪರ್ಶಿಸಿದೆ. ಅದರೊಳಗೆ ಇನ್ನೊಂದು ಸಣ್ಣ ವೃತ್ತವಿದೆ. ಈ ಎರಡು ವರ್ತುಲಗಳ ನಡುವಿನ ಅವಕಾಶದಲ್ಲಿ ಇನ್ನೂ ಚಿಕ್ಕದಾದ ಎಂಟು ವರ್ತುಲಗಳನ್ನು ಸಂಯೋಜಿಸಲಾಗಿದೆ ಅಂಕಣದ ಮಧ್ಯದಲ್ಲಿ ಮತ್ತೊಂದು ವೃತ್ತವಿದೆ. ಇದರಲ್ಲಿ ಆನೆಯ ಮೇಲೆ ಆಸೀನನಾದ ಇಂದ್ರನ ಮೂರ್ತಿಯನ್ನು ಕಡೆಯಲಾಗಿದೆ. ಇಂದ್ರನ ಹಿಂದೆ ಪರಿಚಾರಕನೊಬ್ಬ ಕೊಡೆಯನ್ನು ಎತ್ತಿ ಹಿಡಿದಿರುವನು. ನಡುವಿನ ವರ್ತುಲವನ್ನು ಸುತ್ತುವರೆದ ಚಿಕ್ಕ ವೃತ್ತಗಳಲ್ಲಿ ಸಂಗೀತಗಾರ, ನರ್ತಕರ ಉಬ್ಬುಗೆತ್ತನೆಗಳಿವೆ. ಇವರು ಗಂಧರ್ವರು. ಇಂದ್ರನ ವೈಭವವನ್ನು ಶಿಲ್ಪಿಯು ಚೆನ್ನಾಗಿ ಚಿತ್ರಿಸಿದ್ದಾನೆ.

ಮೂರನೆಯ ಅಂಕಣದಲ್ಲಿ ದಿಕ್ಪಾಲರಿಲ್ಲ. ನಾಲ್ಕನೆಯ ಅಂಕಣವು ಮಧ್ಯದ ಅಂಕಣವಾಗಿದೆ. ಹಾಗಾಗಿ ಅದನ್ನು ಹೆಚ್ಚು ಕಲಾಪೂರ್ಣವಾಗಿ ಬಿಡಿಸಲಾಗಿದೆ. ಶಂಖ ಮತ್ತು ಚಕ್ರಧಾರಿ ವಿಷ್ಣು ಕೇಂದ್ರ ಸ್ಥಾನದಲ್ಲಿದ್ದಾನೆ. ಇದು ವಿಷ್ಣು ಗೃಹವಷ್ಟೆ. ಆತನ ಸುತ್ತಲಿರುವ ಎಂಟು ಸಣ್ಣ ವೃತ್ತಗಳಲ್ಲಿ ದಿಕ್ಪಾಲರ ಕಂಡರಣೆಯಿದೆ. ಆದರೆ ಅವರಲ್ಲಿ ಕೆಲವರು ತಮ್ಮದಲ್ಲದ ದಿಕ್ಕುಗಳಲ್ಲಿ ಕಾಣಿಸಿಕೊಂಡಿದ್ದಾರೆ. ಅಂದರೆ ಚಲುಕ್ಯರ ಅವಧಿಯಲ್ಲಿ ದಿಕ್ಪಾಲರ ದಿಕ್ಕುಗಳಿಗೆ ಸಂಬಂಧಿಸಿದಂತೆ ಶಿಲ್ಪ ನಿರೂಪಣೆಯಲ್ಲಿ ನಿರ್ದಿಷ್ಟತೆ ಇರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಈ ದಿಕ್ಪಾಲರಲ್ಲಿ ನಿರುತಿ ಇಲ್ಲ. ಆತನ ಜಾಗೆಯಾದ ನೈಋುತ್ಯ ವಿದಿಕ್ಕಿನಲ್ಲಿ ಈಶಾನನ ಮೂರ್ತಿಯಿದೆ. ಈಶಾನನು ಇರಬೇಕಾದ ಈಶಾನ್ಯ ಉಪದಿಕ್ಕಿನಲ್ಲಿ ಅಗ್ನಿಯನ್ನು ರೂಪಿಸಿದ್ದಾರೆ. ಆತನ ಸ್ಥಳವಾದ ಆಗ್ನೇಯದಲ್ಲಿ ದಿಕ್ಪಾಲನಲ್ಲದ ಬ್ರಹ್ಮನ ಶಿಲ್ಪವನ್ನು ಬಿಡಿಸಿದ್ದಾರೆ.! ಉಳಿದ ದಿಕ್ಪಾಲರಾದ ಯಮ, ಇಂದ್ರ, ಕುಬೇರ, ವಾಯು ಮತ್ತು ವರುಣರು ಮಾತ್ರ

[೩೩] Cave temples of the Deccan, p. 63

[೩೪] Basreliefs of Badami, Calutta p. 56



**ಚಿತ್ರ ೮೩. ದಿಕ್ಪಾಲರು, ಮಹಾವಿಷ್ಣುಗೃಹ, ವಿತಾನ**

ಕ್ರಮವಾಗಿ ತಮ್ಮದೇ ದಿಕ್ಕುಗಳಾದ ದಕ್ಷಿಣ, ಪೂರ್ವ, ಉತ್ತರ, ವಾಯವ್ಯ, ಮತ್ತು ಪಶ್ಚಿಮಗಳಲ್ಲಿದ್ದಾರೆ. (**ಚಿತ್ರ ೮೩**)

ಐದನೆಯ ಅಂಕಣದ ಶಿಲ್ಪ ಸಂಯೋಜನೆಯು, ನಾಲ್ಕನೆಯ ಅಂಕಣದಂತೆಯೇ ಇದೆ. ಇಲ್ಲಿ ಮಧ್ಯದ ವೃತ್ತದಲ್ಲಿ ಬ್ರಹ್ಮನಿದ್ದಾನೆ. ಸುತ್ತಲೂ ಎಂಟು ಸಣ್ಣ ವರ್ತುಲಗಳಿದ್ದು . ಪ್ರಧಾನ ದಿಕ್ಕುಗಳಲ್ಲಿ ದಿಕ್ಪಾಲರನ್ನು ಮತ್ತು ವಿದಿಕ್ಕುಗಳಲ್ಲಿ ಗಂಧರ್ವ ಜೋಡಿಗಳನ್ನು ಕೊರೆದಿರುವರು. ಪೂರ್ವದ ವರ್ತುಲದಲ್ಲಿ ಇಂದ್ರನು ಐರಾವತದ ಮೇಲಿದ್ದಾನೆ. ದಕ್ಷಿಣದ ವೃತ್ತದಲ್ಲಿ ಕೋಣನ ಮೇಲೆ ಯಮನಿದ್ದಾನೆ. ಪಶ್ಚಿಮದ ಬದಿಯಲ್ಲಿ ಮಕರಾರೂಢ ವರುಣನಿದ್ದಾನೆ. ಉತ್ತರದ ವರ್ತುಲದಲ್ಲಿ ಕುಬೇರನಿದ್ದಾನೆ. ಹೀಗೆ ಪ್ರಧಾನ ದಿಕ್ಕುಗಳಲ್ಲಿ ದಿಕ್ಪಾಲರ ಜೋಡಣೆ ಸರಿಯಾಗಿದೆ. ಹಿಂದಿನ ಶಿಲ್ಪ ರಚನೆಯಲ್ಲಿಯೂ ಈ ದಿಕ್ಕುಗಳ ಹಂಚಿಕೆ ಕ್ರಮಬದ್ಧವಾಗಿದೆ. ಮುಖ್ಯ ದಿಕ್ಕುಗಳಲ್ಲಿ ದಿಕ್ಪಾಲರನ್ನು ಹೊಂದಿಸುವಲ್ಲಿ ರೂವಾರಿಗಳು ಎಡವಿಲ್ಲ. ಆದರೆ ವಿದಿಕ್ಕುಗಳಲ್ಲಿ ದಿಕ್ಪಾಲರನ್ನು ಕೂಡಿಸುವಲ್ಲಿ ಗೊಂದಲಕ್ಕೀಡಾಗಿದ್ದಾರೆ.

ಚಲುಕ್ಯರ ರಾಜನಿಕ ದೇಗುಲಗಳಲ್ಲಿ ಸಭಾಮಂಟಪದ ಅಲಂಕರಣೆಗಾಗಿ ಅಷ್ಟದಿಕ್ಪಾಲರನ್ನು ಚೆನ್ನಾಗಿ ಬಳಸಿಕೊಂಡಿದ್ದಾರೆ. ಅಂಕಣವನ್ನು ಒಂಬತ್ತು ಭಾಗಗಳನ್ನಾಗಿ ಮಾಡಿ ಮಧ್ಯದಲ್ಲಿ ತ್ರಿಮೂರ್ತಿಗಳಲ್ಲಿ ಒಬ್ಬನನ್ನು ಕೂಡಿಸಿ ಆತನ ಸುತ್ತ ನಾಲ್ಕು ಇಲ್ಲವೆ ಎಂಟು ದಿಕ್ಪಾಲರನ್ನು ಸಂಯೋಜಿಸಿದ್ದಾರೆ. ಮತ್ತು ಅಂಕಣದ ಉಳಿದ ಭಾಗವನ್ನು ಪುಷ್ಪ ನಕ್ಷೆ ಇಲ್ಲವೆ ಗಂಧರ್ವರ ಜೋಡಿಗಳಿಂದ ಸಿಂಗರಿಸಿದ್ದಾರೆ. ದಿಕ್ಪಾಲರ ದಿಕ್ಕುಗಳಿಗೆ ಸಂಬಂಧಿಸಿದಂತೆ ಯಾವ ನಿರ್ದಿಷ್ಟತೆಯೂ ಇರಲಿಲ್ಲವೆಂಬುದನ್ನು ಅವನ್ನು ಹೊಂದಿಸಿದ ಕ್ರಮದಿಂದ ತಿಳಿಯಬಹುದು. ಐಹೊಳೆಯ ಹುಚ್ಚಿಮಲ್ಲಿ ಗುಡಿಯ ಸಭಾಮಂಟಪದ ವಿತಾನದಲ್ಲಿ ಪೂರ್ವದ ಆಯತಾಕಾರದ ಚೌಕಟ್ಟಿನಲ್ಲಿ ಇಂದ್ರನು ಆನೆಯ ಮೇಲೆ ಪತ್ನಿಯೊಂದಿಗೆ ಆಸೀನನಾಗಿದ್ದಾನೆ. ಆತನು ತನ್ನ ದಿಕ್ಕನ್ನು ರಕ್ಷಿಸುತ್ತಿದ್ದಾನೆ. ಆದರೆ ಈಶಾನನು ತನ್ನದಲ್ಲದ ಪಶ್ಚಿಮ ದಿಕ್ಕಿನಲ್ಲಿ ನಂದಿಯ ಮೇಲೆ ಸಪತ್ನೀಕನಾಗಿ ಕುಳಿತಿದ್ದಾನೆ. ದಿಕ್ಪಾಲರಲ್ಲದ ಬ್ರಹ್ಮ, ವಿಷ್ಣು, ಮೂರ್ತಿಗಳನ್ನು ಕ್ರಮವಾಗಿ ಉತ್ತರ ಮತ್ತು ದಕ್ಷಿಣ ಚೌಕಟ್ಟುಗಳಲ್ಲಿ ಕೂಡಿಸಲಾಗಿದೆ. ಈ ಎಲ್ಲ ಶಿಲ್ಪಗಳು ಉತ್ತಮ ಕೆತ್ತನೆಗೆ ಉದಾಹರಣೆಗಳಾಗಿದ್ದರೂ ಕಾಲನ ಕಾಟಕ್ಕೆ ಸಿಲುಕಿ ಹಾಳಾಗಿವೆ.

ಚಲುಕ್ಯರ ಗುಹಾಲಯಗಳಲ್ಲಿ ದಿಕ್ಪಾಲರನ್ನು ವರ್ತುಲಗಳಲ್ಲಿ ಸಂಯೋಜಿಸಲಾಗಿದೆ. ರಾಜನಿಕ ಮಂದಿರಗಳಲ್ಲಿ ಇವರನ್ನು ಚೌಕಾಕಾರದ ಇಲ್ಲವೆ ಆಯತಾಕಾರದ ಚೌಕಟ್ಟುಗಳನ್ನು ಕಂಡರಿಸಿ ವಿತಾನವನ್ನು ಸಿಂಗರಿಸಿದ್ದಾರೆ. ಇದು ಗಮನಾರ್ಹ ಸಂಗತಿ.

ಮಹಾಕೂಟದ ಮಲ್ಲಿಕಾರ್ಜುನ ದೇವಾಲಯದ ಸಭಾಮಂಟಪದ ವಿತಾನದ ನಡುವಿನ ಅಂಕಣವು ಬ್ರಹ್ಮನ ಉಬ್ಬು ಶಿಲ್ಪದಿಂದ ಅಲಂಕೃತವಾಗಿದೆ. ಈ ಬಗೆಯ ಅಲಂಕರಣವು ಮಹಾಕೂಟದ ಗುಡಿ ಗುಂಪಿನಲ್ಲಿ ಕಾಣಸಿಗುವ ಏಕೈಕ ಉದಾಹರಣೆ. ಅಂಕಣವು ಚೌಕಾಕಾರವಾಗಿದ್ದು, ಅದರ ಮೂಲೆಗಳಲ್ಲಿ ಇಂದ್ರ, ಅಗ್ನಿ, ವರುಣ ಮತ್ತು ಯಮ ಇವರ ಶಿಲ್ಪಗಳನ್ನು ಕೆತ್ತಲಾಗಿದೆ.

ನಾಗರಾಳದ ನಾಗನಾಥ ದೇವಾಲಯದಲ್ಲಿಯೂ ಇದೇ ಬಗೆಯ ಸಂಯೋಜನೆಯಿದೆ. ಮಂಟಪದ ಚತ್ತಿನ ಮಧ್ಯದ ಅಂಕಣದಲ್ಲಿ ಬ್ರಹ್ಮನಿದ್ದಾನೆ. ದೀರ್ಘ ಆಯತಾಕಾರದ ಚೌಕಟ್ಟುಗಳಲ್ಲಿ ಇವೇ ನಾಲ್ಕು ದಿಕ್ಪಾಲರಿದ್ದಾರೆ. ಇವರು ಪ್ರಧಾನ ದಿಕ್ಕುಗಳಲ್ಲಿ ಮೂಡಿಬಂದಿದ್ದಾರೆ. ಪೂರ್ವದ ಚೌಕಟ್ಟಿನಲ್ಲಿ ಐರಾವತದ ಮೇಲೆ ಕುಳಿತ ಇಂದ್ರನ ಉಬ್ಬು ಶಿಲ್ಪವಿದೆ. ಪಶ್ಚಿಮ ಬದಿಯಲ್ಲಿ ಮಕರಾರೂಢ ವರುಣನಿದ್ದಾನೆ. ದಕ್ಷಿಣದ ಚೌಕಟ್ಟಿನಲ್ಲಿ ಮೇಷನ ಮೇಲೆ ಅಗ್ನಿ ಕುಳಿತಿರುವನು. ಉತ್ತರ ಚೌಕಟ್ಟಿನಲ್ಲಿ ಕೋಣನ ಮೇಲೆ ಕುಳಿತ ಯಮನನ್ನು ಶಿಲ್ಪಿಸಲಾಗಿದೆ. ಈ ದಿಕ್ಪಾಲರ ಮೂರ್ತಿಗಳು ಲಕ್ಷಣವಾಗಿ, ಕಲಾತ್ಮಕವಾಗಿ ಮೂಡಿಬಂದಿವೆ. ಇಲ್ಲಿ ಅಗ್ನಿ ಮತ್ತು ಯಮ ತಮ್ಮದಲ್ಲದ ದಿಕ್ಕುಗಳಲ್ಲಿ ಕಾಣಿಸಿಕೊಂಡಿದ್ದಾರೆ.

ಬಾದಾಮಿಯಲ್ಲಿ ಕ್ರಿ.ಶ. ೬೯೯ರಲ್ಲಿ ನಿರ್ಮಾಣಗೊಂಡ ಜಂಬುಲಿಂಗ ದೇವಾಲಯವು ದಕ್ಷಿಣ ಭಾರತದ ಮೊದಲ ತ್ರಿಕೂಟಾಲಯವೆನಿಸಿದೆ. ಅದರ ಉತ್ತರ ಬದಿಯ, ಗರ್ಭಗೃಹವು ವಿಷ್ಣುವಿನದು. ಇದಕ್ಕೆ ಹೊಂದಿಕೊಂಡ ವಿತಾನದಲ್ಲಿ ಬೃಹದಾಕಾರದ ಮತ್ಸ್ಯಚಕ್ರವಿದೆ. ಈ ಅಂಕಣದ ವಿದಿಕ್ಕುಗಳಲ್ಲಿ ದಿಕ್ಪಾಲರಿದ್ದಾರೆ. ಈಶಾನ್ಯ ಮೂಲೆಯಲ್ಲಿ ಐರಾವತಾರೂಢ ಇಂದ್ರನಿದ್ದಾನೆ. ಆಗ್ನೇಯದಲ್ಲಿ ಕೋಣನ ಮೇಲೆ ಕುಳಿತ ಗದಾಧಾರಿ ಯಮನಿದ್ದಾನೆ. ನೈಋತ್ಯಕ್ಕೆ ಅಗ್ನಿಯು ಟಗರಿನ ಮೇಲೆ ಗದೆಯೊಂದಿಗೆ ಕುಳಿತಿದ್ದಾನೆ. ವಾಯವ್ಯದಲ್ಲಿ ಮಕರಾರೂಢ ವರುಣನಿದ್ದಾನೆ. ಶಿಲ್ಪಿಯು ದಿಕ್ಪಾಲರ ಸ್ಥಳದಾಯ್ಕೆಯಲ್ಲಿ ಇಲ್ಲಿಯೂ ಗೊಂದಲಕ್ಕೀಡಾಗಿದ್ದಾನೆ.

ಹುಚ್ಚಪ್ಪಯ್ಯನ ಗುಡಿಯಲ್ಲಿ ದಿಕ್ಪಾಲರ ಕೆತ್ತನೆಗಾಗಿ ಆಯ್ದ ವಾಸ್ತುಭಾಗವು ವಿಭಿನ್ನವಾಗಿದೆ. ಸಭಾಮಂಟಪದ ತೊಲೆಯ ಒಳ ಮಗ್ಗಲು ಈಶಾನ್ಯದಲ್ಲಿ ಈಶಾನ, ಪೂರ್ವದಲ್ಲಿ ಐರಾವತನೇರಿದ ಇಂದ್ರ ಮತ್ತು ಆಗ್ನೇಯದಲ್ಲಿ ಅಶ್ವಾರೋಹಿ ಕುಬೇರರ ವಿಗ್ರಹಗಳನ್ನು ಸಂಯೋಜಿಸಿದ್ದಾರೆ. ಇನ್ನೊಂದು ತೊಲೆಯ ಒಳಬದಿಯಲ್ಲಿ ಉತ್ತರಕ್ಕೆ ಟಗರಿನ ಮೇಲೆ ಅಗ್ನಿ, ದಕ್ಷಿಣಕ್ಕೆ ಕೋಣನ ಮೇಲೆ ಯಮ ಮತ್ತು ವಾಯವ್ಯದಲ್ಲಿ ಜಿಂಕೆ ಮೇಲೆ ವಾಯು ಇರುವರು. ಕಲಾವಿದನು ಕುಬೇರನ ಸ್ಥಾನದಲ್ಲಿ ಅಗ್ನಿಯನ್ನು ಮತ್ತು ಅಗ್ನಿಯ ದಿಕ್ಕಿನಲ್ಲಿ ಕುಬೇರನನ್ನು ಕಟೆದಿರುವನು. ತೊಲೆಯು ಭಾಗಶಃ ತುಂಡಾಗಿದೆ. ಅದರಿಂದಾಗಿ ಇಬ್ಬರು ದಿಕ್ಪಾಲರು ಕಾಣದಾಗಿದ್ದಾರೆ.

ಕೊಂತಗುಡಿ ನಂ.೨.ರಲ್ಲಿನ ಮೇಲ್ಗಂಡು ಕಲಾತ್ಮಕವಾಗಿದೆ. ಆದರೆ ಬಹುಪಾಲು ನಶಿಸಿಹೋಗಿದೆ. ಮಧ್ಯದಲ್ಲಿ ಬ್ರಹ್ಮನ ಉಬ್ಬುಶಿಲ್ಪವಿದೆ. ಆತನನ್ನು ಸುತ್ತುವರೆದ ದಿಕ್ಪಾಲರು ದಿಕ್ಕು ತಪ್ಪಿದ್ದಾರೆ. ಪೂರ್ವದ ಚೌಕಟ್ಟಿನಲ್ಲಿ ಆನೆಯ ಮೇಲೆ ಆಸೀನನಾದ ಇಂದ್ರನಿದ್ದಾನೆ. ಜೊತೆಗೆ ಇಂದ್ರಾಣಿಯೂ ಇದ್ದಾಳೆ. ದಕ್ಷಿಣದಲ್ಲಿ ಮಹಿಷಾರೂಢನಾದ ಯಮನಿದ್ದಾನೆ. ಉತ್ತರದ ಚೌಕಟ್ಟಿನಲ್ಲಿ ಅಗ್ನಿಯು ಟಗರಿನ ಮೇಲೆ ಕುಳಿತಿರುವನು. ಆಗ್ನೇಯದಲ್ಲಿ ಉತ್ತರ ದಿಕ್ಕಿನ ಅಧಿಪತಿಯಾದ ಕುಬೇರನಿದ್ದಾನೆ. ಅಂದರೆ ಅಗ್ನಿ ಮತ್ತು ಕುಬೇರರ ಸ್ಥಾನಗಳು ಅದಲು ಬದಲಾಗಿವೆ. ಈಶಾನನು ಸ್ವಸ್ಥಾನ ಈಶಾನ್ಯದಲ್ಲಿ ನೆಲೆಸಿರುವನು. ನಶಿಸಿ ಹೋಗಿದ್ದರಿಂದ ಇನ್ನುಳಿದ ದಿಕ್ಪಾಲರನ್ನು ಗುರುತಿಸಲಾಗದು.

ಜ್ಯೋತಿರ್ಲಿಂಗ ಗುಡಿ ಸಮುಚ್ಚಯದಲ್ಲಿ ಐದನೆಯದು ಚಿಕ್ಕಗುಡಿ. ಇದು ಬಹುಮಟ್ಟಿಗೆ ನಾಶವಾಗಿದೆ. ನಂದಿ ಮಂಟಪ ಮತ್ತು ಮಂಟಪದ ಭಾಗಗಳು ಉಳಿದಿವೆ. ಮಂಟಪದ

ವಿತಾನವು ಒಂಬತ್ತು ಆಯತಗಳಾಗಿ ವಿನ್ಯಾಸಗೊಂಡಿದ್ದು , ಮಧ್ಯದಲ್ಲಿ ಶಿವನು ತನ್ನ ಪರಿವಾರದೊಂದಿಗೆ ಕೆತ್ತನೆಗೊಂಡಿದ್ದಾನೆ. ಶಿವ ಪಾರ್ವತಿಯರು ನಂದಿಯ ಮೇಲಿದ್ದರೆ, ಗಣಪತಿ ಮತ್ತು ಕಾರ್ತಿಕೇಯರು ಪಕ್ಕದಲ್ಲಿದ್ದಾರೆ. ಪೂರ್ವ ಬದಿಯಲ್ಲಿ ಇಂದ್ರ, ಇಂದ್ರಾಣಿಯರು ಐರಾವತದ ಮೇಲಿದ್ದಾರೆ. ಉತ್ತರದಲ್ಲಿ ಕುಬೇರನು ಕುದುರೆಯ ಮೇಲೆ ಪತ್ನಿಯೊಂದಿಗೆ ಕುಳಿತಿದ್ದಾನೆ. ದಕ್ಷಿಣದಲ್ಲಿ ಕೋಣನ ಮೇಲೆ ಯಮನು ಮಡದಿಯೊಂದಿಗಿದ್ದಾನೆ. ಇವರೆಲ್ಲರೂ ಸಪತ್ನೀಕರಾಗಿ ಬಿಂಬಿತರಾಗಿದ್ದಾರೆ. ಪಶ್ಚಿಮ ಬದಿಯ ಶಿಲ್ಪ ಪಟ್ಟಿಕೆ ಕಾಣೆಯಾಗಿದೆ. ಅಲ್ಲಿ ವರುಣನಿದ್ದಿರಬೇಕು. ಹಾಗಿದ್ದಲ್ಲಿ ನಾಲ್ವರೂ ದಿಕ್ಪಾಲರು ತಮ್ಮ ದಿಕ್ಕುಗಳಲ್ಲಿ ನಿರೂಪಿತರಾಗಿದ್ದಾರೆಂದು ಹೇಳಬಹುದು. ವಿದಿಕ್ಕುಗಳಲ್ಲಿ ಪದ್ಮ ಪುಷ್ಪಗಳ ಅಲಂಕರಣೆಯಿದೆ.

ನಾಗರಾಳದ ನಾಗನಾಥಗುಡಿ ಮತ್ತು ಐಹೊಳೆಯ ಹುಚ್ಚಿಮಲ್ಲಿ ದೇವಾಲಯಗಳಲ್ಲಿ ದಿಕ್ಪಾಲರ ಉಬ್ಬುಶಿಲ್ಪಗಳನ್ನು ಪ್ರಧಾನ ದಿಕ್ಕುಗಳಾದ ಪೂರ್ವ, ಪಶ್ಚಿಮ, ಉತ್ತರ ಮತ್ತು ದಕ್ಷಿಣಗಳಲ್ಲಿ ಸಂಯೋಜಿಸಿದ್ದಾರೆ. ಬಾದಾಮಿಯ ಜಂಬುಲಿಂಗ ಗುಡಿಯಲ್ಲಿ ವಿದಿಕ್ಕುಗಳಲ್ಲಿ ಮಾತ್ರ ದಿಕ್ಪಾಲರ ಕಂಡರಣೆ ಇದೆ! ಪ್ರಧಾನ ದಿಕ್ಕುಗಳಲ್ಲಿಲ್ಲ . ಹುಚ್ಚಪ್ಪಯ್ಯ ಗುಡಿಯಲ್ಲಿ ಎಂಟು ದಿಕ್ಕುಗಳಲ್ಲಿಯೂ ಪಾಲಕರನ್ನು ಕೂಡಿಸುವ ಪ್ರಯತ್ನ ಮಾಡಲಾಗಿದೆ. ಅಲ್ಲಿ ಸದ್ಯಕ್ಕೆ ಎರಡು ದಿಕ್ಪಾಲರು ಕಾಣದಂತಾಗಿದ್ದಾರೆ. ಅದರಂತೆ ಕೊಂತಗುಡಿ ೨ ರಲ್ಲಿ ಕೇವಲ ಐದು ದಿಕ್ಪಾಲರನ್ನು ಗುರುತಿಸಲು ಸಾಧ್ಯ. ಆದರೆ ಈ ಎರಡೂ ಗುಡಿಗಳಲ್ಲಿ ಆಗ್ನೇಯದಲ್ಲಿ ಕುಬೇರನೂ, ಉತ್ತರದಲ್ಲಿ ಅಗ್ನಿಯೂ ಶಿಲ್ಪಿತರಾಗಿದ್ದಾರೆ.

ಪಾಪನಾಥ ದೇವಾಲಯದ ನಂದಿಮಂಟಪದ ಮೇಲ್ಛಾವಣಿಯಲ್ಲಿ ಮಾತ್ರ ದಿಕ್ಪಾಲರು ಶಿಲ್ಪಶಾಸ್ತ್ರ ಗ್ರಂಥಗಳು ಸೂಚಿಸಿರುವಂತೆ ತಮ್ಮ ನಿರ್ದಿಷ್ಟ ದಿಕ್ಕುಗಳಲ್ಲಿ ಕಂಡು ಬರುತ್ತಾರೆ. ಪಾಪನಾಥ ದೇವಾಲಯವು ರೇವಡಿ ಓವಜ ಎಂಬ ಸ್ಥಪತಿಯ ವಾಸ್ತು ನಿರ್ಮಿತಿಯಾಗಿದೆ. ಈತನು ವಿರೂಪಾಕ್ಷ ದೇವಾಲಯದ ವಾಸ್ತು ವಿಜ್ಞಾನಿಯಾದ ಸರ್ವಸಿದ್ಧಿ ಆಚಾರಿಯ ಶಿಷ್ಯ. ಪಾಪನಾಥ ಗುಡಿಯು ವಿರೂಪಾಕ್ಷ ದೇವಾಲಯದ ನಂತರ ಪೂರ್ಣಗೊಂಡಿದ್ದರಿಂದ ಅದರ ಕಾಲವನ್ನು ಸುಮಾರು ಕ್ರಿ.ಶ. ೭೫೦ ಎಂದು ಹೇಳಬಹುದು. ಅಂದರೆ ಈ ಅವಧಿಗೆ ಶಿಲ್ಪಗಳಲ್ಲಿ ಅಷ್ಟದಿಕ್ಪಾಲರು ತಮಗೆ ನಿಗದಿ ಪಡಿಸಿದ ದಿಕ್ಕುಗಳಲ್ಲಿ ಕಾಣಿಸಿಕೊಳ್ಳ ತೊಡಗಿದರೆಂದು ತೀರ್ಮಾನಿಸಬಹುದು.

## ೯. ಗಂಧರ್ವರು ಮತ್ತು ಕಿನ್ನರರು

### ಅ. ಗಂಧರ್ವರು

ಭಾರತೀಯ ಪ್ರಾಚೀನ ಸಾಹಿತ್ಯ ಪ್ರಕಾರಗಳಾದ ಪುರಾಣ, ಮಹಾಕಾವ್ಯಗಳಲ್ಲಿ ಹಲವು ಬಗೆಯ ಅರೆದೈವರನ್ನು ಕಾಣುತ್ತೇವೆ. ಅವರಲ್ಲಿ ಗಂಧರ್ವರು ದೇವಲೋಕದ ಗಾಯಕರು. ಇವರು ಅಂತಸ್ತಿನಲ್ಲಿ ವಿದ್ಯಾಧರರಿಗಿಂತ ಕೆಳಗಿನವರು.[೩೫] ಗಂಧರ್ವ ಶಬ್ದವು ಋಗ್ವೇದದಲ್ಲಿ ಪ್ರಸ್ತಾಪಿತವಾಗಿದೆ.[೩೬] ಗಂಧರ್ವರು ಸುಂದರ ರೂಪ ತಳೆದು ಭೂಲೋಕದ ಸ್ತ್ರೀಯರನ್ನು ವಶೀಕರಣ ಮಾಡುವವರೆಂದು ಅಥರ್ವವೇದದಲ್ಲಿ ಹೇಳಲಾಗಿದೆ.[೩೭] ಗಂಧರ್ವರ ಮೂಲದ ಬಗ್ಗೆ ಏಕಾಭಿಪ್ರಾಯವಿಲ್ಲ. ಕೆಲವು ಪುರಾಣಗಳು ಇವರು ಬ್ರಹ್ಮನಿಂದ ಜನಿಸಿದವರೆಂದೂ, ಇನ್ನೂ ಕೆಲವು ಇವರು ಕಾಶ್ಯಪ ಮುನಿಯ ಸಂತಾನವೆಂದೂ ಬಣ್ಣಿಸಿವೆ. ಪುರಾಣಗಳಲ್ಲಿ ವರ್ಣಿತರಾದಂತೆ ಇವರು ಸ್ವರ್ಗಲೋಕದ ಸಂಗೀತಗಾರರು. ಇಂದ್ರನ ಸಭೆಯಲ್ಲಿ ಇವರದೇ ವಾದ್ಯಗೋಷ್ಠಿ. ಗಂಧರ್ವರಿಂದಾಗಿ ಸಂಗೀತವು ಗಾಂಧರ್ವ ವಿದ್ಯೆ ಎನಿಸಿದೆ. ಇದು ಉಪವೇದವೆಂದು ಮನ್ನಣೆ ಪಡೆದಿದೆ.

ಗಂಧರ್ವರು ರಸಿಕರು. ಅಪ್ಸರೆಯರು ಇವರ ಮಡದಿಯರು. ತಿಲೋತ್ತಮೆ, ಊರ್ವಶಿ, ರಂಭೆಯರು ಪ್ರಸಿದ್ಧ ಗಂಧರ್ವಿಯರು. ಚಲುಕ್ಯ ರೂವಾರಿಗಳು ಸೃಷ್ಟಿಸಿದ

[೩೫] Ramachandra Rao, S. K., op.cit., p.450

[೩೬] ಕನ್ನಡ ವಿಶ್ವಕೋಶ, ಸಂಪುಟ ೫, ಪು. ೯೧೨

[೩೭] Gopinatha Rao, T. A., Elements of Hindu Iconography VoI, II, Part II, P.568



**ಚಿತ್ರ ೮೪. ಇಂದ್ರ ಮತ್ತು ಗಂಧರ್ವರು, ವಿತಾನ, ಮಹಾವಿಷ್ಣು ಗೃಹ**

ಕಥಾನಕ ಶಿಲ್ಪಗಳಲ್ಲಿ ಸಾಂದರ್ಭಿಕವಾಗಿ ಇವರು ಮೂಡಿ ಬಂದಿದ್ದಾರೆ. ಗಂಧರ್ವರ ಮೂರ್ತಿಗಳ ವರ್ಣನೆ ಆಗಮಗಳಲ್ಲಿಲ್ಲ. ಹಾಗಾಗಿ ಖಚಿತವಾಗಿ ಗಂಧರ್ವ ಶಿಲ್ಪಗಳ ಲಕ್ಷಣಗಳನ್ನು ಹೇಳಲು ಸಾಧ್ಯವಾಗುವದಿಲ್ಲ. ಆದರೆ ಅವರು ಸುಂದರಾಂಗರಾಗಿ, ವಸ್ತ್ರಾಭರಣ ಭೂಷಿತರಾಗಿ, ಆಕಾಶ ವಿಹಾರಿಗಳಾಗಿ ಶಿಲ್ಪಿತರಾಗಿರುತ್ತಾರೆ.

ಚಲುಕ್ಯ ರೂವಾರಿಗಳು ಗುಹಾಲಯ ಮತ್ತು ರಾಚನಿಕ ದೇವಾಲಯಗಳ ಚತ್ತುಗಳನ್ನು ಬಗೆ ಬಗೆಯ ಶಿಲ್ಪಗಳಿಂದ ಸಿಂಗರಿಸಿದ್ದಾರೆ. ಅವುಗಳಲ್ಲಿ ಗಂಧರ್ವರ ಜೋಡಿಗಳ ಕೆತ್ತನೆಯನ್ನು ಅಳವಡಿಸಿದ್ದಾರೆ. ರಾವಲಫಡಿಯ ಸಭಾಮಂಟಪದ ಚತ್ತು ವ್ಯಾಪಕವಾದ ಮತ್ತು ಸಂಕೀರ್ಣವಾದ ಉಬ್ಬುಗೆತ್ತನೆಯಿಂದ ಅಲಂಕೃತವಾಗಿದೆ. ಮಧ್ಯದಲ್ಲಿ ಬೃಹದಾಕಾರದ, ವೃತ್ತಾಕಾರದ ಪದ್ಮಪುಷ್ಪವಿದೆ. ಅದನ್ನು ಎರಡು ಚೌಕುಗಳು ಆವರಿಸಿವೆ. ಅವುಗಳ ನಡುವಿನ ಅಂತರದಲ್ಲಿ ಗಂಧರ್ವ ದಂಪತಿಗಳಿದ್ದಾರೆ. ಹಾಗೆಯೇ ಬಾದಾಮಿಯಲ್ಲಿ ಮಹಾವಿಷ್ಣು ಗೃಹದ ಒಂದು ಅಂಕಣದ ಮಧ್ಯದಲ್ಲಿ ಇಂದ್ರನಿದ್ದಾರೆ. ಆತನ ಸುತ್ತ ಎಂಟು ಸಣ್ಣ ವರ್ತುಲಗಳಿವೆ. ಒಂದು ವರ್ತುಲದಲ್ಲಿ ಒಬ್ಬ ಗಂಧರ್ವ ಕುಳಿತು ಹಾಡುತ್ತಿದ್ದರೆ, ನಾಲ್ವರು ಬೇರೆ ಪ್ರತ್ಯೇಕ ವರ್ತುಲಗಳಲ್ಲಿ ನರ್ತಿಸುತ್ತಿದ್ದಾರೆ. ಮೂರು ವರ್ತುಲಗಳಲ್ಲಿ ಕೊಳಲು, ಮೃದಂಗ, ತ್ರಿಪುಷ್ಕರ ವಾದ್ಯ ನುಡಿಸುವ ಗಂಧರ್ವರು ಪ್ರತ್ಯೇಕ ವೃತ್ತಗಳಲ್ಲಿದ್ದಾರೆ. **(ಚಿತ್ರ ೮೪)**

ರಾಚನಿಕ ಮಂದಿರಗಳಲ್ಲಿ ಕೂಡ ವಿತಾನದ ಅಲಂಕಾರಕ್ಕಾಗಿ ಗಂಧರ್ವರ ಪ್ರತಿಮೆಗಳನ್ನು ಕೊರೆಯಲಾಗಿದೆ. ಹುಚ್ಚಿಮಲ್ಲಿ ದೇಗುಲದ ಮುಖಮಂಟಪದ ಮೇಲ್ಗಂಡಿನಲ್ಲಿ ಸುಂದರವಾದ ಕಾರ್ತಿಕೇಯನ ವಿಗ್ರಹವಿದೆ. **(ಚಿತ್ರ ೮೫)** ಆತನ ಕೆಳಗೆ ಒಬ್ಬ ಗಂಧರ್ವನು ಕೈ ಮುಗಿದು ಕೊಂಡಿರುವಂತೆ ಶಿಲ್ಪಿತನಾಗಿದ್ದಾನೆ. ಇನ್ನೊಬ್ಬನು ಬಲಗೈಯನ್ನು ಮೇಲೆತ್ತಿ ದೇವನ ಗುಣಗಾನವನ್ನು ಹಾಡುತ್ತ ನರ್ತಿಸುತ್ತಿದ್ದಾನೆ. ಆತನ ಮುಖದಲ್ಲಿ



**ಚಿತ್ರ ೮೫. ಕಾರ್ತಿಕೇಯ, ಗಂಧರ್ವರು**

ಮಂದಹಾಸವಿದೆ. ಪ್ರಸನ್ನ ಭಾವ ಕಣ್ಣುಗಳಲ್ಲಿದೆ. ಕಾರ್ತಿಕೇಯನ ಮೇಲೆ ವಿದ್ಯಾಧರರು ಪುಷ್ಪಮಾಲೆಗಳನ್ನು ಹಿಡಿದುಕೊಂಡು ದೇವನಿಗೆ ಅರ್ಪಿಸಲು ಅಣಿಯಾಗಿದ್ದಾರೆ.

ಐಹೊಳೆಯ ಚಿಕ್ಕೀಗುಡಿಯ ಮಂಟಪದ ಚತ್ತಿನಲ್ಲೂ ಒಂದು ದೊಡ್ಡ ಕಮಲವಿದೆ. ಅದನ್ನು ಒಂದು ಚೌಕಿನಲ್ಲಿ ಸಂಯೋಜಿಸಿದ್ದಾರೆ. ಮೂಲೆಗಳು ಗಂಧರ್ವರ ಶಿಲ್ಪಗಳಿಂದ ಅಲಂಕೃತವಾಗಿವೆ. ಈ ಬಗೆಯ ಅಲಂಕರಣವನ್ನು ಬಾದಾಮಿಯ ಜಂಬುಲಿಂಗ ದೇಗುಲದಲ್ಲೂ ಕಾಣುತ್ತೇವೆ. ಅಲ್ಲಿ ವಿತಾನದಲ್ಲಿರುವ ಬ್ರಹ್ಮನ ಸುತ್ತ ಗಂಧರ್ವರು ನಿರೂಪಿತರಾಗಿದ್ದಾರೆ. ಪಟ್ಟದಕಲ್ಲಿನ ಮಲ್ಲಿಕಾರ್ಜುನ ಮಂದಿರದ ಗರ್ಭಗೃಹದ ಚತ್ತಿನಲ್ಲಿ ಕಮಲದ ಜೊತೆಗೆ ಗಂಧರ್ವರು ಮೂಡಿಬಂದಿರುವುದೊಂದು ವಿಶೇಷ ಅಭಿವ್ಯಕ್ತಿ.

ಚಲುಕ್ಯ ಕಲಾವಿದರು ಕಂಬಗಳನ್ನು ಅಲಂಕರಿಸಿದ ರೀತಿ ಗಮನಾರ್ಹವಾದುದು. ಗುಹಾಲಯದ ಕಂಬಗಳು ಬೋದಿಗೆಯ ಕೆಳಭಾಗದಲ್ಲಿ ವರ್ತುಲ ವಿನ್ಯಾಸಗಳಿಂದ ಅಲಂಕೃತವಾಗಿವೆ. ಎರಡನೆಯ ಗುಹೆಯ ಸಭಾಮಂಟಪದ ಕಂಬಗಳ ಈ ವರ್ತುಲಗಳಲ್ಲಿ ಗಂಧರ್ವ ಜೋಡಿಗಳನ್ನು ಕೊರೆದು ಮಾಡಿದ್ದಾರೆ. ರಾಚನಿಕ ದೇಗುಲವಾದ ದುರ್ಗಾಗುಡಿಯ ಮುಖಮಂಟಪದ ಕಂಬಗಳ ವರ್ತುಲಗಳಲ್ಲಿಯೂ ಉಬ್ಬುಶಿಲ್ಪಗಳಾಗಿ ಗಂಧರ್ವರು ಕೆತ್ತನೆಗೊಂಡಿದ್ದಾರೆ. ಪಟ್ಟದಕಲ್ಲಿನ ವಿರೂಪಾಕ್ಷ ಗುಡಿಯ ಸಭಾಮಂಟಪದ ಕಂಬವೊಂದು ಅಪ್ಸರೆಯಾದ ತಿಲೋತ್ತಮೆಯ ಕಥೆ ಹೇಳುತ್ತಿದೆ. ಈ ದೇವಾಲಯದ ಹೊರಗೋಡೆಯ ಅಲಂಕಾರ ಶಿಲ್ಪಗಳಲ್ಲಿ ಗಂಧರ್ವರು ಅಲ್ಲಲ್ಲಿ ಕಾಣಿಸಿಕೊಂಡಿದ್ದಾರೆ. ಉತ್ತರ ಗೋಡೆಯಲ್ಲಿ ಅಂದವಾದ ಜಟಾಧಾರಿ ಶಿವನ ಮೂರ್ತಿ ಇದ್ದು, ಮೇಲ್ಭಾಗದಲ್ಲಿ ಗಂಧರ್ವರು ವಾದ್ಯ ನುಡಿಸುವಲ್ಲಿ ನಿರತರಾಗಿದ್ದಾರೆ. ಐಹೊಳೆಯ ಭಾರತೀಯ ಪುರಾತತ್ವ ವಸ್ತು ಸಂಗ್ರಾಹಲಯದಲ್ಲಿ ಮಧ್ಯಮ ಗಾತ್ರದ ಗಂಧರ್ವ ಜೋಡಿಯ ಸುಂದರ ಪ್ರತಿಮೆಯಿದೆ. ಗಂಧರ್ವನು ತಂತು ವಾದ್ಯವನ್ನು ನುಡಿಸುವಂತೆ ತೋರಿಸಲಾಗಿದೆ. ಆಲಂಪುರದ ಸ್ವರ್ಗಬ್ರಹ್ಮಗುಡಿಯ ಉತ್ತರ ಗೋಡೆಯ ಮೇಲೆ ತಬ್ಬಿಕೊಂಡೇ ಹಾರಾಡುತ್ತಿರುವ ಗಂಧರ್ವರ ಕುತೂಹಲಕಾರಿ ಶಿಲ್ಪವಿದೆ. ಸಂಪ್ರದಾಯದಂತೆ ಈ ಗಂಧರ್ವರು ಆಕರ್ಷಕ ಕೇಶವಿನ್ಯಾಸ, ಆಭರಣ ವಸ್ತ್ರಾದಿಗಳಿಂದ ಅಲಂಕೃತರಾಗಿದ್ದಾರೆ. ಇಂಥ ಶಿಲ್ಪಗಳಲ್ಲಿ ಆನಂದ ಭಾವವನ್ನು ಶಿಲ್ಪಿಗಳು ಘನೀಕರಿಸಿದ್ದಾರೆ.

**ಆ. ಕಿನ್ನರರು**

ಪ್ರಾಚೀನ ಭಾರತೀಯರ ಶಿಲ್ಪಕಲೆಯಲ್ಲಿ ಕಿನ್ನರರ ಚಿತ್ರಣವು ಸ್ವಾರಸ್ಯಕರವಾದದ್ದು . ಸಾಂಚಿ, ಭಾರ್ಹುತ, ಅಮರಾವತಿ, ನಾಗಾರ್ಜುನಕೊಂಡ ಮೊದಲಾದ ಪ್ರಾಚೀನ ಕಲಾ ಕೇಂದ್ರಗಳಲ್ಲಿ ಈ ಶಿಲ್ಪ ವಿಧವನ್ನು ಕಾಣುತ್ತೇವೆ. ಭಾರತದ ಚಿತ್ರ ಹಾಗೂ ಶಿಲ್ಪ ಪರಂಪರೆಯಲ್ಲಿ ವಿಲಕ್ಷಣ ರೂಪದ ಈ ಕಿನ್ನರರು ಬಿಂಬಿತರಾಗಿದ್ದಾರೆ. ಕಿನ್ನರ ಎಂಬ ಶಬ್ದದಲ್ಲಿ 'ಈತ ಮನುಷ್ಯನೇ' ಎಂಬ ಪ್ರಶ್ನೆ ಅಡಕವಾಗಿದೆ. ಕಿನ್ನರರ ಮುಖ ಕುದುರೆಯದಾಗಿಯೂ, ದೇಹವು ಮನುಷ್ಯನದಾಗಿಯೂ ಇರುವದರಿಂದ ಈ ಪ್ರಶ್ನೆ. ವಿಷ್ಣುಧರ್ಮೋತ್ತರ ಪುರಾಣದಲ್ಲಿ ಕಿನ್ನರನನ್ನು ಅರ್ಧಮಾನವ ಅರ್ಧ ಕುದುರೆಯಾಗಿರುವ ಜೀವಿ ಎಂದು ಹೇಳಲಾಗಿದೆ.[೨೮] ಕಿನ್ನರನು ಕುದುರೆ ಮುಖ ಮತ್ತು ಮಾನವ ದೇಹವುಳ್ಳವನೆಂಬುದು ವಾಚಸ್ಪತಿಯ ವಿವರಣೆ. ಕಿನ್ನರರಿಗೆ ಮನುಷ್ಯನ ಮುಖ ಮತ್ತು ಕೈಗಳಿರುವವೆಂದೂ, ಕೆಳಗಿನ ಅರ್ಧದೇಹವು ಪಕ್ಷಿಯದಾಗಿರುವುದೆಂದೂ 'ರೂಪವಲೀಯ' ಎಂಬ ಸಂಸ್ಕೃತ ಗ್ರಂಥವು ಬಣ್ಣಿಸುತ್ತದೆ.[೨೯] ಕ್ರಿ.ಪೂ. ೨ನೇ ಶತಮಾನದ ಮಥುರಾ ಶಿಲ್ಪಗಳು ಮತ್ತು ಅಮರಾವತಿ ಶಿಲ್ಪಗಳು ಈ ಬಗೆಯ ಕಿನ್ನರರನ್ನು ಒಳಗೊಂಡಿವೆ. ನಾಗಾರ್ಜುನಕೊಂಡದಲ್ಲಿ ಮಾನವ ಮುಖ, ದೇಹವಿರುವ ಮತ್ತು ಕೆಳ ಅರ್ಧಭಾಗವು ಪಕ್ಷಿಯ ದೇಹಹೊಂದಿದ ಸಂಯುಕ್ತ ರೂಪದಲ್ಲಿ ಕಿನ್ನರರು ಶಿಲ್ಪಿತರಾಗಿದ್ದಾರೆ. ಈ ಬಗೆಯ

[೨೮] Krishnamurti, K. Mythical animals in Indian Art, P. 14

[೨೯] Nagar, S. L. Composite deities of Indian Art and Literature, New Delhi, p.154

ಹಲವಾರು ಉಬ್ಬುಶಿಲ್ಪಗಳಿಂದ ಚಲುಕ್ಯರ ದೇವಾಲಯಗಳ ಕಂಬಗಳು ಮತ್ತು ವಿತಾನಗಳು ಅಲಂಕೃತವಾಗಿವೆ.

ಕಿನ್ನರಿಯರು ಕಾಮಾಸಕ್ತರು ಎಂಬುದನ್ನು ಮನವರಿಕೆ ಮಾಡಿ ಕೊಡುವ ಮೂರ್ತಿಗಳು ಮುಖ್ಯವಾಗಿ ಐಹೊಳೆಯಲ್ಲಿವೆ. ಕೆಲವನ್ನು ಇಲ್ಲಿ ಅವಲೋಕಿಸಬಹುದು. ಲಾಡಖಾನ ಗುಡಿಯ ಮುಖಮಂಟಪದ ಕಂಬವೊಂದರ ಮೇಲೆ ಮಧ್ಯಮಗಾತ್ರದ ದಂಪತಿ ಮೂರ್ತಿಯಿದೆ. ಅಲ್ಲಿ ಅಶ್ವಮುಖಿ ಕಿನ್ನರಿಯೊಬ್ಬಳು ಋಷಿಯನ್ನು ವಶಪಡಿಸುವ ಹವಣಿಕೆಯಲ್ಲಿದ್ದಾಳೆ. **(ಚಿತ್ರ ೮೬.ಅ.)** ಋಷಿಯು ಆಕೆಯ ಆಹ್ವಾನವನ್ನು ತಿರಸ್ಕರಿಸುತ್ತ ತನ್ನ ಕಮಂಡಲದಿಂದ ಹೊಡೆಯುತ್ತ ಕೋಪವನ್ನು ವ್ಯಕ್ತಪಡಿಸಿದ್ದಾನೆ. ಹಾಗೆ ಆತನು ಎತ್ತಿದ ಕೈಯನ್ನು ಆಕೆ ಹಿಡಿದುಕೊಂಡಿದ್ದಾಳೆ. ಇವರೀರ್ವರ ಮನಸ್ಥಿತಿಯನ್ನು ಚಿತ್ರಿಸುವ ಅಪರೂಪದ ಚಿತ್ರಣವಿದು. ಋಷಿಯು ಕೌಪೀನಧಾರಿಯಾಗಿದ್ದಾನೆ. ಇಂತಹ ಸನ್ನಿವೇಶವನ್ನು ದುರ್ಗಾಗುಡಿಯಲ್ಲಿಯೂ ಕಾಣಬಹುದು. ಅದರ ಮುಖಮಂಟಪದ ದಕ್ಷಿಣ ಬದಿಯ ಕಂಬವೊಂದರಲ್ಲಿ ಕಿನ್ನರಿಯು ಪುರುಷನ ಕೊರಳ ಹಾರವನ್ನು ಹಿಡಿದು ತನ್ನತ್ತ ಸೆಳೆದುಕೊಳ್ಳುವ ಪ್ರಯತ್ನದಲ್ಲಿದ್ದಾಳೆ. ಹಿಡಿದಿರುವ ಕಮಂಡಲು ಅವನು ಸಾಧಕನೆಂದು ಸೂಚಿಸುತ್ತದೆ. ಅಂತೆಯೇ ಅವಳ ಆಮಂತ್ರಣವನ್ನು ಪ್ರತಿಭಟಿಸುವ ಮನೋನಿಗ್ರಹದ ಹಂತ ತಲುಪಿಲ್ಲವೆಂದು ತಿಳಿಯಬಹುದು.



ಚಿತ್ರ ೮೬. ಅ. ಕಿನ್ನರಿ, ಋಷಿ

ಕಿನ್ನರಿಯರು ಮುನಿಗಳ ತಪಸ್ಸನ್ನು ಭಂಗಗೊಳಿಸಲು ಭೂಲೋಕಕ್ಕೆ ಇಳಿದು ಬರುವರೆಂಬ ಕಲ್ಪನೆಯನ್ನು ಪುರಾಣ ಕಥೆಗಳಲ್ಲಿ ಬಿಂಬಿಸಲಾಗಿದೆ. ಕಿನ್ನರಿಯರು ತಮ್ಮ ಮಧುರ ಸಂಗೀತದಿಂದ ಋಷಿ ಮುನಿಗಳ ಮನವನ್ನು ಕದಡಿ ಅವರನ್ನು ಭೂಪಾಶದಿಂದ ಬಿಗಿಯುವರೆಂದು ಬಣ್ಣಿಸಲಾಗಿದೆ. ಗಾತ್ರದಲ್ಲೂ ಕಲಾಭಿವ್ಯಕ್ತಿಯಲ್ಲೂ ಹಿರಿದೆನಿಸುವ ಕಿನ್ನರಿ ಶಿಲ್ಪಗಳನ್ನು ಐಹೊಳೆಯ ಹುಚ್ಚಪ್ಪಯ್ಯನ ಗುಡಿಯ ಮುಖಮಂಟಪದ ಮುಂದಿನ ಎರಡು ಕಂಬಗಳಲ್ಲಿ ಕಾಣುತ್ತೇವೆ. ಇವು ಮಾನವ ಸಹಜ ಗಾತ್ರದವು. ಬಲಕಂಬವು ಚಿತ್ತಾಕರ್ಷಕ ಜೋಡಿಯಿಂದ ಅಂದಗೊಂಡಿದೆ. ಪುರುಷನು ಅಪರೂಪದ ರೂಪಲಕ್ಷಣವುಳ್ಳವನಾಗಿದ್ದಾನೆ. ಅವನು ಚೀನಾ ದೇಶದವನಂತೆ ತೋರುತ್ತಾನೆ. ಗುಂಗುರ ಕೂದಲಿನ ವಿಲಕ್ಷಣ ಕೇಶಬಂಧ, ಚೀನೀಯರ ಗಡ್ಡ, ಮೀಸೆಯನ್ನು ಹೊಂದಿರುವ ಈತನು ನೋಡುಗರ ಚಿತ್ತವನ್ನು ಸೆಳೆಯುತ್ತಾನೆ. **(ಚಿತ್ರ ೮೬.ಆ.)** ಅವನು ಅಶ್ವಮುಖಿ ಕಿನ್ನರಿಯ ಟೊಂಕದ ಮೇಲೆ ಎಡಗೈ ಬಳಸಿ ತಬ್ಬಿಕೊಳ್ಳುತ್ತಿದ್ದಾನೆ. ವಿವಸ್ತ್ರಳಾದ ಕಿನ್ನರಿಯು ಬಲಗೈಯಿಂದ ಆತನನ್ನು ಆಲಂಗಿಸಿರುವಳು. ಪ್ರಾಯಶಃ ಆಕೆಯ ತೋರ ಮೊಲೆಗಳನ್ನು ಕಂಡು ಆತನು ಮೋಹಪರವಶನಾಗಿರಬೇಕು. ಅರಳಿದ ಕಣ್ಣುಗಳಲಿ ಆತನ ರಾಗೋನ್ಮಾದ, ಅಚ್ಚರಿಗಳು ಪ್ರಕಟಗೊಂಡಿವೆ.

ಇಂತಹ ಇನ್ನೊಂದು ಜೋಡಿಯು ಪಕ್ಕದ ಕಂಬವನ್ನು ಅಲಂಕರಿಸಿದೆ. ಇವರ ನಿಲುವು ಭಿನ್ನವಾದುದು. ಇಲ್ಲಿ ಕಿನ್ನರಿಯನ್ನು ಬಲಗಡೆ ರೂಪಿಸಲಾಗಿದೆ. ಅವಳು ಎಡಗೈಯಿಂದ ಪುರುಷನನ್ನು ಬಳಸಿದ್ದಾಳೆ. ಅವಳು ವಿವಸ್ತ್ರಳು. ಪುರುಷನು ವಸ್ತ್ರಾಭರಣಗಳಿಂದ ಭೂಷಿತನಾಗಿದ್ದಾನೆ. ಕಿನ್ನರಿಯರನ್ನೊಳಗೊಂಡ ಈ ಮಿಥುನ ಮೂರ್ತಿಗಳು ದೇವಾಲಯದ ಮುಖಮಂಟಪದ ಮುಂದಿನ ಕಂಬಗಳ ಮೇಲೆ ಕಂಡರಿಸಿರುವುದು ಗಮನೀಯವಾಗಿದೆ. ಈ ಎರಡೂ ಶಿಲ್ಪಗಳಲ್ಲಿ ಕಿನ್ನರಿಯರು ರಾಗೋದ್ರೇಕವುಳ್ಳವರಾಗಿದ್ದಾರೆ.

ಹುಚ್ಚಪ್ಪಯ್ಯನ ಮಠದ ಪ್ರವೇಶದ್ವಾರದ ಬಲಬದಿಯಲ್ಲಿ ಮತ್ತೊಂದು ಕಿನ್ನರಿ ಮೂರ್ತಿಯಿದೆ. ಕಲಾತ್ಮಕತೆಯ ದೃಷ್ಟಿಯಿಂದ ಬಡವಾದ ಶಿಲ್ಪವಿದು. ಕಿನ್ನರಿಯು ಪುರುಷನ ಬಲಗೈಯನ್ನು ಭದ್ರವಾಗಿ ಹಿಡಿದಿದ್ದಾಳೆ. ಎಡಗೈಯನ್ನು ಹಿಂದಿನಿಂದ ಚಾಚಿ ಆತನ ಎಡಭುಜದ ಮೇಲೆ ಇರಿಸಿದ್ದಾಳೆ. ಪುರುಷನ ಕೈಯಲ್ಲಿ ಅಕ್ಷಮಾಲೆಯಿದೆ. ಆತನು



ಚಿತ್ರ ೮೬. ಆ. ಕಿನ್ನರಿ, ಚೀನಿಮನುಷ್ಯ



ಚಿತ್ರ ೮೭. ಕಿನ್ನರಿ, ಸಸ್ಯ ರೂಪಿ

ಮುನಿಯಾಗಿರಬಹುದು. ಅವನು ಕೌಪೀನ ಮತ್ತು ಯಜ್ಞೋಪವೀತವನ್ನು ಧರಿಸಿದ್ದಾನೆ. ಅಶ್ವಮುಖಿಯ ಆಲಿಂಗನಕ್ಕೆ ಆತನು ಭಯಭೀತನಾಗಿದ್ದಾನೆ !

ಕಿನ್ನರರ ಗುಂಪಿಗೆ ಸೇರಿರದ, ಆದರೆ ಬಹುಮಟ್ಟಿಗೆ ಅತಿಮಾನವರಾಗಿರುವ ಇನ್ನೊಂದು ಬಗೆಯ ದಿವ್ಯ ಮಾನವರು ಚಲುಕ್ಯರ ಶಿಲ್ಪಗಳಲ್ಲಿ ಕಾಣಸಿಗುತ್ತಾರೆ. ಇವರ ಮುಖವು ಮನುಷ್ಯನದಾಗಿದ್ದು ಉಳಿದ ದೇಹದ ಭಾಗವು ಸಸ್ಯರೂಪಿ ಇಲ್ಲವೆ ಪುಷ್ಪರೂಪಿಯಾಗಿರುತ್ತದೆ. **(ಚಿತ್ರ ೮೭)** ಇಂತಹ ಮಿಶ್ರ ದೇಹ ರಚನೆಯ ಕಾಲ್ಪನಿಕ ಜೀವಿಗಳನ್ನು ಕಲಾವಿದರು ತಮ್ಮ ಮನೋವಿಲಾಸದಿಂದ ಸೃಷ್ಟಿಸಿ ದೇವಾಲಯಗಳ ವಿತಾನ, ಗೋಡೆ ಮತ್ತು ಕಂಬಗಳನ್ನೂ ಸಿಂಗರಿಸಿದ್ದಾರೆ.

ಈ ಬಗೆಯ ವಿಲಕ್ಷಣ ರೂಪದ ಶಿಲ್ಪಗಳನ್ನು ವಿಶೇಷವಾಗಿ ಬಾದಾಮಿಯ ಶೈವ ಗುಹಾಲಯದ ಕಂಬಗಳಲ್ಲಿ ಕಾಣಬಹುದು, ಕಂಬಗಳ ಮೇಲ್ಭಾಗದಲ್ಲಿ ಬೋದಿಗೆಯ ಕೆಳಗೆ ವರ್ತುಲಾಕೃತಿಗಳಲ್ಲಿ ಈ ಉಬ್ಬುಕೆತ್ತನೆಗಳಿವೆ. ಮುಖ ಮತ್ತು ಕೈಗಳು ಮಾನವರದಾಗಿದ್ದು ಇನ್ನುಳಿದ ದೇಹದ ಭಾಗವು ಪುಷ್ಪ ವಿನ್ಯಾಸ ಇಲ್ಲವೆ ಬಳ್ಳಿಯ ಸುರುಳಿಗಳಿಂದ ಕೂಡಿ ಸುಂದರ ಕಲಾಕೃತಿಗಳು ಮೈದಾಳಿವೆ. ಇವು ತಮ್ಮ ವಿಚಿತ್ರ ರೂಪದಿಂದಾಗಿ ವಿಸ್ಮಯಕಾರಿಯಾಗಿವೆ. ಈ ಶಿಲ್ಪ ಪ್ರಕಾರವು ಚಲುಕ್ಯರ ವಿಶಿಷ್ಟಕೊಡುಗೆ ಎನ್ನಬಹುದು. ಗುಹಾಲಯ ಇಲ್ಲವೆ ರಾಚನಿಕ ದೇವಾಲಯಗಳ ಕಂಬ, ವಿತಾನಗಳ ಚೆಲುವನ್ನು ಹೆಚ್ಚಿಸುವ ಅಲಂಕಾರ ಶಿಲ್ಪಗಳಾಗಿ ಇವು ಸಾಕಷ್ಟು ಸಂಖ್ಯೆಯಲ್ಲಿ ಮೂಡಿಬಂದಿವೆ. ವೈವಿಧ್ಯವು ಈ ಶಿಲ್ಪ ಪ್ರಕಾರದ ವೈಶಿಷ್ಟ್ಯವಾಗಿದೆ. ಇವು ನೋಡುಗನಲ್ಲಿ ಸೌಂದರ್ಯ ಪ್ರಜ್ಞೆಯನ್ನು ಜಾಗೃತಗೊಳಿಸುತ್ತವೆ.

ಭಾರತದ ನಿಸರ್ಗ ಸಂಪತ್ತು ಅಗಾಧವಾದುದು, ರಮಣೀಯವಾದುದು. ಪ್ರಾಚೀನರು ನಿಸರ್ಗದಲ್ಲಿನ ಪಶು, ಪಕ್ಷಿ, ಸಸ್ಯಗಳನ್ನೊಳಗೊಂಡ ಜೀವ ಪ್ರಪಂಚವನ್ನು ಕೌತುಕತೆಯಿಂದ ಅವಲೋಕಿಸಿದ್ದಾರೆ. ಕಪೋತ, ಮೀನು, ಆನೆಗಳಿಂದ ಮತ್ತು ಚಿಕ್ಕಪಕ್ಷಿ, ಹುಳುಗಳಿಂದ ಜೀವನ ದರ್ಶನ ಪಡೆದುದಾಗಿ ಉದ್ಧವ ಗೀತೆಯಲ್ಲಿ ಅವಧೂತನೊಬ್ಬನು ಹೇಳುತ್ತಾನೆ. ನಿಸರ್ಗದ ಪ್ರತಿಯೊಂದು ವಸ್ತುವೂ ಸಂದೇಶ ಇಲ್ಲವೆ ಮಾರ್ಗದರ್ಶನ ನೀಡುತ್ತದೆಂಬ ನಿಲುವು ಭಾರತೀಯ ಚಿಂತಕರದ್ದಾಗಿದೆ. ಪ್ರಾಣಿ, ಪಕ್ಷಿಗಳಲ್ಲಿಯ ಗುಣ ವಿಶೇಷಗಳನ್ನಾಧರಿಸಿ ಜನಪದರು ಹಲವಾರು ಕತೆಗಳನ್ನು ಹೆಣೆದಿದ್ದಾರೆ. ಪಂಚತಂತ್ರಕತೆಗಳು ಪ್ರಾಣಿಲೋಕದ ವಿರಾಟರೂಪವನ್ನು ದರ್ಶನ ಮಾಡಿಸುತ್ತವೆ ಎಂಬುದನ್ನು ಎಲ್ಲರೂ ಬಲ್ಲರು.

ಸಾಹಿತಿಗಳು ಸಾಹಿತ್ಯದಲ್ಲಿ ಪ್ರಾಣಿಪಕ್ಷಿಗಳನ್ನು ಬಳಸಿಕೊಂಡು ಸಾಹಿತ್ಯವನ್ನು ಸುಂದರಗೊಳಿಸಿದಂತೆ ಪ್ರಾಚೀನ ಶಿಲ್ಪಿಗಳು ಶಿಲ್ಪಗಳನ್ನು ಅಂದಗೊಳಿಸಿದ್ದಾರೆ. ಪಶು, ಪಕ್ಷಿಗಳು ಧಾರ್ಮಿಕವಾಗಿ ವಿವಿಧ ದೇವ-ದೇವಿಯರ ವಾಹನಗಳಾಗಿ ಶಿಲ್ಪಗಳಲ್ಲಿ ಕಾಣಿಸಿಕೊಂಡಂತೆ ಪ್ರತ್ಯೇಕವಾಗಿಯೂ ಬಿಂಬಿತವಾಗಿವೆ. ಈ ಪ್ರಾಣಿ ಶಿಲ್ಪಗಳಲ್ಲಿ ಮಾನವರ ಭಾವನೆ, ಆಲೋಚನೆಗಳು ಪ್ರತಿಫಲಿಸುತ್ತವೆ. ಶಿಲ್ಪಾಲಂಕಾರಕ್ಕಾಗಿಯೂ ಈ ಬಗೆಯ ಶಿಲ್ಪಗಳನ್ನು ಬಳಸಿಕೊಂಡಿರುವುದು ಭಾರತೀಯ ಶಿಲ್ಪಕಲೆಯ ವಿಶೇಷತೆಯಾಗಿದೆ. ಆಲಂಕಾರಿಕ ವಿನ್ಯಾಸಗಳಲ್ಲಿ ಪಶುಪಕ್ಷಿಗಳನ್ನು ಹೇರಳವಾಗಿ ಚಿತ್ರಿಸಲಾಗಿದೆ.

## ಪ್ರಾಣಿಗಳು

ಶಿಲ್ಪದಲ್ಲಿ ಪ್ರಾಣಿಗಳ ಚಿತ್ರಣವು ಹರಪ್ಪ ಸಂಸ್ಕೃತಿಯಷ್ಟು ಪ್ರಾಚೀನವಾದುದು. ಆ ಕಾಲದ ಟೆರಕೋಟಾ ಮೂರ್ತಿಗಳಲ್ಲಿ, ಮುದ್ರಿಕೆಗಳಲ್ಲಿ ಪ್ರಾಣಿಗಳು ಮೂಡಿಬಂದಿವೆ. ಬೌದ್ಧರ ಕಲೆಯಲ್ಲಿ ಬುದ್ಧನನ್ನು ಆನೆಯ ರೂಪದಲ್ಲಿ ರಾಣಿ ಮಾಯಾದೇವಿಯ ಗರ್ಭವನ್ನು ಪ್ರವೇಶಿಸುವುದನ್ನು ತೋರಿಸಲಾಗಿದೆ. ಕ್ರಿ.ಪೂ. ೨ನೆಯ ಶತಮಾನದ ಈ ಚಿತ್ರಣವು ಭಾರ್ಹುತ್ ಸ್ತೂಪದಲ್ಲಿದೆ.[೧] ಅಜಂತಾ, ಎಲ್ಲೋರಾ, ಮಹಾಬಲಿಪುರ ಶಿಲ್ಪಗಳಲ್ಲಿ ಹಲವಾರು ಬಗೆಯ ಪ್ರಾಣಿಗಳು ಕಾಣಿಸಿಕೊಂಡಿವೆ. ಸಣ್ಣ ಮತ್ತು ದೊಡ್ಡ ಜೀವಿಗಳನ್ನು ಕಲ್ಲಿನಲ್ಲಿ ಕೊರೆಯುವುದರ ಮೂಲಕ ಶಿಲ್ಪಕ್ಕೆ ಚೆಲುವಿನ ಸಂಸ್ಕಾರ ನೀಡಿದ್ದಾರೆ. ಜೊತೆಗೆ ರೂವಾರಿಗಳು ಆ ಪ್ರಾಣಿ ಪಕ್ಷಿಗಳ ಗುಣ ವಿಶೇಷವನ್ನು ತಿಳಿಸುವ ಪ್ರಯತ್ನ ಮಾಡಿದ್ದಾರೆ.

ಚಲುಕ್ಯರ ರೂವಾರಿಗಳಿಂದ ಕಲ್ಲಿನಲ್ಲಿ ಮೂಡಿಬಂದ ಪ್ರಾಣಿ ಪಕ್ಷಿಗಳ ಮೂರ್ತಿಗಳು ಅಗಣಿತವೆಂದೇ ಹೇಳಬಹುದು. ಈ ಶಿಲ್ಪ ಕಂಡರಣೆಯಲ್ಲಿ ಕಲಾವಿದರು ಹಲವೆಡೆ ವಾಸ್ತವಿಕತೆಯನ್ನು ಪ್ರದರ್ಶಿಸಿದರೆ, ಇನ್ನು ಕೆಲವೆಡೆ ಆ ಪ್ರಾಣಿಯ ವಾಸ್ತವಿಕ ಸ್ವರೂಪದ ಎಲ್ಲೆ ಮೀರಿ ವಿಲಕ್ಷಣ ರೂಪವನ್ನು ಸೃಷ್ಟಿಸಿದ್ದಾರೆ. ಚಲುಕ್ಯರ ಶಿಲ್ಪಿಗಳು ಪಶುಪಕ್ಷಿಗಳ ದೇಹರಚನೆಯನ್ನು ಚೆನ್ನಾಗಿ ಅಭ್ಯಸಿಸಿದ್ದರೆಂಬುದನ್ನು ಈ ಮೂರ್ತಿಗಳು ಸಾಬೀತು

[೧] Aryan K. C. Basis of Decorative Element in Indian Art, New Delhi, (1981) p, 66

ಪಡಿಸುತ್ತವೆ. ಹಲವಾರು ವಿಧದ ಪಶು ಪಕ್ಷಿಗಳು ಚಲುಕ್ಯರ ದೇವಾಲಯಗಳನ್ನು ಅಂದಗೊಳಿಸಿವೆ. ಪ್ರಾತಿನಿಧಿಕವಾಗಿ ಕೆಲವನ್ನು ಇಲ್ಲಿ ಪರಿಶೀಲಿಸೋಣ :

## ಆನೆ

ಆನೆ ಭೂಮಿಯ ಮೇಲೆ ಮಾನವನು ಕಂಡ ಬಲು ದೊಡ್ಡ ಪ್ರಾಣಿ. ಅದು ಬಲಶಾಲಿ ಪ್ರಾಣಿ ಕೂಡ. ತನ್ನ ವಿಲಕ್ಷಣ ಮುಖ, ಗಂಭೀರ ನಡಿಗೆಯಿಂದಾಗಿ ಆನೆಯು ವ್ಯಾಪಕವಾಗಿ ಶಿಲ್ಪಗಳಲ್ಲಿ ಕಾಣಿಸಿಕೊಂಡಿದೆ. ಅದು ರಾಜಶಕ್ತಿ , ಪ್ರತಿಷ್ಠೆ ಹಾಗೂ ಗೌರವಗಳ ಸಂಕೇತವಾಗಿ ಬಳಕೆಯಾಗಿದೆ. ಭಾರತೀಯ ಶಿಲ್ಪಕಲೆಯಲ್ಲಿ ಆನೆಗೆ ಮಹತ್ವದ ಹಾಗೂ ವಿಶಿಷ್ಟವಾದ ಸ್ಥಾನವಿದೆ.

ಮೇಲಿನ ಶಿವಾಲಯದಲ್ಲಿ ಅಧಿಷ್ಠಾನದ ಎತ್ತರದಷ್ಟು, ಇರುವ ಆನೆಯ ಪ್ರತಿಮೆಗಳನ್ನು ಕೊರೆಯಲಾಗಿದೆ. **(ಚಿತ್ರ ೮೮)** ಸೋಪಾನದ ಎಡಬಲಗಳಲ್ಲಿ ಆನೆಗಳನ್ನು ಬಿಡಿ ಬಿಡಿಯಾಗಿ ವಿಭಿನ್ನ ಭಾವ ಭಂಗಿಗಳಲ್ಲಿ ಕೂಡಿಸಿ ಅಧಿಷ್ಠಾನವನ್ನು ಆಕರ್ಷಕವಾಗಿ ನಿರೂಪಿಸಲಾಗಿದೆ. ಆನೆಯು ಸಹಜ ಗಾತ್ರದಲ್ಲಿರುವುದರಿಂದ ಕೇವಲ ಮುಖ ಮತ್ತು ಮುಂಗಾಲುಗಳನ್ನು ಅಧಿಷ್ಠಾನದ ಸೀಮಿತ ಅಳತೆಯಲ್ಲಿ ಕೆತ್ತನೆ ಮಾಡಲಾಗಿದೆ. ಪೂರ್ಣ ಗಾತ್ರದ ಆನೆಯನ್ನು ಕಂಡರಿಸಲು ಸಾಧ್ಯವಿಲ್ಲವಾದ್ದರಿಂದ ಶಿಲ್ಪಿಗಳು ಈ ಹೊಂದಾಣಿಕೆ ಮಾಡಿಕೊಂಡಿರುವುದು ಅನಿವಾರ್ಯವಾಗಿದೆ.



**ಚಿತ್ರ ೮೮. ಆನೆಗಳು, ಅಧಿಷ್ಠಾನ, ಮೇಲಿನ ಶಿವಾಲಯ**



**ಚಿತ್ರ ೮೯. ಆನೆ, ಸಿಂಹಗಳು, ಅಧಿಷ್ಠಾನ, ವಿರೂಪಾಕ್ಷ ದೇವಾಲಯ**

ವಿರೂಪಾಕ್ಷ ದೇವಾಲಯದ ಅಧಿಷ್ಠಾನವು ಬೇರೆ ರೀತಿಯಲ್ಲಿ ಅಲಂಕಾರಗೊಂಡಿದೆ. 'ಗಳ'ಭಾಗದಲ್ಲಿ ಆನೆ ಮತ್ತು ಸಿಂಹಗಳನ್ನು ಪರ್ಯಾಯವಾಗಿ ಕೆತ್ತಿರುವರು. **(ಚಿತ್ರ ೮೯)** ಆ ಅಧಿಷ್ಠಾನವು ಹಿಂಚಾಚು, ಮುಂಚಾಚುಗಳಿರುವ ಭಿತ್ತಿಯಿಂದಾಗಿದೆ. ಮುಂಬಣೆಯಲ್ಲಿ ಆನೆಗಳಿದ್ದರೆ ಹಿಂಬಣೆಯಲ್ಲಿ ಸಿಂಹಗಳಿವೆ. ಆನೆಗಳನ್ನು ಅಭಿಮುಖವಾಗಿ ಕೊರೆದಿರುವುದರಿಂದ ಆನೆಯ ಮುಖ ಮತ್ತು ಮುಂಗಾಲುಗಳು ಮಾತ್ರ ದೃಗ್ಗೋಚರವಾಗುತ್ತವೆ. ಮೇಗುತಿಯ ಅಧಿಷ್ಠಾನದ 'ಗಳ' ಭಾಗವು ಮಾಡಗಳಿಂದಾಗಿದೆ. ಆ ಗೂಡುಗಳಲ್ಲಿ ಅಭಿಮುಖವಾದ ಆನೆಗಳನ್ನು ರೂಪಿಸಿದ್ದಾರೆ. ಕಾಶಿವಿಶ್ವನಾಥ ಗುಡಿಯ ಅಧಿಷ್ಠಾನದಲ್ಲಿ ಕುಮುದವು ಪ್ರಧಾನ ಅಂಗವಾಗಿದೆ. ಅದರಲ್ಲಿ ಎರಡು ಆನೆಗಳನ್ನು ಎರಡು ಸಿಂಹಗಳು ಆಕ್ರಮಣ ಮಾಡುತ್ತಿರುವಂತೆ ಲಭ್ಯವಾದ ಸ್ವಲ್ಪ ಸ್ಥಳಾವಕಾಶದಲ್ಲಿ ಚತುರತೆಯಿಂದ ಬಿಡಿಸಿದ್ದಾರೆ. ಆಲಂಪುರದ ದೇವಾಲಯಗಳಲ್ಲಿ ಅಧಿಷ್ಠಾನದ ಗಳ ಭಾಗದಲ್ಲಿ ಪ್ರತ್ಯೇಕವಾದ ಪೆಟ್ಟಿಗೆಯಂತಿರುವ ರಚನೆಗಳನ್ನು ಮಾಡಿ ಅದರಲ್ಲಿ ವಿವಿಧ ಭಂಗಿಗಳಲ್ಲಿ ಸಾಲಾಗಿ ಆನೆಗಳನ್ನು ಕಂಡರಿಸಿದ್ದಾರೆ. ಇದು ವಿಶಿಷ್ಟ ಬಗೆಯ ಅಲಂಕರಣವಾಗಿದೆ.

ಚಲುಕ್ಯ ಶಿಲ್ಪಿಗಳು ಕಂಬದ ಅಲಂಕರಣೆಯಲ್ಲಿ ಕೂಡ ಆನೆಯ ಪ್ರತಿಮೆಗಳನ್ನು ಕಟೆದಿದ್ದಾರೆ. ಬಾದಾಮಿಯ ಶೈವ ಗುಹೆಯಲ್ಲಿ ಕಂಬದ ಮೇಲ್ಭಾಗದಲ್ಲಿ ವೃತ್ತವನ್ನು ಕೊರೆದು ಅದರಲ್ಲಿ ಆನೆಯ ಮುಖ, ಮುಂಗಾಲುಗಳನ್ನು ಕೆತ್ತಿ ಹಿಂಭಾಗವನ್ನು ಬಳ್ಳಿಯಾಗಿ ತೋರಿಸಿದ್ದಾರೆ. ವಿರೂಪಾಕ್ಷ ದೇವಾಲಯದ ಕಂಬವೊಂದು ಕೆಳಭಾಗದಲ್ಲಿ ವೃತ್ತದಿಂದ ಅಲಂಕೃತವಾಗಿದ್ದು ಅದರಲ್ಲಿ ಆನೆಯೊಂದು ರಭಸದಿಂದ ಕುದುರೆಯನ್ನು ತುಳಿಯುವ ಚಿತ್ರಣವಿದೆ.


ಚಿತ್ರ ೯೦. ಆನೆಯಿಂದ ಸಾರಿಗೆ, ಮಲ್ಲಿಕಾರ್ಜುನ ದೇವಾಲಯ, ಪಟ್ಟದಕಲ್ಲು

ಆನೆಯನ್ನು ಮಾವುತನು ನಿಯಂತ್ರಿಸುವದನ್ನು ತೋರಿಸಿದ್ದಾರೆ. ಮಾವುತನ ಹಿಂದೆ ಕುಳಿತವನು ಮಾತ್ರ ಜೋಲಿ ತಪ್ಪಿ ಕೆಳಗೆ ಬೀಳದಂತೆ ಆನೆಯ ಮೇಲಿರುವ ಪಟ್ಟಿಯೊಂದರ ಆಸರೆ ಪಡೆದಿದ್ದಾನೆ. ಕಲಾವಿದನು ತನ್ನ ನಿಜ ಜೀವನದಲ್ಲಿ ಕಂಡ ಒಂದು ದೃಶ್ಯವಿದು. ಲಾಡಖಾನ ಗುಡಿಯ ಕಂಬದ ಅರ್ಧ ವರ್ತುಲದಲ್ಲಿ ಕೂಡ ಇಂಥದೇ ಸನ್ನಿವೇಶವನ್ನು ಕಂಡರಿಸಿದ್ದಾರೆ. ಅಲ್ಲಿಯ ಆನೆಯು ವ್ಯಕ್ತಿಯೊಬ್ಬನನ್ನು ತುಳಿದು ಸಾಯಿಸುತ್ತದೆ. ಅಪರಾಧಿಯೊಬ್ಬನಿಗೆ ಅರಸನು ಆಜ್ಞೆಮಾಡಿದ ಶಿಕ್ಷೆ ಇದಾಗಿರಬಹುದು.

ರೂವಾರಿಗಳು ಆನೆಯ ಕಾದಾಟವನ್ನು ತಮ್ಮ ಕಲಾಭಿವ್ಯಕ್ತಿಗೆ ಪ್ರಧಾನ ವಸ್ತುವಾಗಿ ಆಯ್ದುಕೊಂಡಿದ್ದಾರೆ. ಮಾಲಗಿತ್ತಿ ಶಿವಾಲಯದ ಅಧಿಷ್ಠಾನದಲ್ಲಿ ಆನೆಗಳೆರಡು ತಮ್ಮ ಸೊಂಡಿಲುಗಳನ್ನು ತಳಕು ಹಾಕಿಕೊಂಡು ಹೋರಾಡುತ್ತಿವೆ. ಎರಡೂ ಆನೆಗಳು ಮುಂಗಾಲುಗಳನ್ನು ಎತ್ತಿ ಆಕ್ರಮಣ ಮಾಡುವಲ್ಲಿ ಅವುಗಳ ರಭಸ, ಆರ್ಭಟ ವ್ಯಕ್ತವಾಗಿದೆ. ಈ ಆನೆಗಳ ಹಿಂಭಾಗದ ಚಿತ್ರಣವನ್ನು ಮಾಡಿರದೇ ಇದ್ದರೂ ಆನೆಯ ಕಾದಾಟದ ಸ್ವರೂಪವನ್ನು ಪರಿಚಯಿಸುವಲ್ಲಿ ಶಿಲ್ಪವು ಯಶಸ್ವಿ–ಯಾಗಿದೆ. ಪೂರ್ಣ ಪ್ರಮಾಣದಲ್ಲಿ ಆನೆಯ ದೇಹಗಳನ್ನು ಕಂಡರಿಸಲಾದ ಇಂತಹ ಇನ್ನೊಂದು ದೃಶ್ಯವು ದುರ್ಗಾ ದೇವಾಲಯದಲ್ಲಿದೆ. ಅಲ್ಲಿ ಒಂದು ಆನೆಯು ಇನ್ನೊಂದರ ಸೊಂಡಿಲನ್ನು ಒತ್ತಿ ಅದನ್ನು ಹಿಂದಕ್ಕೆ ತಳ್ಳಲು ಹೆಣಗಾಡುತ್ತಿದೆ. ವಿರೂಪಾಕ್ಷ ಗುಡಿಯಲ್ಲಿ ಎರಡು ಆನೆಗಳು ಒಂದನ್ನೊಂದು ದೂರದಿಂದಲೇ ಕಂಡು ಹಿಂದಿನ ಸಿಟ್ಟನ್ನು ನೆನಪಿಸಿಕೊಂಡು ರಭಸದಿಂದ ಆಕ್ರಮಣಶೀಲವಾಗಿ ಓಡಿಬರುವಂತೆ ತೋರಿಸಲಾಗಿದೆ. ಆನೆಗಳ ಸ್ವಭಾವವನ್ನು ರೂವಾರಿಗಳು ಚೆನ್ನಾಗಿ ಅರಿತಿದ್ದರೆಂಬುದು ಇದರಿಂದ ವೇದ್ಯವಾಗುತ್ತದೆ. ಆನೆಯ ತೆರೆದ ಬಾಯಿಯು ಅದು ಘೀಳಿಡುತ್ತ ಧಾವಿಸುತ್ತಿದೆಂದು ಸೂಚಿಸುತ್ತದೆ.

ಪ್ರಾಚೀನರು ಸಾರಿಗೆ, ಸಾಗಾಣಿಕೆಗೆ ಪ್ರಧಾನವಾಗಿ ಆನೆಯನ್ನೇ ಆಧರಿಸಿದ್ದರಷ್ಟೇ ? ಅದಕ್ಕೆ ಸಾಕ್ಷಿ ಎನ್ನುವಂತೆ ಪಟ್ಟದಕಲ್ಲಿನ ಮಲ್ಲಿಕಾರ್ಜುನ ಗುಡಿಯ ಅರೆಗಂಬದ ಶಿಲ್ಪವೊಂದಿದೆ **(ಚಿತ್ರ ೯೦)**. ಅದರಲ್ಲಿ ಆನೆಯೊಂದು ತನ್ನಷ್ಟೇ ಎತ್ತರದ ಮರದ ಕೊರಡನ್ನು ಎರಡು ಸಲ ಸುತ್ತಿರುವ ಸೊಂಡಿಲಲ್ಲಿ ಹಿಡಿದುಕೊಂಡು ಸಾಗುವ ದೃಶ್ಯವನ್ನು ಶಿಲ್ಪಿ ಮೂರ್ತಗೊಳಿಸಿದ್ದಾನೆ. ಪಕ್ಕದಲ್ಲಿ ಮಾವುತನು ಅದರ ಚಲನೆಯನ್ನು ನಿಯಂತ್ರಿಸುತ್ತಿದ್ದಾನೆ. ಆತನ ಎತ್ತರದೊಂದಿಗೆ ಮರದ ದಿಮ್ಮೆಯ ಉದ್ದವನ್ನು ಭಾರವನ್ನು ಕಲ್ಪಿಸಬಹುದಾಗಿದೆ. ಶಿಲ್ಪದಲ್ಲಿ ಈ ಸಾಪೇಕ್ಷ ತಂತ್ರವನ್ನು ಬಳಸುವುದು ಸಾಮಾನ್ಯ.

ಯುದ್ಧದ ಸನ್ನಿವೇಶಗಳನ್ನು ದೇವಾಲಯಗಳ ಅಧಿಷ್ಠಾನ, ಕಂಬ ಇಲ್ಲವೆ ತೊಲೆಗಳ ಮೇಲೆ ಕೊರೆದಿರುವರು. ಮಹಾಕೂಟೇಶ್ವರ ಗುಡಿಯ ಅಧಿಷ್ಠಾನದಲ್ಲಿ ರೂವಾರಿಯು ಗಜದಳವು ಯುದ್ಧದಲ್ಲಿ ತೊಡಗಿರುವ ಚಿತ್ರವನ್ನು ಬಿಡಿಸಿದ್ದಾನೆ **(ಚಿತ್ರ ೯೧)**.

ಆನೆಯು ಧಾರ್ಮಿಕ ಶಿಲ್ಪಗಳ ಭಾಗವಾಗಿ ಕೆತ್ತನೆಗೊಂಡಿದೆ. ಅವುಗಳಲ್ಲಿ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಉತ್ತರ ಮುಖಮಂಟಪದ ಕಂಬದ ಮೇಲಿನ ಗಜೇಂದ್ರಮೋಕ್ಷ ಕತೆಯ ನಿರೂಪಣೆ ಉಲ್ಲೇಖನೀಯವಾದುದು. ಆನೆಯ ರೂಪದ ಇಂದ್ರದ್ಯುಮ್ನನು ಪ್ರಾಣಾಪಾಯದಲ್ಲಿದ್ದಾನೆ. ವಿಷ್ಣು ಆತನನ್ನು ಮುಕ್ತಗೊಳಿಸಲು ಧಾವಿಸುತ್ತಿದ್ದಾನೆ. ಇಡೀ


ಚಿತ್ರ ೯೦. ಆನೆಯ ಸೈನ್ಯ, ಮಹಾಕೂಟೇಶ್ವರ ದೇವಾಲಯ

ಸನ್ನಿವೇಶವು ತುಂಬಾ ನಾಟಕೀಯವಾಗಿ ನಿರೂಪಿತವಾಗಿದೆ. ಚಲುಕ್ಯರ ದೇವಾಲಯಗಳಲ್ಲಿ ಗಜಲಕ್ಷ್ಮಿ ವಿಗ್ರಹವು ಲಲಾಟಬಿಂಬವಾಗಿ ಕಾಣಿಸಿಕೊಂಡಿಲ್ಲ ವಾದರೂ ಬೇರೆ ವಾಸ್ತು ಅಂಗಗಳಲ್ಲಿ ಆಲಂಕಾರಿಕ ಶಿಲ್ಪವಾಗಿ ನಿರೂಪಿತವಾಗಿದೆ. ಈ ಬಗೆಯ ಶಿಲ್ಪ ನಿರೂಪಣೆಯಲ್ಲಿ ಲಕ್ಷ್ಮಿಯ ಅಕ್ಕಪಕ್ಕದಲ್ಲಿ ಆಕೆಗೆ ಜಲಾಭಿಷೇಕ ಮಾಡುತ್ತಿರುವ ಎರಡು ಇಲ್ಲವೆ ನಾಲ್ಕು ಆನೆಗಳನ್ನು ಕಂಡರಿಸಲಾಗಿರುತ್ತದೆ. ಹೀಗೆ ಲಕ್ಷ್ಮಿಯ ಎಡಬಲದಲ್ಲಿ ದೊಡ್ಡದಾದ ಎರಡು ಆನೆಗಳು ಹುಚ್ಚಪ್ಪಯ್ಯ ಗುಡಿಯಲ್ಲಿವೆ. ಇದು ಸಭಾಮಂಟಪದ ಬಾಗಿಲದ ಮುಂಭಾಗದಲ್ಲಿರದೆ ಅದರ ಹಿಂಭಾಗದಲ್ಲಿ ಸಭಾಮಂಟಪದ ಉತ್ತರಗೋಡೆಯ ಮೇಲೆ ಜೋಡಿಸಲಾಗಿದೆ. ಈ ರೀತಿಯ ಸ್ಥಳದ ಆಯ್ಕೆ ಅಪರೂಪವಾದದ್ದು. ನಾಲ್ಕು ಆನೆಗಳಿಂದ ಸೇವೆ ಸ್ವೀಕರಿಸುವ ಇನ್ನೊಂದು ಲಕ್ಷ್ಮಿಮೂರ್ತಿಯು ಗೌಡರ ಗುಡಿಯ ಉತ್ತರಾಂಗದಲ್ಲಿ ಸಂಯೋಜಿತವಾಗಿದೆ. ಇದರಂತೆ ಗುಹಾಲಯಗಳ ಕಂಬ, ದೇವಾಲಯಗಳ ವಿತಾನ ಮತ್ತು ಒಳ ಹಾಗೂ ಹೊರಗೋಡೆಗಳ ಅಲಂಕಾರಕ್ಕಾಗಿ ಗಜಲಕ್ಷ್ಮಿ ಶಿಲ್ಪಗಳನ್ನು ಬಳಸಿರುವುದುಂಟು.

ಇಂದ್ರನ ವಾಹನವಾಗಿಯೂ ಆನೆ ಹಲವು ಶಿಲ್ಪಗಳಲ್ಲಿ ಮೂಡಿ ಬಂದಿದೆ. ಅಷ್ಟದಿಕ್ಪಾಲರಲ್ಲಿ ಒಬ್ಬನಾದ ಇಂದ್ರನು ಆನೆಯ ಮೇಲೆ ಆರೂಢವಾಗಿರುತ್ತಾನೆ. ಗುಹಾಲಯ ಮತ್ತ ರಾಚನಿಕ ಮಂದಿರಗಳ ವಿತಾನಗಳಲ್ಲಿ ಇಂತಹ ಶಿಲ್ಪಗಳಿವೆ. ಐಹೊಳೆಯ ಮೀನಬಸದಿಯಲ್ಲಿ ಇಂದ್ರನ ಐರಾವತವಾಗಿ ಚಿತ್ರಿತವಾದ ಆನೆಯ ಮೂರ್ತಿಯು ಮಹತ್ವದ್ದಾಗಿದೆ. ಪಲ್ಲವ ಕಲೆಯಲ್ಲಿ ಕಂಡು ಬರುವಂತೆ ನೈಜ ಗಾತ್ರದ ಗಜಗಳು ಚಲುಕ್ಯ ಕಲೆಯಲ್ಲಿ ಮೂಡಿಬಂದಿಲ್ಲ.

## ಗಜ–ವೃಷಭ

ಸಂಯುಕ್ತ ರೂಪದ ಪರಿಕಲ್ಪನೆ ಪ್ರಾಚೀನ ಸಾಹಿತ್ಯದಲ್ಲಿ ಹೇರಳವಾಗಿ ಪ್ರಸ್ತಾಪಿತವಾಗಿದೆ. ಪುರಾಣ ಕತೆಗಳಲ್ಲಿಯ ನರಸಿಂಹ, ಗಣಪತಿ, ದಕ್ಷ ಗರುಡ ಮೊದಲಾದವರು ಸಂಯುಕ್ತ ರೂಪದ ದೇವರು ಅಥವಾ ಅತಿಮಾನವರು. ಪ್ರಯೋಗಶೀಲರಾದ ಚಲುಕ್ಯ ರೂವಾರಿಗಳು ಭಿನ್ನಪ್ರಭೇದದ ಎರಡು ಪ್ರಾಣಿಗಳನ್ನು ಸೇರಿಸಿ ಶಿಲ್ಪದಲ್ಲಿ ಶ್ಲೇಷೆಯನ್ನು ತೋರಿದ್ದಾರೆ. ಗಜ ವೃಷಭ ಶಿಲ್ಪದಲ್ಲಿ ಬೃಹತ್‌ಗಾತ್ರದ ಪ್ರಾಣಿಯಾದ ಆನೆಯ ತಲೆಯಲ್ಲಿ, ಅದಕ್ಕಿಂತ ಚಿಕ್ಕದಾದ ವೃಷಭನ ಮುಖವನ್ನು ಹೊಂದಿಸಿರುವಲ್ಲಿ ಕಲಾವಿದ ಕೌಶಲ್ಯ ಎದ್ದು ಕಾಣುತ್ತದೆ. ಆನೆಯ ತಲೆ ಮತ್ತು ಮುಖವು ವೃಷಭದ ಕುತ್ತಿಗೆಯಲ್ಲಿ ವಿಲೀನವಾಗಿರುವಂತೆ, ವೃಷಭದ ಇಣಿಯ ಮೇಲೆ ಆನೆಯ ಸೊಂಡಿಲು ಇರಿಸಿದಂತೆ ಸಂಯೋಜಿಸಲಾಗಿದೆ. ಹೀಗೆ ಚಾಕ್ಷುಷ ಚಮತ್ಕಾರವನ್ನುಂಟು ಮಾಡುವಂತೆ ಎರಡು ಪ್ರಾಣಿಗಳನ್ನು ವಿಲೀನಗೊಳಿಸಿದ್ದಾರೆ. ಇದನ್ನು ದೃಷ್ಟಿ ಶ್ಲೇಷೆ ಎನ್ನಬಹುದು.

ಗಜ–ವೃಷಭ ಶಿಲ್ಪವು ಚಲುಕ್ಯರ ಹೊಸ ಆವಿಷ್ಕಾರವಾಗಿದೆ³. ಇದು ಬಾದಾಮಿಯ ಶೈವಗುಹೆಯಲ್ಲಿ ದ್ವಾರಪಾಲನ ಪೀಠದ ಕೆಳಗೆ ಮತ್ತು ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಸಭಾಮಂಟಪದ ಕಂಬದ ಮೇಲೆ ಅಲಂಕಾರ ಶಿಲ್ಪವಾಗಿ ಮೂಡಿ ಬಂದಿದೆ. (**ಚಿತ್ರ ೯೨**) ಚಲುಕ್ಯರ ನಂತರದ ಎಲ್ಲ ಅರಸುಮನೆತನಗಳ ದೇವಾಲಯಗಳಲ್ಲಿ ಗಜ ವೃಷಭ ಶಿಲ್ಪವು ಕೆತ್ತನೆಗೊಂಡಿರುವುದನ್ನು ಕಾಣುತ್ತೇವೆ.



**ಚಿತ್ರ ೯೨. ಗಜ ವೃಷಭ, ಶೈವ ಗುಹೆ, ಬಾದಾಮಿ**

[3] Saletore, R.N., Vijayanagar Art, (1982), Delhi, p.179

## ಸಿಂಹ

ಸಿಂಹವು ಶಕ್ತಿ ಮತ್ತು ಶೌರ್ಯದ ಪ್ರತೀಕವೆನಿಸಿದೆ. ಅದು ತನ್ನ ಗುಣ ವಿಶೇಷದಿಂದ ವನರಾಜ ಎಂಬ ಗೌರವಕ್ಕೆ ಪಾತ್ರವಾಗಿದೆ. ಸಿಂಹದ ಮೊಗದಲ್ಲಿ ರಾಜಕಳೆಯಿದೆ. ಆನೆಯಂತಹ ಗಾತ್ರ ಅದಕ್ಕಿಲ್ಲವಾದರೂ ಆನೆಯೊಂದಿಗೆ ಹೋರಾಡುವ ಎದೆಗಾರಿಕೆ ಸಿಂಹಕ್ಕಿದೆ. ಇದು ರಾಜರು ಮೆಚ್ಚುವ ಗುಣ. ಇದರಿಂದಾಗಿ ತಮ್ಮ ಹೆಸರುಗಳಿಗೆ 'ಸಿಂಹ' ಪದವನ್ನು ಸೇರಿಸಿ ಅಭಿಮಾನ ಪಟ್ಟುಕೊಳ್ಳುತ್ತಿದ್ದರು. ಚಲುಕ್ಯ ಅರಸರಲ್ಲಿ ಜಯಸಿಂಹನಿದ್ದರೆ ಪಲ್ಲವರಲ್ಲಿ ನರಸಿಂಹ ವರ್ಮನಿದ್ದನು. ಅರಸರು ತಾವು ಆಸೀನರಾದ ಪೀಠವನ್ನು 'ಸಿಂಹಾಸನ'ವೆಂದು ಕರೆಯುವುದು ವಾಡಿಕೆಯಾಗಿತ್ತು.

ಸಿಂಹ ಚಿತ್ರಗಳ ಪ್ರಾಚೀನತೆ ಹರಪ್ಪ ಸಂಸ್ಕೃತಿಯಷ್ಟು ಹಿಂದಿನದು. ಆ ಕಾಲದ ಮುದ್ರಿಕೆಗಳಲ್ಲಿ ಸಿಂಹದ ಚಿತ್ರಣವಿದೆ. ಅಶೋಕನ ಸ್ತಂಭಗಳು ಸಿಂಹದ ಶಿಲ್ಪಗಳಿಂದ ಅಲಂಕೃತವಾಗಿವೆ. ಅಲಂಕಾರ ಪ್ರತಿಮೆಗಳ ರೂಪದಲ್ಲಿ ಚಲುಕ್ಯ ರೂವಾರಿಗಳು ಸಿಂಹಗಳನ್ನು ಕಟೆದಿದ್ದಾರೆ. ದೇವಾಲಯಗಳ ಅಧಿಷ್ಠಾನಗಳಲ್ಲಿ ಆನೆಯ ಜೊತೆಗೆ ಸಿಂಹದ ಮೂರ್ತಿಗಳು ಪರ್ಯಾಯವಾಗಿ ಸಂಯೋಜಿತವಾಗಿರುವುದನ್ನು ಹಿಂದೆ ಗಮನಿಸಿದ್ದೇವೆ. ವಿಲಕ್ಷಣ ಸೌಂದರ್ಯ ಮತ್ತು ಗಾಂಭೀರ್ಯದಿಂದ ಕೂಡಿದ ಸಿಂಹದ ದೇಹಕ್ಕೆ ಹಲವು ಪ್ರಾಣಿಗಳ ಅಂಗಗಳನ್ನು ಸೇರಿಸಿ (hybridised) ಸಂಕರೀಕರಿಸಿದ ಪ್ರಾಣಿಗಳನ್ನು ಕಲಾವಿದರು ಸೃಜಿಸಿದ್ದಾರೆ. ಇಂತಹ ವಿಸ್ಮಯಕಾರಿ ಕಾಲ್ಪನಿಕ ಪ್ರಾಣಿಗಳಿಂದ ದೇವಾಲಯದ ವಿವಿಧ ವಾಸ್ತು ಅಂಗಗಳನ್ನು ಅಂದಗೊಳಿಸಿದ್ದಾರೆ. ಇಂಥ ಕಾಲ್ಪನಿಕ ಮಿಶ್ರ ಪ್ರಾಣಿಗಳನ್ನು ಯಾಳಿಗಳೆಂದು ಕರೆಯುತ್ತಾರೆ. ಚಲಕ್ಯರ ಶಿಲ್ಪಕಲೆಯಲ್ಲಿ ಸಿಂಹವು ಪ್ರಕಟಗೊಂಡ ಬಗೆಯನ್ನು ಮನಗಾಣಬಹುದು.

ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ನಂದಿಮಂಟಪದಲ್ಲಿಯ ಸಿಂಹವು ಗಮನಾರ್ಹವಾಗಿದೆ. ಅದನ್ನು ಹಿಂಗಾಲುಗಳ ಮೇಲೆ ನಿಂತಿರುವಂತೆ ತೋರಿಸಲಾಗಿದ್ದರೂ ಒಂದು ಕಾಲಿಗೆ ಮಾತ್ರ ಆಧಾರವಿದೆ. ಮುಂಗಾಲುಗಳೆರಡನ್ನೂ ಮೇಲಕ್ಕೆ ಎತ್ತಿ ಕತ್ತನ್ನು ಹಿಂದಕ್ಕೆ ಹೊರಳಿಸಿ ನೆಟ್ಟ ದೃಷ್ಟಿಯಿಂದ ನೋಡುತ್ತಿದೆ. ಅದರ ಮೈಮಣಿತಗಳು ಶಕ್ತಿಯುತವಾಗಿದೆ. ಸಿಂಹವು ಸಾಗುವಾಗ ಆಗೊಮ್ಮೆ ಈಗೊಮ್ಮೆ ಹಿಂದಕ್ಕೆ ಹೊರಳಿ ನೋಡುವುದು ಅದರ ಸಹಜ ಗುಣವಾಗಿದೆ. ಇದರಿಂದಾಗಿಯೇ 'ಸಿಂಹಾವಲೋಕನ' ಎಂಬ ಪದಪ್ರಯೋಗ ರೂಢಿಯಲ್ಲಿದೆ. ಇಲ್ಲಿ ಸಿಂಹವು ಬಾಯಿ ತೆರೆದಿರುವುದರಿಂದ ಗರ್ಜಿಸುತ್ತದೆ ಎಂದು ತಿಳಿಯಬಹುದು. ಸಿಂಹದ ಅಯಾಲವನ್ನು ಲಕ್ಷ್ಯಗೊಟ್ಟು ಬಿಡಿಸಿರುವುದು ವ್ಯಕ್ತವಾಗುತ್ತದೆ.

ವಿರೂಪಾಕ್ಷ ಗುಡಿಯ ಹೊರ ಗೋಡೆಯಲ್ಲಿ ಕೋಷ್ಠ ಶಿಲ್ಪದ ಕೆಳಗಿರುವ ಪೀಠವನ್ನು ಎರಡು ಸಿಂಹಗಳು ಎತ್ತಿ ಹಿಡಿದಿರುವಂತೆ ಕಟೆದಿದ್ದಾರೆ. **(ಚಿತ್ರ ೯೩)** ಒಂದು ಸಿಂಹದ ಮುಖವು ಮುಕ್ಕಾಗಿದೆ. ಇನ್ನೊಂದರ ಮುಖದಲ್ಲಿ ಆನಂದದ ಅಭಿವ್ಯಕ್ತಿಯಿದೆ. ಭಯಂಕರ ಸ್ವರೂಪದ ಸಿಂಹಮುಖದಲ್ಲಿ ಆನಂದದ ಭಾವನೆಯನ್ನು ತೋರಿಸುವಲ್ಲಿ ಶಿಲ್ಪಿಯ ಜಾಣ್ಮೆ



ಚಿತ್ರ ೯೩. ಪೀಠದ ಕೆಳಗೆ ಸಿಂಹಗಳು



ಚಿತ್ರ ೯೪. ಗಜ ಕ್ರಾಂತ

ಎದ್ದು ಕಾಣುತ್ತದೆ. ಶಿಲ್ಪಿಯ ಈ ಕಲ್ಪನೆ ಹೊಸ ಬಗೆಯದು ! ಹಿಂಗಾಲುಗಳನ್ನು ನೆಲಕ್ಕೆ ಆಧರಿಸಿ ಮುಂಗಾಲುಗಳನ್ನು ಮುಂದಿರಿಸಿಕೊಂಡು ಕುಳಿತಿದೆ. ಇದು ಸಿಂಹ ಕುಳಿತುಕೊಳ್ಳುವ ಸಹಜ ಭಂಗಿ.

ಇನ್ನೊಂದೆಡೆ ಸಿಂಹವೊಂದು ಮೂರು ಕಾಲುಗಳ ಮೇಲೆ ನಿಂತು ಇನ್ನೊಂದು ಕಾಲಿನಿಂದ ಪಂಜನ್ನು ತೋರಿಸುವಂತೆ ಚಿತ್ರಣವಿದೆ. ಅದರ ಮುಖವು ಅಭಿಮುಖವಾಗಿದ್ದು, ದೇಹದ ಪಾರ್ಶ್ವನೋಟವನ್ನು ಬಿಂಬಿಸಲಾಗಿದೆ. ಮತ್ತೊಂದೆಡೆಯಲ್ಲಿ ನಂದಿಮಂಟಪದ ಬೋದಿಗೆಯಲ್ಲಿ ಸಿಂಹದ ಕಾಲುಗಳ ಮಧ್ಯೆ ವರಾಹವನ್ನು ಕಂಡರಿಸಲಾಗಿದೆ. ಇದೊಂದು ವಿಚಿತ್ರ ಚಿತ್ರಣವೆನಿಸುತ್ತದೆ.

ಇದೇ ಗುಡಿ ಪದ್ಮನಿಧಿಯ ಕೆಳಗೆ ಸಿಂಹಪೀಠವಿದೆ. ಅಲ್ಲಿ ಮೂರು ಸಿಂಹಗಳಿವೆ. ಅವುಗಳ ಮುಖಗಳು ವಿಭಿನ್ನ ಭಾವನೆಗಳನ್ನು ಹೊರ ಸೂಸುತ್ತಿರುವುದು ಕುತೂಹಲಕಾರಿಯಾಗಿದೆ. ಆನೆಯ ಕುಂಭ ಸ್ಥಳದ ಮೇಲೆ ಕಾಲನ್ನಿಟ್ಟು ಆಕ್ರಮಿಸುವ ಸಿಂಹವನ್ನು 'ಗಜಕ್ರಾಂತ' ಎನ್ನುವದುಂಟು. ಇಂತಹ ಶಿಲ್ಪವೊಂದು ಬಾದಾಮಿ ಶೈವ ಗುಹೆಯ ಕಂಬವನ್ನು ಅಲಂಕರಿಸಿದೆ. **(ಚಿತ್ರ ೯೪)** ವಿಲಕ್ಷಣೀಕರಿಸಿದ (stylised) ಸಿಂಹಮುಖಗಳನ್ನು ಅಧಿಷ್ಠಾನ ಅಲಂಕರಣದಲ್ಲಿ ಬಳಸಲಾಗಿದೆ. ಬಾದಾಮಿಯ ಮಾಲಗಿತ್ತಿ ಶಿವಾಲಯದಲ್ಲಿ ಇಂಥ ಶಿಲ್ಪಗಳ ಉತ್ತಮ ಉದಾಹರಣೆಗಳನ್ನು ಕಾಣಬಹುದು.

ಧಾರ್ಮಿಕ ಶಿಲ್ಪಗಳಲ್ಲಿ ದುರ್ಗಾದೇವಿಯ ವಾಹನವಾಗಿ ಸಿಂಹವು ರಾವಲಫಡಿ, ದುರ್ಗಾದೇವಾಲಯಗಳಲ್ಲಿ ಕಾಣಿಸಿಕೊಂಡಿದೆ. ಹಾಗೆಯೇ ನರಸಿಂಹನು ಸಿಂಹ ವದನನಾಗಿ ಶಿಲ್ಪಿತನಾಗಿದ್ದಾನೆ. ಇದರಂತೆ ಕೀರ್ತಿಮುಖ ಮತ್ತು ಯಾಳಿ (ಈಹಾಮೃಗ) ಶಿಲ್ಪ ಪ್ರಕಾರಗಳಲ್ಲಿ ಸಿಂಹವು ವಿಭಿನ್ನ ಬಗೆಯಾಗಿ ರೂಪತಾಳಿದೆ. ಅಲಂಕಾರ ಶಿಲ್ಪ ಕಂಡರಣೆಗೆ ಸಿಂಹಮುಖವು ಉತ್ತಮ ವಸ್ತುವಾಗಿ ರೂವಾರಿಗಳಿಗೆ ಕಂಡಿದೆ.

**ಕೀರ್ತಿಮುಖ**

ತ್ರಿದಳಾಕೃತಿಯ (trefoil) ಕಮಾನಿನಲ್ಲಿ ಸಂಯೋಜಿಸಲಾದ ಭಯಾನಕ ಸಿಂಹಮುಖದ ಶಿಲ್ಪಾಕೃತಿಯನ್ನು ಕೀರ್ತಿಮುಖ ಎಂದು ಗುರುತಿಸಲಾಗಿದೆ. ಇದು

ವಾಕಾಟಕ–ಗುಪ್ತರ ಕಾಲದ ಕಲಾವಿದರಿಗೆ ಅತ್ಯಂತ ಪ್ರಿಯವಾಗಿತ್ತೆಂದು ತಿಳಿದುಬರುತ್ತದೆ. ಈ ವಿನ್ಯಾಸದ ಅತಿ ಪ್ರಾಚೀನ ಉದಾಹರಣೆಗಳನ್ನು ಅಜಂತೆಯ ಚಿತ್ರ ಮತ್ತು ಶಿಲ್ಪಗಳಲ್ಲಿ ಕಾಣಬಹುದು.[೩] ವೈಶಿಷ್ಟಪೂರ್ಣವಾದ ಈ ಶಿಲ್ಪವು ಭಾರತೀಯ ಕಲೆಯ ಅವಿಭಾಜ್ಯ ಅಂಗವಾಗಿ ಉಳಿದುಕೊಂಡಿದೆ. ಕೀರ್ತಿಮುಖವನ್ನು ಸಿಂಹ ಲಲಾಟ ಎಂದೂ ಹೇಳಲಾಗುತ್ತದೆ. ಸಿಂಹದ ಮುಖವು ವಾಸ್ತವಿಕವಾಗಿರದೆ ಶೈಲೀಕೃತಗೊಳಿಸಿದ್ದಾಗಿರುತ್ತದೆ. ಹೀಗೆ ವೈಭವೀಕರಿಸಿದ ಅಥವಾ ವಿಲಕ್ಷಣೀಕರಿಸಿದ ಸಿಂಹದ ಮುಖದಿಂದ ಮುತ್ತಿನ ಮಾಲೆಗಳು ಇಳಿಬಿದ್ದಿರುವಂತೆ ಶಿಲ್ಪದ ರಚನೆಯಿರುತ್ತದೆ.



ಚಿತ್ರ ೯೫. ಕೀರ್ತಿಮುಖ, ಶೈವ ಗುಹೆ

ಕೀರ್ತಿಮುಖ ಎಂದರೆ ಕೀರ್ತಿಯ ಮುಖ. ಕೀರ್ತಿಮುಖವು ದೇವಾಲಯವನ್ನು ಕಟ್ಟಿಸಿದ ಪೋಷಕನಿಗೆ ಕೀರ್ತಿಯನ್ನು ತರುವುದೆಂದು ನಂಬಲಾಗಿದೆ. ಮುತ್ತುಗಳು ಪ್ರಕಾಶಿಸುವಂತೆ ಆತನ ಹೆಸರು ಪ್ರಕಾಶಿಸುತ್ತದೆಂಬ ಹಾರೈಕೆಯ ಕುರುಹು ಅದಾಗಿದೆ.[೪] ಕೀರ್ತಿಮುಖವು ರಕ್ಕಸನ ತಲೆಯಾಗಿದ್ದು ಶಿಲ್ಪ ಅಥವಾ ದೇವಾಲಯವನ್ನು ನಾಶಪಡಿಸುವವನನ್ನು ಹೆದರಿಸಲು ಕೆತ್ತಲಾದ ವಿನ್ಯಾಸವೆಂದು ಎಂ.ಕೆ. ಧವಳೀಕರ ಅವರ ಅಭಿಪ್ರಾಯ.[೫]

ಹಿಂದೆ ಪ್ರಸ್ತಾಪಿಸಿದಂತೆ, ಈ ಶಿಲ್ಪ ಪ್ರಕಾರವು ಬೌದ್ಧಕಲಾ ಸಂಪ್ರದಾಯದಲ್ಲಿ ಮೊದಲು ಕಾಣಿಸಿಕೊಂಡಿದೆ. ಇದರ ಪ್ರಾಚೀನತೆ ಕ್ರಿ.ಶ. ಎರಡನೆಯ ಶತಮಾನದಷ್ಟು ಹಿಂದಕ್ಕೆ ಹೋಗುತ್ತದೆ. ಇದು ಶೈಲೀಕೃತ (stylized) ಸಿಂಹಮುಖವನ್ನು ಹೊಂದಿರುತ್ತದೆ. ಮತ್ತು ಹೊರಚಾಚಿದ ಕಣ್ಣುಗುಡ್ಡೆಗಳು, ಅಗಲವಾಗಿ ತೆರೆದುಕೊಂಡ ಬಾಯಿ, ಹೊರಗೆ ಇಳಿಬಿದ್ದ ನಾಲಗೆ ಇವುಗಳಿಂದಾಗಿ ಭಯಂಕರವಾಗಿ ಕಾಣುತ್ತದೆ.[೬]

ಚಲುಕ್ಯರ ಗುಹಾಲಯ ಮತ್ತು ರಾಚನಿಕ ಮಂದಿರಗಳ–ಕಂಬಗಳು ವಿಶೇಷವಾಗಿ ಕೀರ್ತಿಮುಖ ಕೆತ್ತನೆಯಿಂದ ಕೂಡಿವೆ. ಬಾದಾಮಿಯ ಶೈವ ಗುಹಾಲಯದಲ್ಲಿ ಬಹುಪಾಲು ಕಂಬಗಳಲ್ಲಿ ಕೀರ್ತಿಮುಖವನ್ನು ಬಿಡಿಸಲಾಗಿದೆ. **(ಚಿತ್ರ ೯೫)** ಅವುಗಳಲ್ಲಿ ಕಾಣಿಸಿಕೊಂಡ ವೈವಿಧ್ಯವು ಅಧ್ಯಯನ ಯೋಗ್ಯವಾಗಿದೆ.

ಐಹೊಳೆಯ ಚಿಕ್ಕಿಗುಡಿಯ ಸಭಾಮಂಟಪದ ಕಂಬಗಳ ಮಧ್ಯದಲ್ಲಿ ಕೀರ್ತಿಮುಖಗಳಿವೆ. ಮಾಲೆಗಳಿಂದಾಗಿ ವಿನ್ಯಾಸವು ಕಲಾತ್ಮಕವಾಗಿದೆ. ಮಾಲೆಗಳ ನಡುವಿನ ಸ್ಥಳಾವಕಾಶದಲ್ಲಿ ಗಣರು ಮತ್ತು ಯಾಳಿಗಳನ್ನು ಕೊರೆದಿದ್ದಾರೆ. ಇದರಿಂದ ಶಿಲ್ಪವು ಹೆಚ್ಚು ಸಂಕೀರ್ಣವಾಗಿದೆ. ಕೊಂತಿ ಗುಡಿಯಲ್ಲಿ ಕೀರ್ತಿಮುಖವನ್ನು ಕಂಬದ ಪದಕ (medallion) ದಲ್ಲಿ ಕೆತ್ತಿರುವರು.

ಚಲುಕ್ಯ ಶಿಲ್ಪದಲ್ಲಿ ಕೀರ್ತಿಮುಖವು ಕಾಣಿಸಿಕೊಂಡ ಇನ್ನೊಂದು ಅಪರೂಪದ ಉದಾಹರಣೆಯೆಂದರೆ ದ್ವಾರಪಾಲರ ಕೇಯೂರ ಆಭರಣ ! ಐಹೊಳೆಯ ಹುಚ್ಚಪ್ಪಯ್ಯಗುಡಿ ಮತ್ತು ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ದ್ವಾರಪಾಲರು ಧರಿಸಿರುವ ಕೇಯೂರಗಳು ಸೂಕ್ಷ್ಮ ಕೆತ್ತನೆಯ ಕುಸುರಿ ಕೆಲಸದಿಂದ ಮೂಡಿ ಬಂದಿವೆ. ಐಹೊಳೆಯ ಕೊಂತಿಗುಡಿಯ ಶಿಖರಭಾಗದಲ್ಲಿ ಕೀರ್ತಿಮುಖವು ಕಂಡರಣೆಗೊಂಡಿದ್ದು ಗಮನಾರ್ಹ ಅಂಶ.

[೩] Dhavalikar M.K.,1973, Ajanta : a cultural study, Pune, P. 23

[೪] Panigrahi, K.C., Archaeological Remains at Bhuvaneshwar, p. 121

[೫] Kusumanjali, Vol. II, (Ed) M. S. Nagaraja Rao, p. 353

[೬] Ramachandra Rao S.K. op.cit P. 323



**ಚಿತ್ರ ೯೬. ಚಲುಕ್ಯ ಲಾಂಛನ, ವರಾಹ**

## ಹಂದಿ

ಚಲುಕ್ಯರು ಹೊಸ ರಾಜ್ಯವನ್ನು ಕಟ್ಟಿದಾಗ ಪರಮಭಾಗವತರಾಗಿದ್ದರು. ಅದಾಗಿ ಅವರ ರಾಜಲಾಂಛನದಲ್ಲಿ ವಿಷ್ಣುವಿನ ಅವತಾರವಾದ ವರಾಹಕ್ಕೆ ವಿಶಿಷ್ಟ ಸ್ಥಾನ ಲಭಿಸಿದೆ. ವಿಷ್ಣು ಭೂ (ದೇವಿಯ) ರಕ್ಷಣೆ ಮಾಡಲೆಂದು ಹಂದಿಯ ರೂಪ ತಳೆದು ಅವತರಿಸಿದ್ದುದೇ ಇದಕ್ಕೆ ಕಾರಣ, ಮತ್ತು ಪ್ರೇರಣೆ. ವಿಷ್ಣು ಭೂಮಿಯನ್ನು ಕಾಪಾಡಿದಂತೆ ತಾವು ಕೂಡ ಭೂರಕ್ಷಣೆ, ಭೂಪಾಲನೆಗೆ ಬದ್ಧರಾದವರೆಂಬ ಸಂದೇಶ ಅರಸರದು.

ಈ ಪೌರಾಣಿಕ ಕತೆಯನ್ನು ನೆನಪಿಸುವ ವರಾಹ ಅವತಾರದ ಕಥಾನಕ ಶಿಲ್ಪವು ಚಲುಕ್ಯರ ಗುಹಾಮಂದಿರ ಮತ್ತು ರಾಚನಿಕ ದೇವಾಲಯಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಂಡಿದೆ. ಆದರೆ ಅಲ್ಲಿ ನಮಗೆ ಕಾಣಸಿಗುವುದು ನರ ಮತ್ತು ವರಾಹನ ಸಂಯುಕ್ತ ರೂಪ. ಸೂಕರ ಮುಖ ಹಾಗೂ ನರ ಮುಂಡದ ವಿಲಕ್ಷಣ ಸಂಯೋಗವದು. ಆದರೆ ಚಲುಕ್ಯರ ಲಾಂಛನದಲ್ಲಿ ವರಾಹನು ಪೂರ್ತಿಯಾಗಿ ಪ್ರಾಣಿರೂಪ (zoomorphic) ದಲ್ಲಿದ್ದಾನೆ. ಈ ಶಿಲ್ಪದ ಚಿತ್ರಣವನ್ನು ಐಹೊಳೆಯ ಲಾಡಖಾನ ಗುಡಿಯ ಕಂಬವೊಂದರ ಮೇಲೆ ಕೆತ್ತಿರುವರು. **(ಚಿತ್ರ ೯೬)** ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ನಂದಿ ಮಂಟಪದಲ್ಲಿ ಬೋದಿಗೆಯ ಹತ್ತಿರ ಸಿಂಹವು ನಿಂತಿರುವಂತೆಯೂ ಅದರ ಕಾಲುಗಳ ನಡುವೆ ಹಂದಿ ನಿಂತಿರುವಂತೆಯೂ ಕಂಡರಣೆ ಮಾಡಿದ್ದಾರೆ. ಸಿಂಹ ಮತ್ತು ಹಂದಿಯ ಈ ರೀತಿಯ ಶಿಲ್ಪ ನಿರೂಪಣೆ ವಿಲಕ್ಷಣವಾದುದು.

ಕಥಾನಕ ಶಿಲ್ಪದ ಅಂಗವಾಗಿ ಹಂದಿಯನ್ನು ಪ್ರಾಣಿರೂಪದಲ್ಲಿ ಕೊರೆದಿರುವುದುಂಟು. ವಿರೂಪಾಕ್ಷ ದೇವಾಲಯದ ಕಂಬವೊಂದರ ಮೇಲೆ ಕಿರಾತಾರ್ಜುನೀಯ ಕತೆಯನ್ನು ನಿರೂಪಿಸಲಾಗಿದೆ. ಮಧ್ಯದಲ್ಲಿ ಹಂದಿಯನ್ನು ಕೊರೆದು ರೂಪಿಸಿದ್ದಾರೆ. ಕಿರಾತವೇಷದ ಶಿವ ಮತ್ತು ಅರ್ಜುನರು ಬಿಟ್ಟ ಬಾಣಗಳು ಅದರ ದೇಹವನ್ನು ನೆಟ್ಟಿರುವುದನ್ನು ತೋರಿಸಿದ್ದಾರೆ.

ಬಾದಾಮಿಯಲ್ಲಿ ಭಾರತೀಯ ಪುರಾತತ್ವ ವಸ್ತು ಸಂಗ್ರಹಾಲಯದ ಬಳಿ ಇರುವ ಅಗಸೆಯ ಕಟ್ಟೆಯ ಮೇಲಂಚಿನ ಪಟ್ಟಿಯಲ್ಲಿ ಬಿಡಿ ಹಂದಿಯ ಪುಟ್ಟ ಮೂರ್ತಿಯಿದೆ. ಆದರೆ ಬಹು ಮಟ್ಟಿಗೆ ಸವೆದು ಹೋಗಿದೆ. ರಾಜ್ಯದ ಕುರುಹಾಗಿ ಇದಕ್ಕೆ ಮಹತ್ವವಿದೆ. ಚಲುಕ್ಯಮನೆತನದ ಮೊದಲ ಅರಸರು ವಿಷ್ಣುವನ್ನು ಕುಲದೇವರೆಂದು ಆರಾಧಿಸಿದ್ದರಿಂದ ವರಾಹವು ರಾಜಲಾಂಛನದ ಭಾಗವಾಗಿದ್ದಿತು. ಆದರೆ ವಿಜಯನಗರ ಅರಸರ ಆರಾಧ್ಯ ದೈವ ವಿಷ್ಣುವಾಗಿರದಿದ್ದರೂ ವರಾಹವು ಲಾಂಛನ ಅಂಗವಾಗಿ ಮುಂದುವರೆಯಿತು. ವರಾಹದ ಮುದ್ರೆ ಇರುವ ಚಿನ್ನದ ನಾಣ್ಯವು 'ವರಹ' ಎಂದೇ ಬಳಕೆಯಲ್ಲಿ ಇದ್ದಿತು. ತಾಮ್ರ ಪಟಗಳ ಉಂಗುರದಲ್ಲಿ ವರಾಹದ ಮುದ್ರಿಕೆ ಸಾಮಾನ್ಯವಾಗಿದ್ದಿತು.

ಭಾರತೀಯ ಕಲೆಯಲ್ಲಿ ವರಾಹ ರೂಪದ ಆಧಿಕ್ಯ ಕಂಡು ಬರುತ್ತದೆ. ಮಹಾಬಲಿಪುರಂದ ವರಾಹ ಶಿಲ್ಪಗಳು ಉಲ್ಲೇಖನೀಯವಾಗಿವೆ. ಕಲಾತ್ಮಕತೆ ಮತ್ತು ಚೆಲುವಿಗಾಗಿ ತುಂಬ ಪ್ರಸಿದ್ಧಿ ಪಡೆದ ವರಾಹನ ಮೂರ್ತಿಯು ಮಧ್ಯಪ್ರದೇಶದ ಖಜುರಾಹೋದಲ್ಲಿದೆ. ೧೧ನೆಯ ಶತಮಾನದಲ್ಲಿ ಚಾಂದೇಲರು ನೀಡಿದ ಅದ್ಭುತ ಕಲಾ ಕಾಣಿಕೆ ಇದು. ವರಾಹನ ಇಡಿ ದೇಹವು ದೇವ ದೇವಿಯರ ಚಿಕಣಿ ಶಿಲ್ಪಗಳಿಂದ ಆಚ್ಛಾದಿತವಾಗಿದೆ. ವಿಜಯನಗರ ಕಾಲದ ದೇವಾಲಯಗಳ ಮೇಲೆ ವರಾಹ ಮೂರ್ತಿಗಳ ಕೆತ್ತನೆಗಳಿವೆ.

## ಮೊಸಳೆ

ಭಾರತೀಯ ವಾಸ್ತುಕಲೆ ಮತ್ತು ಶಿಲ್ಪಕಲೆಯಲ್ಲಿ ಮೊಸಳೆಯು ಸಾಂಪ್ರದಾಯಿಕವಾಗಿ ವಿಶಿಷ್ಟವಾದ ಮತ್ತು ಮಹತ್ವದ ಸ್ಥಾನ ಪಡೆದಿದೆ. ಸಾಂಕೇತಿಕವಾಗಿ ಬಳಸಲಾದ ಮಕರ ಶಿಲ್ಪವು ತನ್ನ ವಿಶಿಷ್ಟ ಅಂಗರಚನೆಯಿಂದ ಹೆಚ್ಚು ಜನಪ್ರಿಯವೂ ಆಗಿದೆ. ಮಕರವು ಆಲಂಕಾರಿಕವಾಗಿ ಅನೇಕ ರೂಪು ವ್ಯತ್ಯಾಸಗಳೊಂದಿಗೆ ಕಂಡರಣೆಗೊಂಡಿದೆ. ಇದರಿಂದಾಗಿ ಮಕರಶಿಲ್ಪಗಳು ಅಧ್ಯಯನ ಯೋಗ್ಯವಾಗಿವೆ.

ವಿಶೇಷತಃ ಮಕರದ ಬಾಲವು ನೈಜ ಸ್ವರೂಪದಲ್ಲಿ ಚಿತ್ರಿತವಾಗಿರದೆ ಸಂಕೀರ್ಣ ಬಳ್ಳಿ ಮತ್ತು ಬಳ್ಳಿಗಳ ಕುಡಿಗಳಿಂದ ತೊಡಕು ತೊಡಕಾಗಿ ಚೆಲುವಿನ ನಕ್ಷೆಯಾಗಿ ಕಾಣಿಸಿಕೊಳ್ಳುತ್ತದೆ. ಈ ಬಳ್ಳಿಗಳು ಜೀವರಾಶಿಯ ಸಂಕೇತ. ಮಕರವು ಸಕಲ ಜೀವಿಗಳಿಗೆ ಚೈತನ್ಯವನ್ನು ತುಂಬುವಂತಹದು.

ಮಕರವು ಜಲಚರ ಪ್ರಾಣಿಗಳ ರಾಜ. ಜಲವು ಜೀವವನ್ನೂ, ಜೀವಶಕ್ತಿಯನ್ನೂ ನೀಡುವಂತಹದು. ಆದ್ದರಿಂದ ನೀರು ಜೀವನದ ಮೊದಲ ಆಧಾರ ತತ್ವವಾಗಿದೆ. ಈ ನೀರನ್ನು ಶುದ್ಧೀಕರಣಗೊಳಿಸುವುದರ ಮೂಲಕ ಜೀವ ಜಗತ್ತನ್ನು ಕಾಪಾಡುವ ಪ್ರಾಣಿ ಮಕರ. ಅಂತೆಯೇ ಗೀತಾಚಾರ್ಯನು ಭಗವದ್ಗೀತೆಯಲ್ಲಿ ಜಲಚರ ಪ್ರಾಣಿಗಳಲ್ಲಿ ತಾನು ಮಕರನೆಂದು ಸಾರಿದ್ದಾನೆ.[೭] ಮಕರದ ಶ್ರೇಷ್ಠತೆ ಮತ್ತು ಪಾವಿತ್ರ್ಯ ಇದರಿಂದ ವ್ಯಕ್ತವಾಗುತ್ತದೆ.

ಜಲಚರ ಪ್ರಾಣಿಗಳ ಅರಸನೆನಿಸಿದ ಮೊಸಳೆ, ನದೀದೇವತೆಯಾದ ಗಂಗೆ ಮತ್ತು ಮಳೆಯ ದೇವತೆಯಾದ ವರುಣನಿಗೆ ವಾಹನವಾಗಿದೆ. ನೀರಿನಿಂದ ಸಕಲ ಜೀವರಾಶಿಗಳ ಉಗಮ. ಮಕರ ಮತ್ತು ಮೀನುಗಳು ನೀರನ್ನು ಶುದ್ಧೀಕರಿಸುತ್ತವೆ. ಈ ಕಾರಣದಿಂದ ಮಕರದ ಬಾಯಿಯಿಂದ ಗಿಡ, ಬಳ್ಳಿಗಳು, ಪ್ರಾಣಿಗಳು ಮತ್ತು ಮಾನವರು ಹೊರಬರುವಂತೆ ತೋರಿಸಿರುತ್ತಾರೆ. ಇದು ಜೀವ ತತ್ವವನ್ನು ವಿವರಿಸುತ್ತದೆ. ಮಕರದ ಮುಖದಿಂದ ಮುತ್ತಿನ ಸರಗಳು ಇಳಿ ಬಿದ್ದಿರುವಂತೆ ಶಿಲ್ಪ ರಚನೆ ಇರುತ್ತದೆ. ಪರೋಕ್ಷವಾಗಿ ಸಕಲ ಸಿರಿ ಸಂಪತ್ತು ಹರಿದು ಬರುವುದು ಮಕರದಿಂದಲೇ ಎಂಬ ಕಲಾವಿದನ ವಿಚಾರ ಅಲ್ಲಿ ಮೂರ್ತರೂಪ ಪಡೆದಿದೆ.

ಭಾರತೀಯ ಶಿಲ್ಪ ಪರಂಪರೆಯಲ್ಲಿ ಮಕರವು ನಮಗೆ ಮೊದಲ ಬಾರಿ ಗೋಚರಿಸುವುದು ಬುದ್ಧಗಯಾದಲ್ಲಿ. ಅಶೋಕನು ಕ್ರಿ. ಪೂ. ೨೫೦ ರಲ್ಲಿ ನಿರ್ಮಿಸಿದ ಮಹಾಬೋಧಿಯ ಕಟಕಟೆ (railing)ಯಲ್ಲಿ[೮] ಭಾರ್ಹುತ್ ಸ್ತೂಪದಲ್ಲಿ (ಕ್ರಿ. ಪೂ. ೧ನೇ ಶತ) ಇದು ಯಕ್ಷಿಯೊಂದರ ವಾಹನವಾಗಿ ಕಾಣಿಸಿಕೊಂಡಿದೆ. ನಂತರ ಇದು ಶೈಲೀಕೃತಗೊಂಡು ಹೆಚ್ಚು ಆಕರ್ಷಕವೂ, ಜನಪ್ರಿಯವೂ ಆಯಿತು. ಗಂಗೆಯ ವಾಹನವಾಗಿ ಮಕರವು ಗುಪ್ತರ (terreacotta) ಮೃಣ್ಮಯ ಶಿಲ್ಪಗಳಲ್ಲಿ ಪ್ರಕಟಗೊಂಡಿರುವುದನ್ನು ಹಿಂದೆ ಮನಗಂಡಿದ್ದೇವೆ. ಜೈನಶಿಲ್ಪಕಲೆಯಲ್ಲಿ ಒಂಭತ್ತನೆಯ ತೀರ್ಥಂಕರನಾದ ಪುಷ್ಪದಂತನ ಲಾಂಛನವಾಗಿಯೂ ಮಕರ ಶಿಲ್ಪಿತವಾಗಿದೆ.

ಮಾನಸಾರ ಗ್ರಂಥವು ಜೈನ ತೀರ್ಥಂಕರರು ಮಕರ ತೋರಣಗಳಿಂದ ಸಿಂಗಾರಗೊಂಡ ಸಿಂಹಾಸನಗಳಲ್ಲಿ ಪ್ರತಿಷ್ಠಾಪಿತರೆಂದು ನೇಮಿಸುತ್ತದೆ.[೯] ಭಾರ್ಹುತ್, ಮಥುರಾ, ಅಜಂತಾ,ಅಮರಾವತಿಗಳಲ್ಲಿ ಮಕರ ಶಿಲ್ಪಗಳನ್ನು ಕಾಣುತ್ತೇವೆ. ಮಕರ ಶಿಲ್ಪಗಳನ್ನು ರಚಿಸುವಲ್ಲಿ ಚಲುಕ್ಯ ಶಿಲ್ಪಿಗಳು ಹೆಚ್ಚಿನ ಒಲವು ತೋರಿದ್ದಾರೆ. ಭಾಗವತ ಪುರಾಣ ಮತ್ತು ಪಂಚತಂತ್ರ ಕತೆಗಳಲ್ಲಿ ಮಕರವು ಜಲಚರ ಪ್ರಾಣಿಯಾಗಿರುವುದರ ಜೊತೆಗೆ ನೆಲದ ಮೇಲೂ ವಾಸಿಸುವ ಉಭಯವಾಸಿ ಪ್ರಾಣಿಯಾಗಿ ಚಿತ್ರಿತವಾಗಿದೆ. ಆದರೆ ನೈಜರೂಪದಲ್ಲಿ ಕೆತ್ತನೆ ಮಾಡಿದುದು ಕಡಿಮೆ. ಪಂಚತಂತ್ರ ಕತೆಯ ಭಾಗವಾಗಿದ್ದ ಮಕರದ ಚಿತ್ರಣ ನೈಜ ಸ್ವರೂಪದ್ದಾಗಿರುತ್ತದೆ.

[೭] ಶ್ರೀ ಮದ್ಭಗವದ್ಗೀತಾ, ಅಧ್ಯಾಯ ೧೦, ಶ್ಲೋಕ ೩೧

[೮] Saletore, R.N., op.cit. P.181.

[೯] Ramachandra Rao S.K. op.cit P. 1109


ಚಿತ್ರ ೯೭. ಮಂಗ-ಮೊಸಳೆ ಕತೆ

ಸಾಂಪ್ರದಾಯಿಕ ಶಿಲ್ಪದಲ್ಲಿ ಮಕರವು, ಆನೆ, ಖಡ್ಗಮೃಗ, ಮೇಷಗಳ ಕಾಲ್ಪನಿಕವಾದ ಸಂಯುಕ್ತ ರೂಪವಾಗಿದೆ.[70] ಹಲವು ವಿವಿಧ ಪ್ರಾಣಿಗಳ ಅಂಗಗಳನ್ನು ಹೀಗೆ ಹದವಾಗಿ ಮೇಳೈಸಿ ರೂಪಿಸಿದ ಕಾಲ್ಪನಿಕ ಪ್ರಾಣಿ ಇನ್ನೊಂದಿರಲಾರದು. ಹಲವಾರು ಶಿಲ್ಪಿಗಳ, ಹಲವಾರು ವರ್ಷಗಳ ಪ್ರಯೋಗಗಳ ಪರಿಣಾಮವಾಗಿ ಮೈದಳೆದ ವಿಲಕ್ಷಣ ಜೀವಿ ಇದು. ಕಲಾವಿದರಿಗೆ ಆಹ್ವಾನ ನೀಡುವ ಸಂಕೀರ್ಣ ಶಿಲ್ಪ ಈ ಸಾಂಪ್ರದಾಯಿಕ ಮಕರವಾಗಿದೆ.

ಚಲುಕ್ಯರ ದೇವಾಲಯಗಳಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಅಲಂಕಾರ ಶಿಲ್ಪವಾಗಿ ಮಕರವನ್ನು ಬಳಸಿರುವರು. ಬಾದಾಮಿಯ ಶೈವ ಗುಹಾಲಯದ ವಿತಾನದ ಮಧ್ಯದ ಅಂಕಣದಲ್ಲಿ ಸುರುಳಿಯಾಗಿ ಸುತ್ತಿಕೊಂಡ ನಾಗರಾಜನನ್ನು ಚತುರಸ್ರಾಕೃತಿಯ ಚೌಕಟ್ಟಿನಲ್ಲಿ ಸಂಯೋಜಿಸಿದ್ದಾರೆ. ಇದರಿಂದ ಉಂಟಾದ ಮೂಲೆಗಳಲ್ಲಿ ಮಕರ ಚಿತ್ರಗಳನ್ನು ಬಿಡಿಸಲಾಗಿದೆ. ಐಹೊಳೆಯ ಮೀನ ಬಸದಿಯ ವಿತಾನವು ಸೂಕ್ಷ್ಮ ಕೆತ್ತನೆಗಳಿಂದ ಕೂಡಿ ಅತ್ಯಂತ ಮೋಹಕವಾಗಿದೆ. ಇಲ್ಲಿ ಮೊಸಳೆಯ ಬಾಯಿಯಿಂದ ಮಾನವರು ಹೊರಬರುವ ಸುಂದರ ಚಿತ್ರಣವಿದೆ. ಐಹೊಳೆಯ ಚಿಕ್ಕಿಗುಡಿಯ ಮೇಲ್ಛಾವಣಿಯನ್ನು ಕೂಡ ಹೀಗೆಯೇ ಸಿಂಗರಿಸಲಾಗಿದೆ. ಚೌಕಾಕಾರದ ಅಂಕಣದ ಮಧ್ಯದಲ್ಲಿ ವರ್ತುಲ ವಿನ್ಯಾಸದಲ್ಲಿ ಕಮಲ ಪುಷ್ಪವಿದ್ದು ಮೂಲೆಗಳಲ್ಲಿ ಮಕರಗಳನ್ನು ರೂಪಿಸಿದ್ದಾರೆ. ಬಾದಾಮಿಯ ಶೈವ ಗುಹೆಯಲ್ಲಿ ಮೇಲ್ಛಾವಣಿಯ ತೊಲೆಗಳು ಮಕರ ಮುಖಗಳಿಂದ ಅಲಂಕೃತವಾಗಿವೆ. ಬಾಯಿಯಿಂದ ಹೊರಬರುವ ಪ್ರಾಣಿ ಇಲ್ಲವೆ ಮಾನವ ದೇಹವು ಕಂಬದ ಬೋದಿಗೆಯನ್ನು ಅಂದಗೊಳಿಸಿದೆ. ಐಹೊಳೆ ಕೊಂತಗುಡಿ–೨–ರಲ್ಲಿ ಶಿಖರ ಭಾಗದಲ್ಲಿ ಮಕರಶಿಲ್ಪದ ಅಲಂಕರಣವಿದೆ.

ಮಹಾವಿಷ್ಣುಗೃಹದ ಕಂಬವೊಂದರ ಪದಕದಲ್ಲಿ ಮಕರಾರೂಢ ವರುಣನಿದ್ದಾನೆ. ಅದರ ಸಭಾಮಂಟಪದ ಮೇಲ್ಛಾವಣಿಯ ಪಶ್ಚಿಮ ಅಂಕಣದಲ್ಲಿ ಕೂಡ ವರುಣನನ್ನು ಮಕರದೊಂದಿಗೆ ಶಿಲ್ಪಿಸಿದ್ದಾರೆ. ನದೀ–ದೇವತೆಗಳು ಪ್ರಧಾನ ಅಲಂಕಾರ ಶಿಲ್ಪಗಳಾಗಿ ಚಲುಕ್ಯರ ದೇವಾಲಯಗಳಲ್ಲಿ ಶಿಲ್ಪಿತರಾಗಿದ್ದಾರೆ. ಗಂಗೆಯ ವಾಹನವಾಗಿ ಮಕರವು ತಪ್ಪದೆ ಕಾಣಿಸಿಕೊಂಡಿದೆ. ಆದರೆ ಈ ಮಕರ ಶಿಲ್ಪಗಳು ಹೆಚ್ಚಾಗಿ ಸಾಂಕೇತಿಕವಾಗಿವೆ. ಅದಾಗಿ ಅವು ನೈಜ ಸ್ವರೂಪದಲ್ಲಿರದೇ ಅಲಂಕಾರಿಕವಾಗಿ ಶೈಲೀಕೃತಗೊಂಡಿವೆ. ಮೊಸಳೆಯನ್ನು ಸಹಜ ಶರೀರದ ಸ್ಥಿತಿಯಲ್ಲಿ ನಾವು ಕಾಣುವುದು ಪಂಚತಂತ್ರಕತೆಯ ನಿರೂಪಣೆಯಲ್ಲಿ. ಪಟ್ಟದಕಲ್ಲಿನ ಮಲ್ಲಿಕಾರ್ಜುನ ದೇವಾಲಯದ ಸಭಾಮಂಟಪದ ಒಂದು ಕಂಬದಲ್ಲಿ ಪಂಚತಂತ್ರದಲ್ಲಿಯ ಮಂಗ ಮೊಸಳೆಯ ಕಥೆಯನ್ನು ಕೆತ್ತಿದ್ದಾರೆ. **(ಚಿತ್ರ ೯೭)** ಈ ಶಿಲ್ಪದ ಕಂಡರಣೆಯಲ್ಲಿ ಮೊಸಳೆಯ ದೇಹ ರಚನೆಯು ಸಹಜ ಸ್ವರೂಪದ್ದಾಗಿ ಚಿತ್ರಿತವಾಗಿದೆ. ಆದರೆ ಕಲಾದೃಷ್ಟಿಯಿಂದ ಇದು ಬಡವಾದುದು. ಈ ಬಗೆಯ ಶಿಲ್ಪ ರಚನೆಯಲ್ಲಿ ಕಲಾವಿದನಿಗೆ ಮುಖ್ಯವಾದದ್ದು ಕಥಾ ನಿರೂಪಣೆಯೇ ಹೊರತು ಆಲಂಕಾರಿಕ ಕೆತ್ತನೆಯಲ್ಲ ಎಂಬುದನ್ನು ಗಮನಿಸಬೇಕು.

### ಮಕರತೋರಣ

ಶಿಲ್ಪದಲ್ಲಿ ತೋರಣಗಳು ಪ್ರಧಾನ ಅಲಂಕಾರ ಭಾಗಗಳಾಗಿರುತ್ತವೆ. ಇವು ಸಾಮಾನ್ಯವಾಗಿ ಭಿತ್ತಿ, ದ್ವಾರಬಂಧ, ಮತ್ತು ಜಾಲಂಧ್ರಗಳ ಮೇಲೆ ಕಂಡು ಬರುವ ಕಮಾನುಗಳು. ಮುಖ್ಯವಾಗಿ ಮಕರಗಳನ್ನು ಹೊಂದಿದ ಕಮಾನವು ಮಕರತೋರಣವೆನಿಸುತ್ತದೆ. ಸಾಮಾನ್ಯವಾಗಿ ಎರಡು ಮಕರಗಳು ಎದುರಾಗಿದ್ದು ಮಧ್ಯದಲ್ಲಿ ಅವುಗಳ ಮುಖಗಳು ಕೂಡಿಕೊಂಡು ಕಮಾನಿನ ಆಕಾರವನ್ನು ತಾಳುತ್ತವೆ. ಈ ಕಮಾನವು

[70] Adinarayana, M., op.cit. P. 84.



ಚಿತ್ರ ೯೮. ಮಕರ ತೋರಣ

ಅತ್ಯಂತ ಆಲಂಕಾರಿಕವಾಗಿರುತ್ತದೆ. ಎರಡೂ ಮಕರಗಳ ದವಡೆಗಳಿಂದ ಹೊರ ಬರುತ್ತಿರುವ ಲತಾ ಬಳ್ಳಿಗಳನ್ನು ಅದು ಒಳಗೊಂಡಿರುತ್ತದೆ.[⁗] ಪಟ್ಟದಕಲ್ಲಿನಲ್ಲಿ ಜಾಲಂಧ್ರದ ಮೇಲೆ ವಿರುದ್ಧ ದಿಕ್ಕುಗಳಲ್ಲಿ ಮುಖ ಮಾಡಿರುವ ಮತ್ತು ಸುರುಳಿಗೊಂಡ ಬಾಲಗಳಿರುವ ಮಕರಗಳು ಕುತೂಹಲ ಕಾರಿಯಾಗಿವೆ. **(ಚಿತ್ರ ೯೮)**

ಚಲುಕ್ಯ ರೂವಾರಿಗಳು ಮಕರತೋರಣಗಳನ್ನು ಹಲವು ವಿಧವಾಗಿ ಚಿತ್ರಿಸಿದ್ದಾರೆ. ಶಿಲ್ಪದಲ್ಲಿನ ಸ್ಥಳಾವಕಾಶವನ್ನು ಗಮನಿಸಿ ಈ ಶಿಲ್ಪ ಪ್ರಕಾರವನ್ನು ಬಿಡಿಸಿದ್ದಾರೆ. ದೇವಾಲಯದ ಹೊರಗೋಡೆಯಲ್ಲಿ ದೇವಕೋಷ್ಠಕ್ಕೆ ಕಿರೀಟೋಪಾದಿಯಲ್ಲಿ ಕಾಣುವ ತೋರಣಗಳು ಚಲುಕ್ಯರ ಉತ್ತಮ ಕಲಾಕೃತಿಗಳೆನಿಸಿವೆ. ತೋರಣದ ಮೇಲ್ತುದಿಯಲ್ಲಿ , ಮಧ್ಯದಲ್ಲಿ ಕೀರ್ತಿಮುಖದ ಕೆತ್ತನೆ ಹೆಚ್ಚಿನ ಚೆಲುವನ್ನು ತಂದುಕೊಟ್ಟಿದೆ.



ಚಿತ್ರ ೯೯. ಮಕರ ತೋರಣ (ಕಿರಿದಾದ ಬಾಲ), ಸಂಡೂರು

ಸಾಮಾನ್ಯವಾಗಿ ಚಲುಕ್ಯ ಕಲಾವಿದರು ಮೊದಮೊದಲು ರಚಿಸಿದ ಮಕರಗಳ ಬಾಲಗಳು ಕಿರಿದಾಗಿವೆ. ಎಂಟನೆಯ ಶತಮಾನದಲ್ಲಿ ಕೊರೆಯಲಾದ ಮಕರತೋರಣಗಳಲ್ಲಿ ಉದ್ದ ಬಾಲವಿರುವುದನ್ನು ಕಾಣುತ್ತೇವೆ. ಇದು ಈ ಶಿಲ್ಪದ ಬೆಳವಣಿಗೆಯನ್ನು ಸೂಚಿಸುತ್ತದೆ.

ಮಾಲಗಿತ್ತಿ ಶಿವಾಲಯದ ಭಿತ್ತಿಯಲ್ಲಿ ನಾಲ್ಕು ಆಯತಾಕಾರದ ಜಾಲಂಧ್ರಗಳಿವೆ. ಪ್ರತಿಯೊಂದು ವಾತಾಯನದ ಮೇಲೆ ಮತ್ತು ಪೂರ್ವಗೋಡೆಯ ಎರಡು ದೇವಕೋಷ್ಠಗಳ ಮೇಲೆ ಮಕರತೋರಣಗಳಿವೆ. ಈ ಮಕರಗಳ ಬಾಲಗಳು ಕಿರಿದಾಗಿರುವುದನ್ನು ಗಮನಿಸಬಹುದು. **(ಚಿತ್ರ ೯೯)** ಮಕರಗಳು ರತ್ನಮಾಲೆಯನ್ನು ಹೊರ ಚಾಚಿಸುವಂತೆ ತೋರಿಸಲಾಗಿದೆ. ಇಲ್ಲಿ ಮಕರಗಳ ಮೇಲೆ ಗಣರು ಆರೂಢರಾಗಿದ್ದಾರೆ. ತೋರಣದ

[⁗] ದ್ವಯೋರ್ ಮಕರಯೋರ್ ವಕ್ತ್ರೈಃ ಶಕ್ತಮ್ ಮಧ್ಯಮ ಪೂರಿತಂ । ನಾನಾ ವಿಧ ಲತಾಯುಕ್ತಂ ಏತಂ ಮಕರತೋರಣಂ – ಕಾಮಿಕಾಗಮ : ೫೫ : ೬೫



ಚಿತ್ರ ೧೦೦. ಮಕರ ತೋರಣ (ಉದ್ದಾದ ಬಾಲ) ಪಟ್ಟದಕಲ್ಲು

ಮಧ್ಯದಲ್ಲಿ ಮೇಲೆ ಕಮಲಪುಷ್ಪದ ಅಲಂಕಾರವಿದೆ. ಸಂಡೂರಿನ ಪಾರ್ವತಿ ಗುಡಿಯಲ್ಲಿ ಕಂಡು ಬರುವ ಮಕರತೋರಣಗಳಲ್ಲಿ ಕೂಡ ಕಿರಿದಾದ ಬಾಲಗಳಿವೆ.

ಐಹೊಳೆಯ ಹುಚ್ಚಪ್ಪಯ್ಯ ಗುಡಿಯು ನಂತರದ ಕಾಲದ್ದು. ಇದರ ಕೋಷ್ಠಗಳು ' ಮಕರತೋರಣಗಳಿಂದ ಸಿಂಗರಗೊಂಡಿದ್ದು ಈ ಮಕರಗಳ ಬಾಲಗಳು ದೀರ್ಘವಾಗಿ, ಕೆಳಗೆ ಚಾಚಿಕೊಂಡಿವೆ. ಇವುಗಳಿಂದಾಗಿ ಕೋಷ್ಠಕ್ಕೆ ಹೆಚ್ಚಿನ ಕಳೆ ಬಂದಂತಾಗಿದೆ.

ವಿರೂಪಾಕ್ಷ ದೇವಾಲಯದ ಉತ್ತರ ಗೋಡೆಯ ಮೇಲಿನ ಅಷ್ಟಭುಜಿ ವಿಷ್ಣುವಿನ ವಿಗ್ರಹಕ್ಕೆ ಕಿರೀಟದಂತಿರುವ ಮಕರತೋರಣವು ಒಂದು ಅದ್ಭುತ ಕಲಾಸೃಷ್ಟಿ. (**ಚಿತ್ರ ೧೦೦**) ಮಕರ ತೋರಣವು ಎರಡು ಸ್ತಂಭಿಕೆಗಳ ನಡುವಿನ ಸೇತುವೆಯಂತಿದೆ. ಮತ್ತು ಅತ್ಯಂತ ಆಳಕೆತ್ತನೆಯ ಸಂಕೀರ್ಣ ನಕ್ಷೆಗಳಿಂದ ಕೂಡಿ ಮನೋಹರವಾಗಿದೆ. ತೋರಣದ ಮಧ್ಯದಲ್ಲಿ ಪೀಠದ ಮೇಲೆ ಶಿವಪಾರ್ವತಿಯರು ವಿನೋದ ಲಹರಿಯಲ್ಲಿದ್ದಾರೆ. ಮಕರಗಳಿಗೆ ರೂವಾರಿಯು ಆನೆಯ ಸೊಂಡಿಲನ್ನು ಸಂಯೋಜಿಸಿದ್ದಾನೆ. ಎರಡೂ ಸೊಂಡಿಲುಗಳನ್ನು ಆನೆಗಳು ಮೇಲೆತ್ತಿ ಹಿಡಿದಿವೆ. ದ್ವಿಪಾರ್ಶ್ವೀಯ ಸಮರೂಪತೆಯನ್ನು ಕಲಾವಿದನು ಸಾಧಿಸಿದ್ದಾನೆ. ಮಕರಾರೂಢನಾಗಿ ಒಬ್ಬ ಗಣನನ್ನು ಮಧ್ಯೆ ರೂಪಿಸಲಾಗಿದೆ. ಸ್ಥಳಾವಕಾಶವನ್ನು ಶಿಲ್ಪ ರಚನೆಗೆ ಬಳಸುವಲ್ಲಿ ಶಿಲ್ಪಿಯು ಜಾಣ್ಮೆಯನ್ನು ತೋರಿದ್ದಾನೆ. ಕೌಶಲ್ಯದ ಜೊತೆಗೆ ರೂವಾರಿಯ ಕಲ್ಪನಾ ವಿಲಾಸವು ಲಾಸ್ಯವಾಡಿದೆ.

ಮಕರತೋರಣದ ನಿರ್ವಹಣೆಯಲ್ಲಿ ಪ್ರಾಚೀನ ಕಲಾಕಾರರು ಹಲವು ಸಾಧ್ಯತೆಗಳನ್ನು ತೋರಿಸಿದ್ದಾರೆ. ಈ ದೇವಾಲಯದ ಗರ್ಭಗೃಹದ ಮಕರತೋರಣದಲ್ಲಿ ಯೋಧ, ಸಂಗೀತಗಾರರು ಹೊರಬರುತ್ತಿರುವಂತೆ ಶಿಲ್ಪಿಸಲಾಗಿದೆ. ಇಂಥ ವೈವಿಧ್ಯದ ವಿವರಗಳು ಕೃತಿಯ ಎಲ್ಲೆಯಾಚೆಗಿನವು.

## ಕುದುರೆ

ಕುದುರೆಯು ಕ್ರಿಯಾಶೀಲತೆಯ ಸಂಕೇತವೆನಿಸಿದೆ. ಅದರ ಮೇಲೆ ಕುಳಿತುಕೊಂಡು ಅತ್ಯಂತ ವೇಗವಾಗಿ ಚಲಿಸಬಹುದು. ವೇದಕಾಲದಲ್ಲಿ ಜನರಿಗೆ ಕುದುರೆಯ ಬಳಕೆ ಚೆನ್ನಾಗಿ ತಿಳಿದಿತ್ತು. ಅಶ್ವಾರೋಹಣ ರಾಜನ ಅರ್ಹತೆಗಳಲ್ಲಿ ಒಂದಾಗಿದ್ದಿತ್ತು. ಸಾಮ್ರಾಜ್ಯ ಸ್ಥಾಪನೆಯ ಪ್ರತೀಕವಾಗಿ ಅಶ್ವಮೇಧ ಯಜ್ಞವನ್ನು ಆಚರಿಸಲಾಗುತ್ತಿತು. ವೇದಕಾಲದಲ್ಲಿ ಈ ವಿಶಿಷ್ಟ ಯಾಗಕ್ಕೆ ಸಂಬಂಧಿಸಿದಂತೆ ಸ್ತೋತ್ರಗಳಿವೆ.[೧೨] ಶತಪಥ ಬ್ರಾಹ್ಮಣ, ರಾಮಾಯಣ, ಮಹಾಭಾರತ ಮೊದಲಾದವುಗಳಲ್ಲಿ ಅಶ್ವಮೇಧದ ವರ್ಣನೆ ಇದೆ.[೧೩] ಹೆಸರೇ ಸೂಚಿಸುವಂತೆ ಈ ಆಚರಣೆಯಲ್ಲಿ ಕುದುರೆ ಬಲಿಪಶು.

ಚಲುಕ್ಯ ವಂಶದ ಮೊದಲ ಸ್ವತಂತ್ರ ದೊರೆ ಒಂದನೆಯ ಪೊಲೆಕೇಶಿಯು ಅಶ್ವಮೇಧ ಯಜ್ಞವನ್ನು ನೆರವೇರಿಸಿದುದು ಶಾಸನಗಳಿಂದ ವೇದ್ಯ.[೧೪] ವಿರೂಪಾಕ್ಷ ದೇವಾಲಯದ ಕಂಬವೊಂದರಲ್ಲಿ, ಸಗರನ ಪುತ್ರರು ಅಶ್ವಮೇಧ ಯಜ್ಞದ ಕುದುರೆಯನ್ನು ಕಪಿಲನ ಆಶ್ರಮದಲ್ಲಿ ಬಿಟ್ಟ ಸನ್ನಿವೇಶವನ್ನು ಕಂಡರಿಸಿರುವರು.

ಕುದುರೆಯು ಶಕ್ತಿಯುತ ಆಗಿರುವುದರ ಜೊತೆಗೆ ತುಂಬಾ ವೇಗದಿಂದ ಓಡುವ ಪ್ರಾಣಿಯಾಗಿದೆ. ಇದರಿಂದ ಯುದ್ಧರಂಗದಲ್ಲಿ ಇದು ಪ್ರಯೋಜನಕಾರಿ. ಅಶ್ವದಳ ಎಂಬುದು

ಕನ್ನಡ ವಿಶ್ವಕೋಶ. ಸಂ.೧, ಪು.೫೭೬.

ಅದೇ

K. I. Vol.II, No.2, & IA, Vol. XIX, pp 7-20.



ಚಿತ್ರ ೧೦೧. ರಥಕ್ಕೆ ಹೂಡಿದ ಕುದುರೆಗಳು

ರಾಜನ ಸೇನೆಯ ಪ್ರಧಾನ ಅಂಗವಾಗಿದ್ದಿತು. ಒಂದನೆಯ ವಿಕ್ರಮಾದಿತ್ಯನು 'ಚಿತ್ರಕಂಠ' ಕುದುರೆಯ ನೆರವಿನಿಂದ ಗೆಲವು ಸಾಧಿಸಿದನೆಂಬುದು ಶಾಸನದಿಂದ ತಿಳಿದುಬರುತ್ತದೆ.[೧೫] ಅಶ್ವದಳದ ಚಿತ್ರಣವು ಪಟ್ಟದಕಲ್ಲಿನ ಮಲ್ಲಿಕಾರ್ಜುನ ಗುಡಿಯ ಪಟ್ಟಿಕೆಯಲ್ಲಿದೆ. ಯುದ್ಧದ ಸನ್ನಿವೇಶಗಳಲ್ಲಿ ರಥಗಳಿವೆ. ಅವನ್ನು ಕುದುರೆಗಳು ರಭಸದಿಂದ ಎಳೆದೊಯ್ಯುತ್ತಿವೆ. ಇಂಥ ದೃಶ್ಯಗಳನ್ನು ಪಟ್ಟದಕಲ್ಲಿನ ದೇವಾಲಯಗಳ ಕಂಬಗಳಲ್ಲಿ ಕಾಣುತ್ತೇವೆ. **(ಚಿತ್ರ ೧೦೧)**

ಬೇಟೆ ಅರಸರ ಕ್ರೀಡೆಯಾಗಿತ್ತು. ಈ ಆಟವನ್ನು ಸೋಮೇಶ್ವರನು ವಾಹಜಾ (=ಅಶ್ವಜಾ) ಎಂದು ಕರೆಯುತ್ತಾನೆ.[೧೬] ಇಂಥ ಬೇಟೆಯ ದೃಶ್ಯವನ್ನು ಪಟ್ಟದಕಲ್ಲಿನ ಮಲ್ಲಿಕಾರ್ಜುನ ಗುಡಿಯಲ್ಲಿ ಕಾಣುತ್ತೇವೆ. ಇನ್ನೊಂದೆಡೆ ಇಬ್ಬರು ಅಶ್ವಾರೋಹಿಗಳು ಹಂದಿಯ ಬೇಟೆಯನ್ನಾಡುವ ಸನ್ನಿವೇಶವನ್ನು ಕಂಡರಿಸಿದ್ದಾರೆ.



ಚಿತ್ರ ೧೦೨. ಕುದುರೆ - ನಕ್ಷೆ

ಬಾದಾಮಿಯ ಶೈವಗುಹೆಯಲ್ಲಿ ಕುದುರೆಯನ್ನು ಪೌರಾಣಿಕ ಪ್ರಾಣಿಯಂತೆ ತೋರಿಸಿರುವರು. ಕುದುರೆಯ ಮುಂಭಾಗವು ವಾಸ್ತವಿಕ ಚಿತ್ರವೆನಿಸುತ್ತದೆ. ಆದರೆ ಅದರ ಹಿಂಭಾಗಕ್ಕೆ ಬಳ್ಳಿಗಳ ರೂಪು ನೀಡಿ ಇಡೀ ಚೌಕಟ್ಟನ್ನು ಕಲಾತ್ಮಕ ನಕ್ಷೆಯಂತೆ ರೂಪಿಸಿದ್ದಾರೆ. **(ಚಿತ್ರ ೧೦೨)** ಇದು ಕಲಾವಿದನ ಕಲ್ಪನಾ ಸೃಷ್ಟಿ. ಅದರಂತೆ ಕುದುರೆಮುಖ ಮತ್ತು ಮನುಷ್ಯ ದೇಹವಿರುವ ಕಿನ್ನರಿಯರನ್ನು ಐಹೊಳೆಯ ದೇವಾಲಯಗಳಲ್ಲಿ ಕೊರೆದು ನಿರ್ಮಿಸಿದ್ದಾರೆ. ವಿಜಯನಗರ ಅರಸರ ಕಾಲದಲ್ಲಿ ಕುದುರೆಗಳು ಶಿಲ್ಪಕಲೆಯ ಪ್ರಧಾನ ವಸ್ತುಗಳಾಗಿವೆ. ವೆಲ್ಲೂರು, ಕಾಂಚಿಪುರ ಮತ್ತು ಶ್ರೀರಂಗಂ ದೇವಾಲಯಗಳು ಈ ಮಾತಿಗೆ ಸಾಕ್ಷಿ ಹೇಳುತ್ತವೆ.

## ಮಂಗ

ಮಂಗ ಚಂಚಲತೆಯ ಸಾಕಾರ ರೂಪವೆನಿಸಿದೆ. ಚಂಚಲ ಸ್ವರೂಪದ ಮನಸ್ಸಿನ ಬಗ್ಗೆ ಹೇಳುತ್ತ ಅನುಭಾವಿಗಳು ಮನಸ್ಸನ್ನು ಮರ್ಕಟಕ್ಕೆ ಹೋಲಿಸಿದ್ದಾರೆ. ಮಹಾವಿಷ್ಣುಗೃಹದ

[೧೫] Shrinivas Padigar, op. cit p.61-62.

[೧೬] ಎಂ.ಎಂ. ಕಲಬುರ್ಗಿ, (ಸಂ.) ಮಾನಸೋಲ್ಲಾಸ (1998) ಧಾರವಾಡ. ಪು. 556.



ಚಿತ್ರ ೧೦೩. ಬೆಣೆ ಕೀಳುವ ಮಂಗ

ಸಾಲಭಂಜಿಕೆಯ ತರುಣಿಯೊಬ್ಬಳು ಫಲಭರಿತ ಮಾವಿನಮರದ ಅಡಿಯಲ್ಲಿ ನಿಂತಿದ್ದಾಳೆ. ಮರದ ಮೇಲೆ ಎರಡು ಮಂಗಗಳು ಹಣ್ಣನ್ನು ಪಡೆಯಲು ಹವಣಿಸುತ್ತಿವೆ. ಬಿನ್ನಾಣಗಿತ್ತಿಯನ್ನು ನೋಡಿ ಆಕರ್ಷಿತಗೊಂಡ ಗಂಡಸು ಹಣ್ಣಿನಿಂದ ಆಕರ್ಷಿತವಾದ ಈ ಮಂಗನಂತಾಗುತ್ತಾನೆಂಬ ಪ್ರತಿಮೆಯನ್ನು ಕಲಾಕಾರ ಬಳಸಿದ್ದಾನೆ. ಹೀಗೆ ರೂವಾರಿಯು ಶಿಲ್ಪದಲ್ಲಿ ಲಾವಣ್ಯ ಯೋಜನೆಯನ್ನು ಅಳವಡಿಸಿರುವುದು ಪ್ರಶಂಸನೀಯವಾಗಿದೆ.

ಪಂಚತಂತ್ರದ ಅನೇಕ ಕತೆಗಳು ಚಲುಕ್ಯರ ದೇವಾಲಯಗಳಲ್ಲಿ ದೃಶ್ಯರೂಪ ಪಡೆದಿವೆ. ಮಂಗಚೇಷ್ಟೆ ಶಿಲ್ಪಗಳಲ್ಲಿ ಅಭಿವ್ಯಕ್ತಗೊಂಡಿದೆ. ಪಟ್ಟದಕಲ್ಲಿನ ಮಲ್ಲಿಕಾರ್ಜುನ ದೇವಾಲಯದ ಕಂಬವೊಂದರಲ್ಲಿ ಬೆಣೆ ಕೀಳುವ ಮಂಗನ ಕತೆ ನಿರೂಪಿತವಾಗಿದೆ. **(ಚಿತ್ರ ೧೦೩)** ಇದೇ ದೃಶ್ಯವನ್ನು ಗಳಗನಾಥ ದೇಗುಲದ ಅಧಿಷ್ಠಾನದಲ್ಲಿಯೂ ಕಾಣುತ್ತೇವೆ. ಮಲ್ಲಿಕಾರ್ಜುನ ಗುಡಿಯ ಇನ್ನೊಂದು ಕಂಬದ ಮೇಲೆ ಮಂಗ ಮತ್ತು ಮೊಸಳೆಯ ಕತೆಯನ್ನು ಕಡೆಯಲಾಗಿದೆ. ಪಾಪನಾಥ ದೇವಾಲಯದ ಹೊರಗೋಡೆಯ ಮೇಲೆ ರಾಮಾಯಣದ ಹಲವಾರು ಸನ್ನಿವೇಶಗಳನ್ನು ಶಿಲ್ಪಿಸಿದ್ದಾರೆ. ಸಮುದ್ರಕ್ಕೆ ಸೇತುವೆ ಕಟ್ಟುವ, ವಾನರ ಸೇನೆ, ವಾಲಿ, ಸುಗ್ರೀವರ ಯುದ್ಧ ಮೊದಲಾದ ಚಿತ್ರಣಗಳಲ್ಲಿ ವಾನರರ ಪರಿವಾರವನ್ನು ಕಾಣುತ್ತೇವೆ.

## ಟಗರು

ಟಗರಿನ ಕಾಳಗವು ಪ್ರಾಚೀನ ಕಾಲದಲ್ಲಿ ಮನರಂಜನೆಯ ಆಟವಾಗಿತ್ತು. ಎರಡು ಟಗರುಗಳು ಪರಸ್ಪರ ಹಿಂದಕ್ಕೆ ಹೋಗಿ ರಭಸದಿಂದ ಓಡಿ ಬಂದು ಒಂದರ ತಲೆಗೆ ಇನ್ನೊಂದು ಚಚ್ಚುತ್ತದೆ. ಜನಪದರು ಪಣವನ್ನಿಟ್ಟು ಟಗರಿನ ಕಾಳಗವನ್ನು ಏರ್ಪಡಿಸಿ ಸಂತೋಷಿಸುತ್ತಿದ್ದರು. ವಿರೂಪಾಕ್ಷ ದೇವಾಲಯದ ಸಭಾಮಂಟಪದ ವಾಯವ್ಯ ಮೂಲೆಯ ಕಂಬವೊಂದು ಟಗರುಗಳ ಕಾದಾಟದ ಶಿಲ್ಪದಿಂದ ಅಲಂಕೃತವಾಗಿದೆ. ದಿಕ್ಪಾಲನಾದ ಅಗ್ನಿಯ ವಾಹನವಾಗಿ ಮೇಷವು ಅಷ್ಟದಿಕ್ಪಾಲರ ಸಂಯೋಜನೆಯಲ್ಲಿ ಕಾಣಿಸಿಕೊಂಡಿದೆ. ಪಾಪನಾಥ ಗುಡಿಯ ಉತ್ತರ ದಿಕ್ಕಿನ ಗೋಡೆಯ ಮೇಲೆ ಪ್ರತ್ಯೇಕ ಬಿಡಿ ಶಿಲ್ಪದಲ್ಲಿ ಅಗ್ನಿಯು ಟಗರಿನ ಮೇಲೆ ಕುಳಿತ ದೃಶ್ಯವಿದೆ.

## ಹಸು

ಭಾರತೀಯರಿಗೆ ಹಸು ಪವಿತ್ರ ಪ್ರಾಣಿ. ಹಸುವನ್ನು ಕೊಲ್ಲುವುದು ಮಹಾಪಾಪ ಎಂಬುದು ಚಲುಕ್ಯರ ಶಾಸನಗಳಲ್ಲಿ ಶಾಪಾಶಯದ ಭಾಗವಾಗಿ ವ್ಯಕ್ತವಾಗಿದೆ. ಹಿಂದೂಗಳಿಗೆ ಅದು ಜೀವಂತ ದೈವ. ಹಸು ಪೃಥ್ವಿಯ ಸಂಕೇತ[೭೭]. ಹಸುವಿನ ರಕ್ಷಣೆ ಎಂದರೆ ಪೃಥ್ವಿಯ ಸಂರಕ್ಷಣೆ. ಹಸುಗಳನ್ನು ಮತ್ತು ಗೋಪಾಲಕರನ್ನು ರಕ್ಷಿಸಲೆಂದು ಶ್ರೀಕೃಷ್ಣನು ಗೋವರ್ಧನಗಿರಿಯನ್ನೇ ಎತ್ತಿ ಹಿಡಿದ ಕತೆ ತುಂಬ ಜನಪ್ರಿಯವಾದುದು. ಈ ಕತೆ ಹರಿವಂಶ, ವಿಷ್ಣು ಪುರಾಣ, ಭಾಗವತ ಹಾಗೂ ಮಹಾಭಾರತಗಳಲ್ಲಿ ವಿವರವಾಗಿ ಬಂದಿದೆ. ಹಸುವಿನ ಶಿಲ್ಪಗಳು ಪ್ರತ್ಯೇಕವಾಗಿ ರಚಿತವಾಗಿರದಿದ್ದರೂ ಕಥಾ ನಿರೂಪಣಾ ಶಿಲ್ಪಗಳಲ್ಲಿ ಕಾಣಬಹುದು.

ಬಾದಾಮಿಯ ಚಿಕ್ಕ ವೈಷ್ಣವ ಗುಹಾಲಯದ ತೊಲೆಗಳಲ್ಲಿ ಕಥಾನಕ ಶಿಲ್ಪ ಪಟ್ಟಿಕೆಗಳಿವೆ. ಅಲ್ಲಿ ಶ್ರೀಕೃಷ್ಣನ ಬಾಲಲೀಲೆಗಳನ್ನು ಕೊರೆಯಲಾಗಿದೆ. ಅವುಗಳಲ್ಲಿ ಗೋವರ್ಧನಗಿರಿಯನ್ನು

[೭೭] Dr. Devdutt Pattanika, Myth=Mythya, New Delhi P. III

ಎತ್ತಿ ಹಿಡಿದಿರುವ ದೃಶ್ಯವೂ ಒಂದು. ಆ ಬೆಟ್ಟದ ಕೆಳಗೆ ಹಸುಗಳು, ಕರುಗಳು ಮಾನವರೊಂದಿಗೆ ಆಶ್ರಯ ಪಡೆದಿವೆ. **(ಚಿತ್ರ ೧೦೪)** ಇದೇ ದೃಶ್ಯವು ಇನ್ನೂ ನಾಟಕೀಯವಾಗಿ, ಮೇಲಿನ ಶಿವಾಲಯದ ದೇವಕೋಷ್ಠದಲ್ಲಿ ಮೂಡಿ ಬಂದಿದೆ. ಆಕಳು, ದನಗಾಹಿಗಳು ಮತ್ತು ಮೊಸರು ಕಡೆದು ಬೆಣ್ಣೆ ತಯಾರಿಸುವ ಸ್ತ್ರೀಯರನ್ನು ತೋರಿಸಿದ್ದಾರೆ. ಇದೇ ಕಥಾವಸ್ತುವನ್ನು ಆಧರಿಸಿ ಮಹಾಬಲಿಪುರಂದಲ್ಲಿ ಹಸುವಿನಿಂದ ಹಾಲು ಕರೆಯುವ ದೃಶ್ಯವನ್ನು ಕಡೆದಿರುವರು.



**ಚಿತ್ರ ೧೦೪. ಹಸುಗಳು, ಮೇಲಿನ ಶಿವಾಲಯ**

## ಹಾವು

ಹಾವುಗಳನ್ನು ಚಿತ್ರಿಸುವಲ್ಲಿ ಚಲುಕ್ಯ ರೂವಾರಿಗಳು ಹೆಚ್ಚಿನ ಆಸಕ್ತಿ ತೋರಿದ್ದಾರೆ. ಹುತ್ತಿನಿಂದ ಹೊರಬರುವ ಹಾವುಗಳು, ಕುಬ್ಜಗಣರು ಕೈಯಲ್ಲಿ ಹಿಡಿದ ಹಾವುಗಳು, ಬಾಹುಬಲಿಯ ಮೈಮೇಲೆ ಹರಿದಾಡುವ ಹಾವುಗಳು– ಹೀಗೆ ಶಿಲ್ಪದ ಸೌಂದರ್ಯವನ್ನು ಹೆಚ್ಚಿಸಲು ಹಾವನ್ನು ಮಾಧ್ಯಮವಾಗಿ ಬಳಸಿದ್ದಾರೆ. ಸಮುದ್ರ ಮಂಥನದ ಹಗ್ಗವಾಗಿ, ವಿಷ್ಣುವಿನ ಶಯ್ಯೆಯಾಗಿ, ಈಶ್ವರನ ಆಭರಣವಾಗಿ, ಬಾಲಕೃಷ್ಣನ ಕಾಳೀಯನಾಗಿ ಹಲವು ರೂಪಗಳಲ್ಲಿ ಹಾವು ಶಿಲ್ಪದಲ್ಲಿ ಅಭಿವ್ಯಕ್ತಿ ಪಡೆದಿದೆ.

## ಮೀನು

ಮೀನು ಜಲಚರ ಪ್ರಾಣಿ. ಅದರ ಚೆಲುವು, ಚಲನೆಗಳು ಕಲಾವಿದರನ್ನು ಆಕರ್ಷಿಸಿವೆ. ಮೀನುಗಳ ಜೋಡಿಯು ಮಂಗಲಕರ. ಆದ್ದರಿಂದ ಜೈನ ಶಿಲ್ಪ ಸಂಪ್ರದಾಯದ ಪ್ರಕಾರ ಅಷ್ಟಮಂಗಲಗಳಲ್ಲಿ ಮೀನಿನ ಜೋಡಿಯೂ ಒಂದು.[೧೮] ಐಹೊಳೆಯ ಮೀನ ಬಸದಿಯಲ್ಲಿ ಜೋಡಿ ಮೀನುಗಳನ್ನು ಮೇಲ್ಛಾವಣಿಯ ಮೂಲೆಗಳಲ್ಲಿ ಕೊರೆದಿರುವರು.

ಹೀಗೆ ಮಂಗಲ ಚಿಹ್ನೆಯ ಅಲಂಕರಣವಿರುವ ಕಾರಣ ಇದನ್ನು ಮೀನ ಬಸದಿ ಎಂದು ಕರೆದಿರುವ ಸಂಭಾವ್ಯವಿದೆ. ಸ್ಥಳೀಯ ಜನಪದರು ಕೂಡ 'ಮೀನಿನ ಚಿತ್ರ ಇರುವುದರಿಂದ ಇದಕ್ಕೆ ಮೀನಬಸದಿ ಎಂದು ಹೆಸರು ಬಂದಿದೆ' ಎಂಬ ವಿವರಣೆ ಕೊಡುತ್ತಾರೆ. ಇದು ವಿಚಾರಣೀಯವಾಗಿದೆ.

[೧೮] Sivaramamurti.C, Birds and Animals in Indian Sculpture, New Delhi, P. 26

ಚಲುಕ್ಯ ದೇಗುಲಗಳ ಕಂಬಗಳಲ್ಲಿ ಅನೇಕ ಕಡೆ ಮತ್ಸ್ಯಗಳ ಕಂಡರಣೆಯಿದೆ. **(ಚಿತ್ರ ೧೦೫)** ಮೀನಿನ ದೇಹಕ್ಕೆ ಬಳ್ಳಿಯ ಸುರುಳಿಗಳನ್ನು ಹೆಣೆದು ಸಂಕೀರ್ಣ ಬಗೆಯ ಆಲಂಕಾರಿಕ ಶಿಲ್ಪಗಳನ್ನು ರೂಪಿಸಿದ್ದಾರೆ. ನವಿರಾದ ಮೈವಳಿಕೆಯಿಂದಾಗಿ ಮೀನಿನ ದೇಹವು ಮನೋಹರವಾದುದು. ಅದರ ದೇಹಾಕೃತಿಯೂ ಸುಂದರವಾದುದು. ಮೀನಿನ ಆಕಾರದ ಕಣ್ಣುಳ್ಳ ಚೆಲುವೆಯನ್ನು ಮೀನಾಕ್ಷಿ ಎಂದು ಕರೆಯುವುದುಂಟು. ಬಾದಾಮಿಯ ಎರಡನೆಯ ಗುಹಾಲಯ ಮತ್ತು ಜಂಬುಲಿಂಗ ದೇವಾಲಯ ಮೊದಲಾದ ದೇಗುಲಗಳ ಮೇಲ್ಛಾವಣಿಯಲ್ಲಿ ಸುದರ್ಶನ ಚಕ್ರದ ಅರೆಗಳನ್ನು ಮೀನಿನ ಆಕೃತಿಯಲ್ಲಿ ರಚಿಸಲಾಗಿದೆ. ವೃತ್ತಾಕಾರದ ಜಾಲಂಧ್ರಗಳ ಅರೆಗಳು ಮೀನಿನ ಆಕಾರದಲ್ಲಿ ರೂಪುಗೊಂಡಿವೆ. ಈ ಬಗೆಯ ಜಾಲಂಧ್ರಗಳು ಮತ್ಸ್ಯಚಕ್ರ ಎನಿಸಿವೆ.



ಚಿತ್ರ ೧೦೫. ಮೀನು - ಕಿನ್ನರ

ನೀರಿಲ್ಲದೆ ಮೀನು ಬದುಕಲಾರದು. ಹಾಗಾಗಿ ಅದರ ಅಸ್ತಿತ್ವವು ನೀರನ್ನು ಪ್ರತಿನಿಧಿಸುತ್ತದೆ. ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಕಂಬವೊಂದರಲ್ಲಿ ದುರ್ಯೋಧನನು ವೈಶಂಪಾಯನ ಕೊಳದಲ್ಲಿ ಅಡಗಿ ಕುಳಿತಿರುವ ದೃಶ್ಯವಿದೆ. ಆತನು ಕುಳಿತಿರುವುದು ಸರೋವರದಲ್ಲಿ ಎಂದು ತಿಳಿಸಲು ರೂವಾರಿಯು ಅಲ್ಲಿ ಮೀನಿನ ಚಿತ್ರ ಕೊರೆದಿದ್ದಾನೆ. ಕಲಾವಿದನ ಈ ತಂತ್ರವು ಮೆಚ್ಚುವಂತಹದು.

**ಚಿಗರಿ**

ಚಿಗರಿ ಮುಗ್ಧಜೀವಿ. ಅದು ಪಾವಿತ್ರ್ಯದ ಸಂಕೇತವೆನಿಸಿದೆ. ಅದರ ನಡಿಗೆಯಲ್ಲಿ, ಓಟದಲ್ಲಿ ಸೌಂದರ್ಯವಿದೆ, ಚುರುಕುತನವಿದೆ. ತರುಣಿಯರಿಗೆ ಪ್ರಿಯವಾದ ಪ್ರಾಣಿ. ಚಿಗರಿಯು ವೇದಮಯವೆಂದೂ, ಅದರ ದೇಹದ ಮೇಲಿನ ಬಿಳಿ ಚುಕ್ಕೆಗಳು ಋಗ್ವೇದದ ಗುರುತುಗಳೆಂದೂ, ಕಪ್ಪು ಚುಕ್ಕೆಗಳು ಸಾಮವೇದದ ಕುರುಹುಗಳೆಂದೂ ತೈತ್ತಿರೀಯ ಸಂಹಿತೆ ಬಣ್ಣಿಸಿದೆ.[೨೯] ಈ ಕಾರಣದಿಂದ ಋಷಿ, ಮುನಿಗಳು ಚಿಗರಿಗಳನ್ನು ಮಕ್ಕಳಂತೆ ತಮ್ಮ ಆಶ್ರಮಗಳಲ್ಲಿ ಸಲಹುತ್ತಿದ್ದರು.[೩೦] ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದಲ್ಲಿನ ಆಶ್ರಮ ದೃಶ್ಯದಲ್ಲಿ ಚಿಗರಿಯನ್ನು ಕಾಣುತ್ತೇವೆ. ಪಾಪನಾಥ ಗುಡಿಯ ಗೋಡೆಯ ಮೇಲೆ ರಾಮಾಯಣದ ಸನ್ನಿವೇಶಗಳನ್ನು ಕೊರೆದಿರುವರು. ಮಾರೀಚನನ್ನು ಚಿಗರಿಯ ರೂಪದಲ್ಲಿ ತೋರಿಸಿದ್ದಾರೆ. ಹುಚ್ಚಪ್ಪಯ್ಯನ ಗುಡಿಯಲ್ಲಿ ವಾಯುದೇವನ ವಾಹನವಾಗಿ ಚಿಗರಿಯು ಚಿತ್ರಿತವಾಗಿದೆ.



ಚಿತ್ರ ೧೦೬. ನಾಯಿಯೊಂದಿಗೆ ತರುಣಿಯ ವಿಹಾರ

**ನಾಯಿ**

ಒಡೆಯನ ನಂಬುಗೆಗೂ, ಪ್ರೀತಿಗೂ ಪಾತ್ರವಾದ ಪ್ರಾಣಿ ನಾಯಿ. ಮಹಾಕೂಟೇಶ್ವರನ ದೇವಾಲಯದ ಅಧಿಷ್ಠಾನದಲ್ಲಿ ತರುಣಿಯೊಬ್ಬಳು ನಾಯಿಯೊಂದಿಗೆ ವಿಹಾರಾರ್ಥವಾಗಿ ಹೊರಟಿದ್ದಾಳೆ. **(ಚಿತ್ರ ೧೦೬)** ನಾಯಿ ಅವಳ ದೇಹ ರಕ್ಷಕವೂ (bodyguard !) ಹೌದು !

ಪಂಚತಂತ್ರ ಕತೆ ಹೇಳುವ ಶಿಲ್ಪಗಳಲ್ಲಿ ಮುಂಗುಸಿ ಮೊದಲಾದ ಹಲವಾರು ಬಗೆಯ ಪ್ರಾಣಿಗಳು ಸಾಂದರ್ಭಿಕವಾಗಿ ಕೆತ್ತನೆಗೊಂಡಿವೆ. ಇಡೀ ಪ್ರಾಣಿ ಸಂಕುಲವು ಚಲುಕ್ಯ ರೂವಾರಿಗಳ ಕಲಾಭಿವ್ಯಕ್ತಿಗೆ ವಸ್ತುವಾಗಿತ್ತೆಂದು ತಿಳಿಯಬಹುದು.

**ಯಾಳಿಗಳು**

ಇವನ್ನು ವ್ಯಾಳಿಗಳೆಂದೂ, ಈಹಾಮೃಗಗಳೆಂದೂ ಗುರುತಿಸಲಾಗುತ್ತದೆ. ಇವು ಅವಾಸ್ತವಿಕ ಮತ್ತು ಕಾಲ್ಪನಿಕ ಪ್ರಾಣಿಗಳು. ಬೇರೆ, ಬೇರೆ ತಳಿಯ ಪ್ರಾಣಿಗಳ ಅಂಗಗಳನ್ನು ಸಂಕರಿಸಿ ರೂಪಿಸಿದ ವಿಲಕ್ಷಣ ಮೂರ್ತಿಗಳಿವು. ಇವುಗಳ ಪ್ರಧಾನ ಉದ್ದೇಶ ದೇವಾಲಯಗಳಿಗೆ ಅಪೂರ್ವ ಸೌಂದರ್ಯವನ್ನು ಒದಗಿಸುವುದಾಗಿದೆ. ಈ ದಿಸೆಯಲ್ಲಿ ಯಾಳಿಗಳು ಯಶಸ್ವಿ ಶಿಲ್ಪಗಳು. ಈ ಬಗೆಯ ಕಾಲ್ಪನಿಕ ಪ್ರಾಣಿಗಳ ಪ್ರಾಚೀನತೆಯನ್ನು ಹರಪ್ಪಾ ಸಂಸ್ಕೃತಿಯಷ್ಟು ಹಿಂದಕ್ಕೆ ತಳ್ಳಬಹುದು. ಭಾರ್ಹುತ, ಸಾಂಚಿ, ನಾಗಾರ್ಜುನಕೊಂಡ, ಅಮರಾವತಿಗಳಲ್ಲಿ ಬಗೆಬಗೆಯ ಯಾಳಿಗಳನ್ನು ರೂಪಿಸಿದ್ದಾರೆ.[೩೧]

ಹೀಗೆ ವಿವಿಧ ಪ್ರಾಣಿಗಳ ಅಂಗಾಂಗಗಳಿಂದ ಕೂಡಿದ ವಿಲಕ್ಷಣ ಪ್ರಾಣಿಯನ್ನು ಕಲ್ಪಿಸಿದ ಶ್ರೇಯಸ್ಸು ಪ್ರಾಚೀನ ಸಂಸ್ಕೃತ ಕವಿಗಳಿಗೆ ಸಲ್ಲುತ್ತದೆ. ರೂವಾರಿಗಳು ಅವರ ಕಲ್ಪಕತೆಯಿಂದ ಪ್ರಭಾವಿತರಾಗಿ ಆ ಕಾಲ್ಪನಿಕ ಪ್ರಾಣಿಗಳಿಗೆ ಮೂರ್ತ ರೂಪ ನೀಡಿದ್ದಾರೆ. ಇಂತಹ ಪ್ರಾಣಿಗಳ

[೨೯] ಕನ್ನಡ ವಿಶ್ವಕೋಶ. ಸಂಪುಟ ೮, ಪು.೧೧೧.

[೩೦] ಅದೇ.

[೩೧] Nagar S. L. Compostie Deities in Indian Art and Literature, New Delhi P.142

ದೇಹಗಳನ್ನು ಹದವಾಗಿ ಸಂಯೋಜಿಸುವುದೆಂದರೆ ಕಲಾವಿದರಿಗೆ ಆಹ್ವಾನವೇ ಸರಿ. ಮಿಶ್ರತಳಿಯ ಪ್ರಾಣಿಯಲ್ಲಿಯ ಬೇರೆ ಬೇರೆ ಪ್ರಾಣಿಗಳ ಬಿಡಿ ಅಂಗಗಳ ರಚನೆಯ ಬಗ್ಗೆ ಕಲಾವಿದನಿಗೆ ಪರಿಣತಿ ಇರಬೇಕಾಗುತ್ತದೆ. ಆಯಾ ಪ್ರಾಣಿಯ ಅಂಗದ ಸಾದೃಶ್ಯವನ್ನು ಉಳಿಸಿಕೊಳ್ಳಬೇಕಾಗುತ್ತದೆ. ಸಿಂಹದ ಪಂಜ ಸಿಂಹದ ಪಂಜದಂತೆ, ಆನೆಯ ಸೊಂಡಿಲು ಆನೆಯ ಸೊಂಡಿಲದಂತೆಯೇ ಇರಬೇಕಾಗುತ್ತದೆ. ಚಲುಕ್ಯ ರೂವಾರಿಗಳು ಈ ಆಹ್ವಾನವನ್ನು ಸ್ವೀಕರಿಸಿ ಯಶಸ್ವಿಯಾಗಿದ್ದಾರೆ.

ಬಾದಾಮಿಯ ಚಿಕ್ಕ ವೈಷ್ಣವ ಗುಹಾಲಯದ ಮುಖ ಮಂಟಪದಲ್ಲಿ ಮುಂದಿನ ಸಾಲಿನ ಪ್ರತಿ ಕಂಬದ ಉತ್ತರ ಬದಿಯ ಬೋದಿಗೆಯು ವ್ಯಾಳಿಯನ್ನು ಪ್ರದರ್ಶಿಸುತ್ತದೆ. ಅರೆಗಂಬಗಳ ಮೇಲೂ ಎರಡು ಸಿಂಹವ್ಯಾಳಿಗಳಿವೆ. ಪೂರ್ವದ ಬದಿಯ ವ್ಯಾಳಿ ಪಶ್ಚಿಮಾಭಿಮುಖ ವಾಗಿಯೂ, ಪಶ್ಚಿಮ ಬದಿಯ ವ್ಯಾಳಿ ಪೂರ್ವಾಭಿಮುಖವಾಗಿಯೂ ಇವೆ. ಮಧ್ಯದ ನಾಲ್ಕು ಕಂಬಗಳ ವ್ಯಾಳಿಗಳು ದುಂಡು ಶಿಲ್ಪಗಳಾಗಿ ಉತ್ತರಾಭಿಮುಖವಾಗಿವೆ. ಈ ಸಿಂಹ ವ್ಯಾಳಿಗಳಿಗೆ ಕೋಡುಗಳಿರುವುದೊಂದು ವಿಶೇಷ ಅಂಶ.

ಸಿಂಹವು ಪಲ್ಲವರ ವಾಸ್ತು ನಿರ್ಮಾಣಗಳಲ್ಲಿ ಪ್ರಧಾನ ಅಂಶವಾಗಿ ಕಾಣಿಸಿಕೊಂಡಿದೆ. ಇದು ಸರ್ವವಿದಿತ ಸಂಗತಿ. ಆದರೆ ಪಲ್ಲವರಿಗಿಂತ ಬಲು ಹಿಂದೆಯೇ ಚಲುಕ್ಯ ಕಲಾವಿದರು ಸಿಂಹವ್ಯಾಳಿಗಳಿಂದ ಗುಹಾಲಯಗಳನ್ನು ಅಲಂಕರಿಸಿದುದು ಐತಿಹಾಸಿಕ ಸತ್ಯ. ಬಾದಾಮಿಯ ಎರಡೂ ವೈಷ್ಣವ ಗುಹಾಲಯಗಳಲ್ಲಿಯ ಬೋದಿಗೆಗಳು ಸಿಂಹವ್ಯಾಳಿಗಳಿಂದ ಭೂಷಿತವಾಗಿವೆ. ಅದರಲ್ಲೂ ಮಹಾವಿಷ್ಣುಗೃಹದ ಈಹಾಮೃಗಗಳು ಗಾತ್ರದಲ್ಲೂ, ಕಲಾತ್ಮಕತೆಯಲ್ಲೂ ಹಿರಿದೆನಿಸಿವೆ. ಇವು ಹೆಚ್ಚು ಶೈಲೀಕೃತಗೊಂಡು ಪರಿಣಾಮಕಾರಿ ಕಲಾಕೃತಿಗಳಾಗಿವೆ.



ಚಿತ್ರ ೧೦೭. ಯಾಳಿ, ಬೋದಿಗೆ ಮಹಾವಿಷ್ಣು ಗೃಹ

ಈ ಭವ್ಯ ಗುಹಾಲಯದ ಪೂರ್ವದ ಅರ್ಧಗಂಬದ ಬೋದಿಗೆಯಲ್ಲಿ ಚಿಗರಿ ಮುಖದ, ಸಿಂಹದ ಅಯಾಲವಿರುವ ಕಾಲ್ಪನಿಕ ಪ್ರಾಣಿಯಿದೆ. ಪಕ್ಕದ ಕಂಬದ ಬೋದಿಗೆಯಲ್ಲಿ ಸಿಂಹ ವ್ಯಾಳಿ ಇದ್ದು ಕುಬ್ಜನೊಬ್ಬ ಅದರ ಮುಂದೆ ಕುಳಿತಿರುವಂತೆ ಕೆತ್ತನೆ ಮಾಡಿದ್ದಾರೆ. ಮೂರನೆಯ ಕಂಬದ ವ್ಯಾಳಿಯು ಸಿಂಹಮುಖವನ್ನು ಮತ್ತು ಕೋಡುಗಳನ್ನು ಹೊಂದಿದ ಭೀಕರ ಪ್ರಾಣಿಯಾಗಿದೆ. **(ಚಿತ್ರ ೧೦೭)** ಪಶ್ಚಿಮ ಬದಿಯ ಅರ್ಧಗಂಬದ ಬೋದಿಗೆಯಲ್ಲಿ ನೆಗೆಯುತ್ತಿರುವ ಸಿಂಹವ್ಯಾಳಿ ಇದೆ. **(ಚಿತ್ರ ೧೦೮)** ಅದರ ಹೊಟ್ಟೆಯ ಕೆಳಗೆ ಕುಬ್ಜನನ್ನು ತೋರಿಸಲಾಗಿದೆ. ಉಳಿದ ಯಾಳಿಗಳು ನಶಿಸಿಹೋಗಿವೆ.

ಚಲುಕ್ಯ ಶಿಲ್ಪಿಗಳು ತಮ್ಮ ಪ್ರಾರಂಭದ ರಾಚನಿಕ ಮಂದಿರಗಳಲ್ಲಿ ವ್ಯಾಳಿಗಳನ್ನು ಸಂಯೋಜಿಸಲು ಪ್ರಯತ್ನಿಸಿದಂತೆ ತೋರುವುದಿಲ್ಲ. ತೊಲೆಗಳ ಮೇಲೆ ಯಾಳಿಗಳ ಅಲಂಕರಣವಿರುವುದನ್ನು ಜಂಬುಲಿಂಗ ಮೊದಲಾದ ಹಲವು ದೇವಾಲಯಗಳಲ್ಲಿ ಕಾಣುತ್ತೇವೆ. ಕೊಂತ ಗುಡಿ ೧ ರಲ್ಲಿ ಮಂಟಪದ ತೊಲೆಗಳ ಕೆಳಭಾಗದಲ್ಲಿ ಚಿಕ್ಕ ಯಾಳಿಗಳಿವೆ. ಅವರ ಎರಡನೆಯ ಹಂತದ ನಿರ್ಮಾಣವಾದ ಪಾಪನಾಥ ದೇವಾಲಯದಲ್ಲಿ ವ್ಯಾಳಿಗಳ ಅಲಂಕರಣವಿದೆ. ಈ ಗುಡಿಯ ಮುಖಮಂಟಪದ ನಾಲ್ಕೂ ಮೂಲೆಗಳಲ್ಲಿ ಚತ್ತನ್ನು ಎತ್ತಿ ಹಿಡಿದಿರುವಂತೆ ತೋರುವ ವ್ಯಾಳಿಗಳಿವೆ.



ಚಿತ್ರ ೧೦೮. ಯಾಳಿ, ಬೋದಿಗೆ ಮಹಾವಿಷ್ಣು ಗೃಹ

ಸಿಂಹದ ದೇಹ ಮತ್ತು ಆನೆಯ ಮುಖವಿರುವ ಎರಡು ಗಜವ್ಯಾಳಿ ಮತ್ತು ಎರಡು ಸಿಂಹವ್ಯಾಳಿಗಳು ಈ ದೇವಾಲಯದ ವೈಶಿಷ್ಟ್ಯ ಎನಿಸಿವೆ. ಇವು ಕೇವಲ ಮುಖಗಳಿಂದಾಗಿರದೆ ಇಡಿ ದೇಹಗಳನ್ನೊಳಗೊಂಡು ದುಂಡು ಶಿಲ್ಪಗಳಾಗಿವೆ. ಇಂತಹ ಮೂರು ಆಯಾಮಗಳ ವ್ಯಾಳಿ ಮೂರ್ತಿಗಳು ಈ ದೇವಾಲಯದ ನಂದಿ



ಚಿತ್ರ ೧೦೯. ಯಾಳಿ, ನಂದಿ ಮಂಟಪ ವಿರೂಪಾಕ್ಷ ದೇವಾಲಯ

ಮಂಟಪದ ತೊಲೆಗಳಲ್ಲಿಯೂ ಇವೆ. (ಚಿತ್ರ ೧೦೯) ಈ ರೀತಿಯ ಶಿಲ್ಪ ನಿರ್ವಹಣೆಯು ಚಲುಕ್ಯರ ರಾಜನಿಕ ಮಂದಿರಗಳಲ್ಲಿ ಹೊಸ ಸೇರ್ಪಡೆಯಾಗಿದೆ. ಇಲ್ಲಿಯ ಕಾಶಿವಿಶ್ವನಾಥ ದೇವಾಲಯವು ನಂತರದ ನಿರ್ಮಾಣವಾಗಿದ್ದು ಅದರ ಮಂಟಪದ ಚತ್ತನ್ನು ಎತ್ತಿ ಓಡಿದಿರುವಂತೆ ನಾಲ್ಕು ಸಿಂಹವ್ಯಾಳಿಗಳನ್ನು ಸಂಯೋಜಿಸಿದ್ದಾರೆ. (ಚಿತ್ರ ೧೧೦) ಇವು ಚಲುಕ್ಯರ ಕಾಲದ ಉತ್ಕೃಷ್ಟ ವ್ಯಾಳಿಗಳು. ಈ ಶಿಲ್ಪಗಳಲ್ಲಿ ರೂವಾರಿಗಳ ಕಲ್ಪಕತೆ ಮತ್ತು ಕರಕೌಶಲ್ಯಗಳು ಸಂಗಮಿಸಿವೆ.

ಐಹೊಳೆಯ ಕೊಂತಗುಡಿ ೧ ರಲ್ಲಿ ಮಂಟಪದ ತೊಲೆಗಳು ಮತ್ತು ಕೊಂತಗುಡಿ ೨ ರಲ್ಲಿ ಬೋದಿಗೆಗಳು ಯಾಳಿಗಳಿಂದ ಅಲಂಕೃತವಾಗಿವೆ. ಮೂರನೆಯ ಗುಹಾಲಯದಲ್ಲಿ ಇರುವಂತೆ ಈ ಯಾಳಿಗಳ ಕೆಳಗೆ ಕುಬ್ಜರು ಯಾಳಿಯ ಬಾಲವನ್ನು ಹಿಡಿದುಕೊಂಡಿರುವರು. ಈ ಶಿಲ್ಪಗಳ ಸಂಯೋಜನೆಯಲ್ಲಿ ಶಿಲ್ಪಿಗಳ ಕೌಶಲ್ಯ ಎದ್ದು ಕಾಣುತ್ತದೆ. ಯಾಳಿಗಳು ನೋಡಲು ವಿಲಕ್ಷಣವೆನಿಸಿದರೂ ಅವುಗಳಲ್ಲಿ ಸೌಂದರ್ಯ ಬೆಸೆದುಕೊಂಡಿದೆ. ಈ ಬಗೆಯ ಯಾಳಿ ಶಿಲ್ಪಗಳ ಕಂಡರಣೆ ಒಂದು ಕಲಾ ಸಂಪ್ರದಾಯವಾಗಿ ಕಲ್ಯಾಣ ಚಾಲುಕ್ಯರ ಮತ್ತು ಹೊಯ್ಸಳರ ದೇವಾಲಯಗಳಲ್ಲೂ ಮುಂದುವರೆಯಿತು.



ಚಿತ್ರ ೧೧೦. ಯಾಳಿ, ಕಾಶಿವಿಶ್ವನಾಥ ದೇವಾಲಯ

## ಪಕ್ಷಿಗಳು

ಭಾರತೀಯ ಶಿಲ್ಪಕಲೆಯಲ್ಲಿ ಪಕ್ಷಿಗಳನ್ನು ಅಲಂಕಾರಕ್ಕಾಗಿ ಬಳಸುವುದು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ. ಗುಪ್ತರ ಕಾಲದ ಕಲಾವಿದರಂತೆ ಚಲುಕ್ಯ ಶಿಲ್ಪಿಗಳೂ ದೇವಾಲಯಗಳ ವಿವಿಧ ವಾಸ್ತು ಅಂಗಗಳನ್ನು ಪಕ್ಷಿಗಳ ಚಿತ್ರಗಳಿಂದ ಸಿಂಗರಿಸಿದ್ದಾರೆ. ಈ ಪಕ್ಷಿಗಳು ಕೆಲವೆಡೆ ಬಿಡಿಯಾಗಿ. ಇನ್ನೂ ಹಲವು ಸಂದರ್ಭಗಳಲ್ಲಿ ಕಥಾ ನಿರೂಪಣಾ ಶಿಲ್ಪದ ಭಾಗವಾಗಿ ನಿರೂಪಿತವಾಗಿದೆ. ಅವನ್ನು ಇಲ್ಲಿ ಸಂಕ್ಷಿಪ್ತವಾಗಿ ಅವಲೋಕಿಸೋಣ.

## ಹಂಸ

ಚಲುಕ್ಯ ದೇವಾಲಯಗಳಲ್ಲಿ ಅತ್ಯಂತ ವಿಪುಲವಾಗಿ ಚಿತ್ರಣಗೊಂಡ ಪಕ್ಷಿ ಎಂದರೆ ಹಂಸ. ಇದು ಬ್ರಹ್ಮನ ವಾಹನವಾಗಿ ದೇವಾಲಯದ ವಿತಾನಗಳಲ್ಲಿ ಶಿಲ್ಪಿತವಾಗಿದೆ. ಹಿಂದೂ ಸಿದ್ಧಾಂತದ ಮೇರೆಗೆ ಬ್ರಹ್ಮನು ಜ್ಞಾನದ ಕುರುಹು. ಹಂಸ ಪಕ್ಷಿಯು ಆತ್ಮದ ಸಂಕೇತ. ಅದರ ಎರಡು ರೆಕ್ಕೆಗಳು ಆಗಮ ಮತ್ತು ನಿಗಮಗಳ ಸಂಕೇತವೆನಿಸಿವೆ. ಆಗಮವು ಆರ್ಯ ಸಂಸ್ಕೃತಿಯನ್ನು ಪ್ರತಿನಿಧಿಸಿದರೆ, ನಿಗಮವು ದ್ರಾವಿಡ ಸಂಸ್ಕೃತಿಯ ಕುರುಹು. ಹಂಸ ಪಕ್ಷಿಯ ಎರಡು ಕಾಲುಗಳು ಶಿವ ಮತ್ತು ಶಕ್ತಿ ಎಂಬ ಗ್ರಹಿಕೆಯಿದೆ.[33]

[33] Aryan K. C. op.cit. p.71

ಹಂಸವು ಮೋಹ, ಮಾಯೆಗಳಿಂದ ಕೂಡಿದ ಅಜ್ಞಾನದ ಸರೋವರದಲ್ಲಿ ಲೀಲಾಜಾಲವಾಗಿ ವಿಹರಿಸುವ ಪಕ್ಷಿ. ಹೀಗೆ ನೀರಿನಲ್ಲಿ ಇದ್ದರೂ ನೀರಿನ ಹನಿ ಅದರ ಮೈಗೆ ಅಂಟಿಕೊಂಡಿರುವುದಿಲ್ಲ. ಈ ಮೋಹದ ಪ್ರಪಂಚದಲ್ಲಿದ್ದರೂ ಅದಕ್ಕೆ ಅಂಟಿಕೊಳ್ಳದಂತೆ ಬದುಕುವ ಪಾಠವನ್ನು ಹಂಸದಿಂದ ಕಲಿಯಬಹುದು. ಈ ಕಾರಣಕ್ಕಾಗಿ ಹಂಸವು ಋಷಿ ಮುನಿಗಳಿಗೆ ಪ್ರಿಯವಾದುದು. ಹಂಸ ಪಕ್ಷಿಯು ತನ್ನ ಏಕಾಗ್ರತೆಗಾಗಿ ಹೆಸರಾಗಿದೆ. ತಪಸ್ವಿಗಳಲ್ಲಿ ಇರಬೇಕಾದ ಮೊದಲ ಗುಣವೇ ಇದು. ಒಳ್ಳೆಯದರಿಂದ ಕೆಟ್ಟದ್ದನ್ನು ಬೇರ್ಪಡಿಸಿ ದೂರಿಡುವ ಹಂಸ ಪಕ್ಷಿಯು ತಪಸ್ವಿಗಳಿಗೆ ಗುರುವಾಗಿದೆ. ಪರಮ ಸತ್ಯದಿಂದ ಮಿಥ್ಯಾ ಪ್ರಪಂಚವನ್ನು ಬೇರ್ಪಡಿಸುವ ಪ್ರಯೋಗದಲ್ಲಿರುವ ಋಷಿ ಮುನಿಗಳಿಗೆ ಹಂಸ ಪಕ್ಷಿ ಆದರ್ಶವೆನಿಸಿದೆ.[೨೩]

ಭೀಷ್ಮನು ಶರಪಂಜರದ ಮೇಲೆ ಮಲಗಿರುವಾಗ ಗಂಗೆಯು ತನ್ನ ದಡದಲ್ಲಿದ್ದ ಮುನಿಗಳನ್ನು ಹಂಸಗಳ ರೂಪದಲ್ಲಿ ಭೀಷ್ಮರ ಬಳಿಗೆ ಕಳಿಸಿದಳೆಂದು ಮಹಾಭಾರತದಲ್ಲಿ ಹೇಳಲಾಗಿದೆ. ಪಟ್ಟದ ಕಲ್ಲಿನ ವಿರೂಪಾಕ್ಷ ಗುಡಿಯಲ್ಲಿ ಕಂಬದ ಮೇಲೆ ಈ ಕತೆ ನಿರೂಪವಾಗಿದೆ. ಭೀಷ್ಮನ ತೊಡೆಯ ಹತ್ತಿರ ಹಂಸ ಪಕ್ಷಿಗಳ ಕೆತ್ತನೆಯಿದೆ.[೨೪] 'ಮಾನಸಾರ'ವು ಹಂಸವು ಬ್ರಹ್ಮನ ವಾಹನವೆಂದು ತಿಳಿಸುತ್ತ ಹಂಸಗಳ ಸಾಲನ್ನು ದೇವಾಲಯದ ಪ್ರಸ್ತರದಲ್ಲಿ ಕೆತ್ತನೆ ಮಾಡಲು ಆದೇಶಿಸಿದೆ.[೨೫]

ಚಲುಕ್ಯ ಸ್ಥಪತಿಗಳು ಮತ್ತು ರೂವಾರಿಗಳು ಇದನ್ನು ತಮ್ಮ ವಾಸ್ತು ವಿಶೇಷವಾಗಿ ಸ್ವೀಕರಿಸಿದ್ದಾರೆ. ದೇವಾಲಯಗಳ ಮುಂಜೂರಿನ ಕೆಳಗೆ ಗೋಡೆಯ ಮೇಲಂಚಿನಲ್ಲಿ ಹಂಸ ಪಕ್ಷಿಗಳ ಸಾಲು ಬಹುತೇಕ ಚಲುಕ್ಯ ದೇವಾಲಯಗಳಲ್ಲಿದೆ. ಇದು ಚಲುಕ್ಯ ಮಂದಿರಗಳ ವಾಸ್ತು ಲಕ್ಷಣಗಳಲ್ಲಿ ಒಂದು. ಐಹೊಳೆಯ ಲಾಡಖಾನ, ಪಟ್ಟದಕಲ್ಲಿನ ಜಂಬುಲಿಂಗ ಮತ್ತು ಬಾದಾಮಿಯ ಮಾಲೆಗಿತ್ತಿ ಶಿವಾಲಯಗಳು ಈ ಹಂಸಮಾಲೆಗಳಿಂದ ಅಲಂಕೃತವಾಗಿದೆ.

ವಿರೂಪಾಕ್ಷ ದೇವಾಲಯದ ಹೊಸ ಗೋಡೆಯ ಪ್ರಸ್ತರದಲ್ಲಿ ಹಂಸಗಳ ಬದಲು ಗಣಗಳ ಸಾಲನ್ನು ಕೆತ್ತಿರುವರು. ಆದರೆ ಅದರ ಗರ್ಭಗುಡಿಯ ಮೇಲಿರುವ ವಿಮಾನವನ್ನು ಆಕಾಶಕ್ಕೆ ಎತ್ತಿಕೊಂಡು ಹೋಗುತ್ತಿವೆ ಎನ್ನುವಂತೆ ಹಂಸ ಪಕ್ಷಿಗಳನ್ನು ರೂಪಿಸಿದ್ದಾರೆ.

ಬ್ರಹ್ಮನ ಶಿಲ್ಪ ನಿರೂಪಣೆಯಲ್ಲಿ ಆತನ ವಾಹನವಾಗಿ ಹಂಸ ಪಕ್ಷಿಯು ಚಿತ್ರಿತವಾಗಿದೆ. ಮಹಾವಿಷ್ಣುಗೃಹದ ಮಂಟಪದ ಚತ್ತಿನ ಮಧ್ಯ ಭಾಗದಲ್ಲಿ ಚತುರ್ಮುಖ ಬ್ರಹ್ಮನು ಹಂಸದ ಮೇಲೆ ಆಸೀನನಾಗಿದ್ದಾನೆ. **(ಚಿತ್ರ ೧೧೧)** ಇಷ್ಟೇ ಉತ್ತಮವಾದ ಇನ್ನೊಂದು ಪ್ರತಿಮೆಯು ವಿತಾನದಲ್ಲಿಯೂ ಇದೆ.



**ಚಿತ್ರ ೧೧೧. ಹಂಸಾರೂಢ ಬ್ರಹ್ಮ, ಮಹಾವಿಷ್ಣು ಗೃಹ**

[೨೩] Sivaramamurti C.,op.cit. p.27

[೨೪] Ibid

[೨೫] Saletore., R.N., Vijayanagar Art, Delhi, p.176

ಐಹೊಳೆಯ ಹುಚ್ಚಪ್ಪಯ್ಯನ ಮಠವು ಒಂದು ರಾಚನಿಕ ದೇವಾಲಯ. ಅದರ ವಿತಾನದಲ್ಲಿರುವ ಬ್ರಹ್ಮನ ಶಿಲ್ಪಕಂಡರಣೆ ಗಮನಾರ್ಹವಾದುದು. ಆತನ ವಾಹನವಾದ ಹಂಸ ಪಕ್ಷಿಯು ಕಮಲಪೀಠದ ಮೇಲೆ ನಿಂತಿರುವಂತೆ ತೋರಿಸಲಾಗಿದೆ. ಅದು ತನ್ನೆರಡು ರೆಕ್ಕೆಗಳನ್ನು ಅಗಲವಾಗಿ ಬಿಚ್ಚಿಕೊಂಡಿದೆ. ಅದರ ಮೇಲೆ ಬ್ರಹ್ಮನು ಆಸೀನವಾಗಿದ್ದು ಇದೊಂದು ಚಿತ್ತಾಕರ್ಷಕವಾದ ಅಪರೂಪದ ಶಿಲ್ಪವಾಗಿದೆ.

ಐಹೊಳೆಯ ಗಳಗನಾಥ ಗುಡಿಯ ವಿತಾನದಲ್ಲಿ, ಗರ್ಭಗೃಹಕ್ಕೆ ಹೊಂದಿರುವ ಅಂಕಣದಲ್ಲಿ, ಬ್ರಹ್ಮನು ಹಂಸದ ಮೇಲೆ ಸವ್ಯಲಲಿತಾಸನದಲ್ಲಿ ಕುಳಿತಿರುವಂತೆ ಶಿಲ್ಪವನ್ನು ಬಿಡಿಸಲಾಗಿದೆ. ಬ್ರಹ್ಮನನ್ನು ಅಭಿಮುಖವಾಗಿ ಮತ್ತು ಹಂಸವಾಹನವನ್ನು ಪಾರ್ಶ್ವಮುಖವಾಗಿ ತೋರಿಸಿದ್ದಾರೆ. ಶಿಲ್ಪವು ಬಹಳಷ್ಟು ನಶಿಸಿರುವುದು ದುರ್ದೈವದ ಸಂಗತಿ.

**ನವಿಲು :**

'ನಿಲ್ಲು ನಿಲ್ಲೆಲೆ ನವಿಲೆ, ನಿನ್ನ ಕಣ್ಣುಗಳೇಸು, ಕಣ್ಣ ಬಣ್ಣಗಳೇಸು ಎಣಿಸಲಾರೆ' ಎಂದು ಮಧುರಚೆನ್ನರು ಹಾಡಿದ್ದಾರೆ. ಮಯೂರಿನ ವೈಶಿಷ್ಟ್ಯವೇ ಅದರ ಈ ಕಣ್ಣುಗಳು ಮತ್ತು ಬಣ್ಣಗಳು. ನವಿಲಿನ ಮೈ ಬಣ್ಣವು ಮನಮೋಹಕವಾದುದು. ಮಿಂಚುವ ನೀಲಿ ಮತ್ತು ಹಸಿರು ಮಿಶ್ರಿತ ಬಣ್ಣ ಅದರದು. ಸಾವಿರ ಕಣ್ಣು (!) ಗಳಿರುವ ವರ್ಣರಂಜಿತ ಗರಿಗಳನ್ನು ಬಿಚ್ಚಿ ಕೇಕೆ ಹಾಕುತ್ತ ಕುಣಿಯುವ ಗಂಡು ನವಿಲೇ ಹೆಚ್ಚು ಮುದ ನೀಡುತ್ತದೆ.

ಕಲಾವಿದನನ್ನು ಮಯೂರ ಆಕರ್ಷಿಸಿದ್ದುದು ಈ ಗುಣಗಳಿಂದಾಗಿ. ಅದರ ಲಾವಣ್ಯ ಬಿಂಕದ ನಡಿಗೆ ಕಲಾವಿದನ ಕಲ್ಪಕತೆಯ ಗರಿಯನ್ನು ಬಿಚ್ಚುವಂತೆ ಮಾಡಿವೆ. ಶಿಲ್ಪಾಲಂಕಾರದಲ್ಲಿ ನವಿಲಿಗೆ ಹೆಚ್ಚು ಪ್ರಾಧ್ಯಾನ್ಯ ಲಭಿಸಿದೆ. ನವಿಲನ್ನು ಚಲುಕ್ಯ ಶಿಲ್ಪಗಳು ಸ್ವತಂತ್ರ ಶಿಲ್ಪವಾಗಿ, ಕಾರ್ತಿಕೇಯನ ವಾಹನವಾಗಿ ಮತ್ತು ಕಲಾತ್ಮಕ ಚಿತ್ತಾರಗಳಲ್ಲಿ ಹಲವು ಬಗೆಯಲ್ಲಿ ಬಿಡಿಸಿದ್ದಾರೆ.

ಬಾದಾಮಿಯ ಒಂದನೆಯ ಗುಹಾಲಯದ ಉಪಗುಹೆಯ ದಕ್ಷಿಣ ಗೋಡೆಯ ಮೇಲೆ ಕಾರ್ತಿಕೇಯನು ನವಿಲನ್ನೇರಿ ಹೊರಟಿರುವ ಉಬ್ಬು ಶಿಲ್ಪವಿದೆ. ಎರಡನೆಯ ಗುಹೆಯ ಕಂಬವೊಂದರ ಮೇಲೆ ವೃತ್ತಾಕಾರದ ಉಬ್ಬು ಶಿಲ್ಪವಿದೆ. ರೆಕ್ಕೆ ಬಿಚ್ಚಿಕೊಂಡು ಹಾರುತ್ತಿರುವ ನವಿಲಿನ ಮೇಲೆ ಕಾರ್ತಿಕೇಯನು ಭದ್ರವಾಗಿ ಕುಳಿತಿದ್ದಾನೆ. ಪ್ರಶ್ನಿಸುವ ರೀತಿಯಲ್ಲಿ ನವಿಲು ಕತ್ತನ್ನು ಎತ್ತಿ ತನ್ನ ಒಡೆಯನತ್ತ ನೋಡುತ್ತಿದೆ ! ಕಾರ್ತಿಕೇಯನು ಆ ಪ್ರಶ್ನೆಗೆ ನಗು ಬೀರಿದ್ದಾನೆ.

ಮಹಾ ವಿಷ್ಣು ಗೃಹದ ಬೋದಿಗೆಯ ಸಾಲಭಂಜಿಕಾ ಶಿಲ್ಪದಲ್ಲಿ ಹಲಸಿನ ಮರದ ಅಡಿಯಲ್ಲಿ ಮ್ಲಾನ ವದನದ ವನಿತೆ ನಿಂತಿದ್ದಾಳೆ. ಆ ಗಿಡದಲ್ಲಿ ಜೋಡಿ ನವಿಲುಗಳಿಗೆ ಒಂದೇ ದೇಹವನ್ನು ತೋರಿಸುವ ಜಾಣ್ಮೆಯನ್ನು ರೂವಾರಿ ಪ್ರದರ್ಶಿಸಿದ್ದಾನೆ. ತಾನೂ ಆ ನವಿಲುಗಳಂತೆ ಜೋಡಿಯಾಗಿಲ್ಲವಲ್ಲ ಎಂಬ ಚಿಂತೆ ಧ್ವನಿತಗೊಡಿದೆ.

ಐಹೊಳೆಯ ಹುಚ್ಚಿಮಲ್ಲಿ ಗುಡಿಯ ಮುಖಮಂಟಪದ ವಿತಾನದಲ್ಲಿ ಕಾರ್ತಿಕೇಯನ ಶಿಲ್ಪವಿದೆ. ಈ ಶಿಲ್ಪದ ಬಹುಭಾಗವನ್ನು ಆವರಿಸಿರುವ ನವಿಲಿನ ಕೆತ್ತನೆ ಗಮನಾರ್ಹವಾದುದು. ದೇವನು ನವಿಲಿನ ಮೇಲೆ ಕುಳಿತು ತಾರಕಾಸುರನನ್ನು ದಂಡಿಸುತ್ತಿದ್ದಾನೆ. ಅಸುರನ ಮೇಲೆ ಕುಳಿತಿರುವ ನವಿಲಿನ ಮುಖದಲ್ಲಿ ನಲಿವಿದೆ.

ವಿರೂಪಾಕ್ಷ ದೇವಾಲಯದ ಉತ್ತರ ಗೋಡೆಯ ಮೇಲೆ ನವಿಲನ್ನು ಸ್ವತಂತ್ರವಾಗಿ ಬಿಡಿಸಲಾಗಿದೆ. (ಚಿತ್ರ ೧೧೨) ಪೂರ್ವದ ಗೋಡೆಯ ಲಿಂಗೋದ್ಭವ ಶಿವನ ಮೇಲಿರುವ ನವಿಲು ತೋರಣವು ಚಲುಕ್ಯ ರೂವಾರಿಗಳ ವಿಶಿಷ್ಟ ಕಲಾಕೃತಿ. ದೇವಕೋಷ್ಟವನ್ನು ಮಕರ ತೋರಣದಿಂದ ಅಲಂಕರಿಸುವುದು ವಾಡಿಕೆ. ಇಲ್ಲಿ ಶಿಲ್ಪಿಯು ಮಯೂರ ತೋರಣವನ್ನು ಬಿಡಿಸಿ ತನ್ನ ವೈಶಿಷ್ಟ್ಯವನ್ನೂ, ಪ್ರಾವೀಣ್ಯವನ್ನೂ ಪ್ರದರ್ಶಿಸಿದ್ದಾನೆ. ನವಿಲುಗಳೆರಡೂ ಉದ್ದಾದ



**ಚಿತ್ರ ೧೧೨. ಶೈಲೀಕೃತ ನವಿಲು, ಪಟ್ಟದಕಲ್ಲ**



ಚಿತ್ರ ೧೧೩. ನವಿಲು ತೋರಣ, ವಿರೂಪಾಕ್ಷ ದೇವಾಲಯ

ಕತ್ತನ್ನು ಚಾಚಿ, ಚುಂಚನ್ನು ಅರ್ಧಪದ್ಮದ ಮೇಲೆ ಇಟ್ಟಿವೆ. ಅವುಗಳ ಬಾಲಗಳು ಸುರುಳಿಗಳ ಚಿತ್ತಾರಗಳಿಂದ ಅಂದಗೊಂಡಿವೆ. (ಚಿತ್ರ ೧೧೩)

ಮಯೂರ ನಕ್ಷೆಯನ್ನೊಳಗೊಂಡ ಹಲವಾರು ಉಬ್ಬು ಶಿಲ್ಪಗಳು ಕಂಬಗಳ ಅಲಂಕಾರಕ್ಕಾಗಿ ಬಳಸಿರುವರು. ಜಾಲಂಧ್ರದ ರಚನೆಯಲ್ಲಿ ಮಯೂರದ ಕಂಡರಣೆಯಿದೆ.

## ಗಿಳಿ

ವಾಸ್ತವ ಪಕ್ಷಿಲೋಕದ ಇನ್ನೂ ಹಲವಾರು ಪಕ್ಷಿಗಳು ಅಲಂಕಾರ ಶಿಲ್ಪಗಳನ್ನು ರೂಪಿಸಲು ವಸ್ತುಗಳಾಗಿವೆ. ಗಿಳಿಯು ಪ್ರೀತಿ, ಕಾಮನೆಗಳ ಸಂಕೇತವಾಗಿದೆ.[*] ಅಂತೆಯೇ ಕಾಮದೇವನಿಗೆ ಪ್ರಿಯವಾದ ಪಕ್ಷಿ. ತಿಳಿ ಹಸಿರು ಬಣ್ಣದ ಗರಿ ಮತ್ತು ಕಡುಗೆಂಪು ಬಣ್ಣದ ಕೊಕ್ಕೆಯಿಂದಾಗಿ ಶಿಲ್ಪಿಗಿಂತಲೂ ವರ್ಣಚಿತ್ರಕಾರನಿಗೆ ಹೆಚ್ಚು ಮೆಚ್ಚುಗೆಯೆಂದು ತಿಳಿಯಬಹುದು.

ಮಾತನಾಡುವ ಪಕ್ಷಿ ಎಂಬ ಖ್ಯಾತಿ ಇದರದ್ದು. ಅದು ಕೆಲವು ಸರಳ ಪದಗಳನ್ನು (ಅಸ್ಪಷ್ಟವಾಗಿ) ಪುನರುಚ್ಚರಿಸಬಲ್ಲದು. ಆ ಕಾರಣಕ್ಕಾಗಿ ಪ್ರಾಚೀನರು ಮನರಂಜನೆಗೆಂದು ಈ ಪಕ್ಷಿಯನ್ನು ಪಂಜರದಲ್ಲಿರಿಸಿ ಸಾಕುತ್ತಿದ್ದರು. ಗಿಳಿಯೊಂದಿಗೆ ಸಂಭಾಷಣೆ ನಡೆಸುವ ಬೆಡಗಿಯನ್ನು ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ನಂದಿಮಂಟಪದ ಹೊರ ಗೋಡೆಯ ಮೇಲೆ ಕಾಣಬಹುದು. (ಚಿತ್ರ ೧೧೪) ಮಲ್ಲಿಕಾರ್ಜುನ ಗುಡಿಯ ಮಂಟಪದ ಕಂಬೊಂದರಲ್ಲಿ ವನಿತೆಯೊಬ್ಬಳು ಗಿಳಿಯ ಮೈಯನ್ನು ಪ್ರೀತಿಯಿಂದ ತಟ್ಟುತ್ತಿದ್ದಾಳೆ. ಮಹಾವಿಷ್ಣು ಗೃಹದ ಅಧಿಷ್ಠಾನದ ಮೇಲೆ ಮತ್ತು ಕಂಬದ ಮೇಲಿನ ವೃತ್ತ ಫಲಕದಲ್ಲಿಯ ದಂಪತಿಗಳ ಪಕ್ಕದಲ್ಲಿ ಗಿಳಿಯನ್ನು ಕೆತ್ತಿದ್ದಾರೆ. ಎರಡನೆಯ ಗುಹೆಯ ಅರೆಗಂಬದಲ್ಲಿ ಗಿಳಿಯ ಮುಖವಿರುವ, ಮತ್ತು ಉಳಿದ ದೇಹವೆಲ್ಲ ಸಂಕೀರ್ಣನಕ್ಷೆಗಳಿಂದ ಕೂಡಿರುವ ಶಿಲ್ಪದ ಕಂಡರಣೆಯಿದೆ.



ಚಿತ್ರ ೧೧೪. ಶುಕ ಭಾಷಿಣಿ, ವಿರೂಪಾಕ್ಷ ದೇವಾಲಯ

[*] Aryan K.C. op. cit., p.71



ಚಿತ್ರ ೧೧೫. ಜಟಾಯು-ರಾವಣ, ವಿರೂಪಾಕ್ಷ ದೇವಾಲಯ

## ಪಾರಿವಾಳ

ಗಿಳಿಯಂತೆ ಪಾರಿವಾಳವೂ ಸಾಕು ಪಕ್ಷಿಯಾಗಿದ್ದಿತು. ಪ್ರಾಚೀನ ಕಾಲದಲ್ಲಿ ಪಾರಿವಾಳವು ಸಂದೇಶವಾಹಕವಾಗಿ ಬಲುಪ್ರಯೋಜನ ಕಾರಿ ಎನಿಸಿತ್ತು. ಪಟ್ಟದಕಲ್ಲಿನ ಮಲ್ಲಿಕಾರ್ಜುನ ಗುಡಿಯಲ್ಲಿ ಸುಂದರಿಯೊಬ್ಬಳು ಪಾರಿವಾಳವನ್ನು ಮೈ ಸವರಿ ಮಾತನಾಡುವ ದೃಶ್ಯವನ್ನು ಕಾಣಬಹುದು. ಪ್ರಾಯಶಃ ಅವಳು ಪ್ರಿಯಕರನಿಗೆ ಸಂದೇಶ ಕಳಿಸುವ ಹವಣಿಕೆಯಲ್ಲಿರ ಬಹುದು. ಶಾಂತದೂತವೆನಿಸುವ ಪಾರಿವಾಳಗಳು ಆದರ್ಶ ಪ್ರೇಮಿಗಳೆಂದು ಹೆಸರಾಗಿವೆ.

## ಜಟಾಯು

ಜಟಾಯು ಪಕ್ಷಿರಾಜನೆಂದು ಪ್ರಾಚೀನ ಕಾವ್ಯಗಳಲ್ಲಿ ಬಣ್ಣಿಸಲಾಗಿದೆ. ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗುತ್ತಿರುವಾಗ ಜಟಾಯು ರಾವಣನನ್ನು ಎದುರಿಸಿ ಹೋರಾಡಿತು. ರಾವಣನು ಅದರ ರೆಕ್ಕೆಗಳನ್ನು ಕತ್ತರಿಸಿದನು. ಈ ಸನ್ನಿವೇಶವನ್ನು ವಿರೂಪಾಕ್ಷ ದೇವಾಲಯದ ದಕ್ಷಿಣ ಗೋಡೆಯ ಮೇಲೆ ಶಿಲ್ಪಿಸಿದ್ದಾರೆ. **(ಚಿತ್ರ ೧೧೫)**

ಗಂಡಭೇರುಂಡ ಎಂಬುದು ಇನ್ನೊಂದು ಕಾಲ್ಪನಿಕ ಪಕ್ಷಿ. ಅಸಾಧಾರಣ ಸಾಮರ್ಥ್ಯವಿರುವ ಈ ಪಕ್ಷಿಯು ರೂವಾರಿಗಳಿಗೆ ಶಿಲ್ಪ ಕಂಡರಣೆಗೆ ವಸ್ತುವಾಗಿದೆ. ಮಲ್ಲಿಕಾರ್ಜುನ ಗುಡಿಯ ಗರ್ಭಗೃಹದ ಚೌಕಟ್ಟಿನ ಮೆಲೆ ಇರುವ ಸಣ್ಣ ಮಂಟಪದಲ್ಲಿ ಶಿವ ಪಾರ್ವತಿಯನ್ನು ರೂಪಿಸಿದ್ದಾರೆ. ಪಾರ್ವತಿಯ ಕೆಳಗೆ ಇರುವ ಎರಡು ಮುಖ ಪಕ್ಷಿ ಗಂಡಭೇರುಂಡವಾಗಿದೆ. ಈ ಪೌರಾಣಿಕ ಪಕ್ಷಿಯು ಶಾಂತಿ, ಪ್ರಗತಿ ಮತ್ತು ಸಮೃದ್ಧಿಗಳ ಸಂಕೇತವೆಂದು ಭಾವಿಸಲಾಗಿದೆ.[೨೭] ಚಲುಕ್ಯರಿಂದ ಮೊದಲ್ಗೊಂಡು ಕರ್ನಾಟಕದಲ್ಲಿ ಬಹುತೇಕ ಎಲ್ಲ ಅರಸರು ಈ ಸಂಕೇತವನ್ನು ಬಳಸಿರುವರು. ಗಂಡಭೇರುಂಡವು ಕೆಳದಿ ಅರಸರ ರಾಜಲಾಂಛನವಾಗಿದ್ದಿತು. ಶಿಲ್ಪಗಳಲ್ಲಿ ಗಂಡಭೇರುಂಡದ ಸಾಮರ್ಥ್ಯವು ಸಾಂಕೇತಿಕವಾಗಿ ನಿರೂಪಿತವಾಗಿದೆ.

## ಗರುಡ

ಪೌರಾಣಿಕ ಹಿನ್ನೆಲೆಯ ಇನ್ನೊಂದು ಪಕ್ಷಿ ಗರುಡ. ಇದು ವಿಷ್ಣುವಿನ ವಾಹನವಾಗಿ ಶಿಲ್ಪದಲ್ಲಿ ಹಲವೆಡೆ ಕಾಣಿಸಿಕೊಂಡಿದೆ. ಬಾಗಿಲುವಾಡದ ಅಲಂಕರಣದಲ್ಲಿ ಗರುಡ ಶಿಲ್ಪದ ಕೆತ್ತನೆಯು ಲಕ್ಷಣ ವಿಶೇಷವೆನಿಸಿದೆ. ಬಾದಾಮಿಯ ಮಹಾವಿಷ್ಣು ಗೃಹದ ಮುಂಜೂರಿನಲ್ಲಿ ನೆಲವಳ್ಕೆ ರೂಪಿಸಿದ ಗರುಡ ಪ್ರತಿಮೆಯು ಅಸಾಧಾರಣವಾದುದು. ಬೃಹತ್ತು, ಮಹತ್ತುಗಳಿಂದ ಕೂಡಿದ ಅಪ್ರತಿಮ ಶಿಲ್ಪವಿದು.

ಭಾರತೀಯ ಕಲಾ ಪರಂಪರೆಯ ಅಂಗವಾಗಿರುವ ಚಲುಕ್ಯ ಶಿಲ್ಪಕಲೆಯು ಇಹಲೋಕದ ಪ್ರತಿಬಿಂಬವಾಗಿದೆ. ಅದು ಮಾನವನ ನಿತ್ಯ ಜೀವನದ ವ್ಯವಹಾರಗಳನ್ನು ಚಿತ್ರಿಸುವುದರ ಜೊತೆಗೆ ಪ್ರಾಣಿಲೋಕದ ವೈಶಿಷ್ಟ್ಯಗಳನ್ನು ಶಿಲ್ಪಗಳಲ್ಲಿ ಸೆರೆಹಿಡಿದಿದೆ. ಪ್ರಾಚೀನರ ಜೀವನ ವಿಧಾನವನ್ನು ಅರ್ಥೈಸಿಕೊಳ್ಳುವಲ್ಲಿ ಇಂತಹ ಪ್ರಾಣಿ ಶಿಲ್ಪಗಳು ಕೂಡ ತುಂಬ ನೆರವಾಗುತ್ತವೆ.

[೨೭] ಕನ್ನಡ ವಿಶ್ವಕೋಶ, ಸಂಪುಟ 5, ಪು. 895

ದೇವಾಲಯದ ವಿವಿಧ ವಾಸ್ತು ಅಂಗಗಳನ್ನು ಸುಂದರ ಗೊಳಿಸಲು ಹಲವಾರು ವಿಧದ ಶಿಲ್ಪಗಳನ್ನು ಸೃಜಿಸಿರುವುದನ್ನು ಮನಗಂಡಿದ್ದೇವೆ. ಇಂತಹ ಅಲಂಕಾರ ಶಿಲ್ಪಗಳನ್ನು ಇನ್ನೂ ಹೆಚ್ಚು ಅಂದಗೊಳಿಸಲು ಚಲುಕ್ಯ ರೂವಾರಿಗಳು ಪ್ರಧಾನ ಶಿಲ್ಪದ ಪಕ್ಕದಲ್ಲಿ ತರು-ಲತೆಗಳನ್ನು ಬಿಡಿಸಿದ್ದಾರೆ. ಗಿಡಬಳ್ಳಿಗಳು ಭಾರತೀಯರಿಗೆ ಪೂಜ್ಯನೀಯವಾದವುಗಳು. ಅದು ಕಾರಣ ಭಾರತೀಯ ಸಾಹಿತ್ಯ ಕೃತಿಗಳಲ್ಲಿ, ಕಲಾಕೃತಿಗಳಲ್ಲಿ ಅವಕ್ಕೆ ಮಹತ್ವದ ಸ್ಥಾನವಿದೆ. ಅಶ್ವತ್ಥ, ಬಿಲ್ವ ಮೊದಲಾದ ಮರಗಳನ್ನು ಈಗಲೂ ಪೂಜಿಸಲಾಗುತ್ತದೆ. ಅವುಗಳು ಸ್ತ್ರೀಯರಿಗೆ ಸಂತಾನವನ್ನು ಕರುಣಿಸುತ್ತವೆಂಬ ನಂಬುಗೆ ಜನಪದರದು. ಶಿಲ್ಪಗಳ ರಚನೆಯಲ್ಲಿ ವೃಕ್ಷಗಳನ್ನು ಪೂರಕವಾಗಿ ಸಂಯೋಜಿಸುವ ಸಂಪ್ರದಾಯವು ಪ್ರಾಚೀನ ಕಾಲದಿಂದಲೂ ಪ್ರಚಲಿತವಿದ್ದಿತು. ಸಾಂಚಿ, ಭಾರ್ಹುತ್, ಅಮರಾವತಿಯ ಶಿಲ್ಪಗಳು ಈ ಮಾತಿಗೆ ಸಾಕ್ಷಿ ಹೇಳುತ್ತಿವೆ.

ಮಾವಿನ ಮರದ ಕೆತ್ತನೆಯನ್ನು ಹಲವಾರು ಚಲುಕ್ಯಶಿಲ್ಪಗಳಲ್ಲಿ ಕಾಣುತ್ತೇವೆ. ಇದು ಪವಿತ್ರಮರವೆಂದು ಪರಿಗಣಿತವಾಗಿದೆ. ಮಾವಿನ ಎಲೆ, ಟೊಂಗೆಗಳು ದುಷ್ಟ ಶಕ್ತಿಗಳನ್ನು ದೂರಮಾಡುತ್ತವೆ ಎಂಬ ನಂಬುಗೆ ಜನಪದರದು[೧]. ಸಂತಾನ ಬಯಸುವವರು ಮಾವನ್ನು ಪೂಜಿಸುವ ಸಂಪ್ರದಾಯವಿದೆ.[೨] ಮಹಾವಿಷ್ಣುಗೃಹದ ಬೋದಿಗೆ ಶಿಲ್ಪದಲ್ಲಿ ದಂಪತಿಗಳು ಮಾವಿನ ಮರದಡಿಯಲ್ಲಿ ಪ್ರೇಮ ಸಲ್ಲಾಪದಲ್ಲಿ ತೊಡಗಿರುವ ಸನ್ನಿವೇಶವಿದೆ. ಮರದಲ್ಲಿ ಬಿಡಿಸಲಾದ ಮಾವಿನ ಹಣ್ಣುಗಳು ಅವರ ಬಾಳಿನ ಮಧುರತೆಯನ್ನು ಸಂಕೇತಿಸುತ್ತವೆ. ಇನ್ನೊಂದು ಬೋದಿಗೆಯಲ್ಲಿ ಮಾವಿನ ಗಿಡದ ಆಶ್ರಮದಲ್ಲಿ ತಾಡೋಲೆಯನ್ನು ಹಿಡಿದುಕೊಂಡು ನಿಂತ ಚೆಲುವೆಯ ಚಿತ್ರವಿದೆ. ಗಿಡದ ಮೇಲೆ ಎರಡು ಮಂಗಗಳು ಮಾವಿನ ಹಣ್ಣಿಗಾಗಿ ಹಾತೊರೆಯುವುದನ್ನು ಶಿಲ್ಪಿಯು ಕಲಾತ್ಮಕವಾಗಿ ಅಭಿವ್ಯಕ್ತಗೊಳಿಸಿದ್ದಾನೆ. ಇದರಂತೆ ರಸಿಕದಂಪತಿಗಳು ಮಾವಿನ ಗಿಡದಡಿಯಲ್ಲಿ ಸಲ್ಲಾಪದಲ್ಲಿರುವ ದೃಶ್ಯಗಳು ಕಂಬದ ಮೇಲಿನ ಆಯತಾಕಾರದ ಫಲಕಗಳಲ್ಲಿವೆ. ವಿರೂಪಾಕ್ಷ ದೇವಾಲಯದಲ್ಲಿ ದಂಪತಿಗಳು ಮಾವಿನ ಗಿಡದ ಕೆಳಗೆ  ಕುಳಿತ ಸನ್ನಿವೇಶವಿದ್ದರೆ, ಲಾಡಖಾನ ಗುಡಿಯಲ್ಲಿ ನಿಂತಿರುವ ರಸಿಕರಿದ್ದಾರೆ. ಜೈನ ಪರಂಪರೆಯಲ್ಲಿ ಅಂಬಿಕಾ ಯಕ್ಷಿಯ ಶಿಲ್ಪಕ್ಕೆ ಮಾವಿನ ಮರದ ಹಿನ್ನೆಲೆಯಿರುತ್ತದೆ. ಐಹೊಳೆಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿಯ ಅಂಬಿಕೆಯ ವಿಗ್ರಹವು ಅದ್ಭುತ ಕಲಾಕೃತಿಯಾಗಿದೆ. ಅಂಬಿಕೆಯ ಎಡ ಬಲಗಳಲ್ಲಿ ಮಾವಿನ ಹಣ್ಣುಗಳು ಗಿಡದಿಂದ ನೇತು ಬಿದ್ದಿರುವಂತೆ ಕೆತ್ತನೆ ಮಾಡಲಾಗಿದೆ. ಇದೊಂದು ದುಂಡು ಪ್ರತಿಮೆ ಎನ್ನುವಂತೆ ಕಂಡರಣೆಯ ಹೆಚ್ಚುಗಾರಿಕೆಯಿದೆ.

ಭಾರತೀಯರಿಗೆ ಅಶ್ವತ್ಥ ಮರವು ಬಲು ಪವಿತ್ರವಾದುದು. ದೇಗುಲದ ಆವರಣದಲ್ಲಿ ಪೂಜೆಗೆಂದು ಅಶ್ವತ್ಥಮರವನ್ನು ಬೆಳೆಸುತ್ತಾರೆ. ನಮ್ಮ ಪೂರ್ವಜರು ಅಶ್ವತ್ಥವೃಕ್ಷದಲ್ಲಿ ವಾಸವಾಗಿರುವರೆಂಬ ನಂಬುಗೆಯಿದೆ.[೩] ಅದು ಕಾರಣ ಅಶ್ವತ್ಥವು ಪೂಜಾವೃಕ್ಷ. ಸಿದ್ಧಾರ್ಥ ಈ

೧ Bansi Lal Malla, Trees in Indian Art, Mythology and Folklore, New Delhi, P. 57.

೨ Aryan, K. C., op. cit, P. 50

೩ Bansi Lal Malla, op. cit, P. 59.

ಮರದ ಅಡಿಯಲ್ಲಿ ಧ್ಯಾನ ಮಾಡಿ ಬುದ್ಧನಾದನು. ಆದ್ದರಿಂದ ಇದು ಬೋಧಿವೃಕ್ಷವೆನಿಸಿದೆ. ಜ್ಞಾನ ನೀಡುವ ಈ ಗಿಡಗಳನ್ನು ಋಷಿಗಳು ಆಶ್ರಮಗಳಲ್ಲಿ ಬೆಳೆಸುತ್ತಿದ್ದರು. ಗುರುಕುಲ ಶಿಕ್ಷಣ ಪದ್ಧತಿಯಲ್ಲಿ ಈ ಗಿಡಗಳ ಕೆಳಗೆ ಗುರುಗಳು ವಿದ್ಯಾರ್ಥಿಗಳಿಗೆ ಜ್ಞಾನ ಬೋಧನೆ ಮಾಡುತ್ತಿದ್ದರು. ವಿರೂಪಾಕ್ಷ ಗುಡಿಯ ಎರಡು ಕಂಬಗಳಲ್ಲಿ ಮುನಿಗಳ ಆಶ್ರಮದ ಚಿತ್ರಣಗಳಿವೆ. ಅರಳಿ ಮರದ ಕೆಳಗೆ ಗುರುಗಳು ಶಿಷ್ಯರಿಗೆ ಪಾಠ ಮಾಡುವ ದೃಶ್ಯವಿದೆ. ಬಾದಾಮಿಯಲ್ಲಿ ಕೋಷ್ಠರಾಯನ ಹಿಂಬದಿಯಲ್ಲಿ ಅಶ್ವತ್ಥವು ಸೂಚ್ಯವಾಗಿ ಬಿಂಬಿತವಾಗಿದೆ.

ಬಾಳೆಯಗಿಡ (ಕದಳೀ ವೃಕ್ಷವು) ಪೂಜಾರ್ಹವಾಗಿದೆ. ಮಂಗಲಕರ ಧಾರ್ಮಿಕ ಆಚರಣೆಗಳಲ್ಲಿ ಬಾಳೆಯ ಕಂಬಗಳ ಅಲಂಕಾರವಿರುತ್ತದೆ. ಈ ವೃಕ್ಷದ ತಾಯ್ತನವು ಪ್ರಸಿದ್ಧವಾದುದು. ತನ್ನ ಮಕ್ಕಳ ಕಲ್ಯಾಣಕ್ಕಾಗಿ ತನ್ನನ್ನೇ ಸಮರ್ಪಿಸಿಕೊಳ್ಳುತ್ತದೆ. ಅದರ ಕಾಯಿಗಳು ಬಲಿಯುತ್ತಿದ್ದಂತೆ ತಾಯಿ ಗಿಡವು ಸೊರಗಿ ಸಾಯುತ್ತದೆ. ಈ ಮಂಗಲಕರ ಗಿಡವನ್ನು ಶಿಲ್ಪಿಗಳು ತಮ್ಮ ಕಲಾವಸ್ತುವನ್ನಾಗಿ ಮಾಡಿಕೊಂಡಿದ್ದಾರೆ.

ಬಾದಾಮಿಯ ಗುಹಾಲಯಗಳ ಕಂಬಗಳಲ್ಲಿ ಬಾಳೆಯ ಗಿಡದ ನೆರಳಲ್ಲಿ ದಂಪತಿಗಳು ಸಲ್ಲಾಪದಲ್ಲಿರುವ ದೃಶ್ಯಗಳನ್ನು ಕೆತ್ತಿರುವರು. ಪಟ್ಟದಕಲ್ಲಿನ ಗುಡಿಯ ಫಲಕವೊಂದರಲ್ಲಿ ಕದಳಿಬನದ ಚಿತ್ರಣವಿದೆ. ಲಾಡಖಾನ ಗುಡಿಯ ಕಂಬವೊಂದರ ಮೇಲೆ ಬಾಳೆಯ ಗಿಡದ ಕೆಳಗೆ ಕಿನ್ನರಿಯು ನಿಂತಿದ್ದಾಳೆ. ಪಕ್ಕದಲ್ಲಿ ಕಮಂಡಲವನ್ನು ಎತ್ತಿ ಹಿಡಿದ ಮುನಿ ಇರುವನು.

ಹೀಗೆ ಹಲವಾರು ಗಿಡ-ಮರಗಳು ಶಿಲ್ಪಕ್ಕೆ ವಸ್ತುವಾಗಿವೆ. ರಾಮಾಯಣ ಸನ್ನಿವೇಶದ ಚಿತ್ರಣದ ಭಾಗವಾಗಿ ಅಶೋಕವನದ ಕೆತ್ತನೆಯು ವಿರೂಪಾಕ್ಷ ಗುಡಿಯ ಕಥಾನಕ ಶಿಲ್ಪದಲ್ಲಿ ಸೂಚ್ಯವಾಗಿ ಮೂಡಿ ಬಂದಿದೆ. ಯಮಲಾರ್ಜುನ ಗಿಡವು ಕೃಷ್ಣ ಲೀಲೆಯ ಕತೆಯ ಅಂಗವಾಗಿ ಮಹಾವಿಷ್ಣು ಗುಹಾಲಯದ ತೊಲೆಯ ಮೇಲೆ ಮತ್ತು ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ ಪ್ರದರ್ಶಿತಗೊಂಡ ಬಿಡಿ ಅಧಿಷ್ಠಾನ ಶಿಲೆಯಲ್ಲಿ ಕಾಣಿಸಿಕೊಂಡಿದೆ. ಬಾದಾಮಿಯ ಮೂರನೆಯ ಗುಹಾಲಯದ ಬೋದಿಗೆ ಶಿಲ್ಪದಲ್ಲಿ ಈ ಪ್ರದೇಶದಲ್ಲಿ ಅಲಭ್ಯವಾಗಿರುವ ಹಲಸಿನ ಮರವನ್ನು ಕಡೆದಿರುವರು. ಹಲವಾರು ಸಸ್ಯ ಪ್ರಭೇದಗಳನ್ನು ರೂವಾರಿಗಳು ಶಿಲ್ಪಗಳಲ್ಲಿ ಸೃಷ್ಟಿಸಿದ್ದಾರೆ.

ಅದರಂತೆ ದೇವಾಲಯಗಳ ವಾಸ್ತು ಅಂಗಗಳನ್ನು ಸುಂದರಗೊಳಿಸಲು ಶಿಲ್ಪಿಗಳು ಲತೆಗಳನ್ನೂ ಸಂಯೋಜಿಸಿದ್ದಾರೆ. ಚಲುಕ್ಯರ ದ್ವಾರ ಬಂಧಗಳಲ್ಲಿಯ ಶಾಖೆಗಳಲ್ಲಿ ವಲ್ಲರಿ ಶಾಖೆಯೂ ಒಂದು. ಈ ಬಗೆಯ ಬಳ್ಳಿಯ ಕೆತ್ತನೆಯು ಚಲುಕ್ಯ ದೇವಾಲಯಗಳ ವಿಶಿಷ್ಟ ಲಕ್ಷಣವೆನಿಸಿದೆ. ವಿಕಸಿತ ದೇವಾಲಯಗಳಾದ ವಿರೂಪಾಕ್ಷ, ಮಲ್ಲಿಕಾರ್ಜುನ ಮೊದಲಾದ ಗುಡಿಗಳಲ್ಲಿ ಕಂಬಗಳ ಮಧ್ಯದಲ್ಲಿರುವ ಲಂಬ ಪಟ್ಟಿಕೆಗಳಲ್ಲಿ ಲತಾ ಸುರುಳಿಗಳಿವೆ. ಹೊರ ಗೋಡೆಗಳ ಅಧಿಷ್ಠಾನ ಭಾಗದಲ್ಲಿಯೂ ಬಳ್ಳಿಯ ಅಲಂಕಾರವಿರುವುದುಂಟು.

ಸರ್ವವನ್ನೂ ತ್ಯಜಿಸಿ ದಿಗಂಬರನಾದ ಬಾಹುಬಲಿಗೆ ವಸ್ತ್ರಾಭರಣಗಳ ಅಲಂಕಾರ ಸಲ್ಲದು. ಆದ್ದರಿಂದ ಶಿಲ್ಪಿಯು ಬಾಹುಬಲಿಯ ಕೈಕಾಲುಗಳನ್ನು ಮಾಧವೀಲತೆಯಿಂದ ಅಂದಗೊಳಿಸಿದ್ದಾನೆ. ಹುಚ್ಚಪ್ಪಯ್ಯ ಗುಡಿಯ ತೊಲೆಗಳು, ಗೌಡರ ಗುಡಿ, ದುರ್ಗಾಗುಡಿ ಬಾಗಿಲುಗಳು ವಲ್ಲರಿಗಳಿಂದ ಅಲಂಕೃತವಾಗಿವೆ. ಪಟ್ಟದಕಲ್ಲಿನ ವಿರೂಪಾಕ್ಷ ಗುಡಿಯು ವಲ್ಲರಿ ವಾತಾಯನದಿಂದ ಶೋಭೆಗೊಂಡಿರುವುದೊಂದು ವಿಶೇಷ ಅಂಶವಾಗಿದೆ. ದೇವಾಲಯಗಳಲ್ಲಿಯ ಗೋಡೆ, ಕಂಬ ಮೊದಲಾದವುಗಳನ್ನು ಹೆಚ್ಚು ಸುಂದರವಾಗಿ ಕಾಣುವಂತೆ ಲತಾ ಸುರುಳಿಗಳನ್ನು ಅವಕಾಶ ದೊರೆತಲ್ಲಿ ರೂವಾರಿಗಳು ಬಿಡಿಸಿರುವರು.

**ಕಮಲ**

ಪ್ರಾಚೀನ ಹಿಂದೂ ಹಾಗೂ ಬೌದ್ಧ ಧರ್ಮದ ಕಲೆ ಮತ್ತು ಸಾಹಿತ್ಯದಲ್ಲಿ ಕಮಲ ಪುಷ್ಪದ ಸ್ಥಾನ ಹಿರಿದಾದುದು. ಈಗಲೂ ಅದಕ್ಕೆ ರಾಷ್ಟ್ರೀಯ ಪುಷ್ಪವೆಂಬ ಮನ್ನಣೆಯಿದೆ. ಭಾರತೀಯ

ಕಲೆಯಲ್ಲಿ ಅದು ಸೌಂದರ್ಯ ಹಾಗೂ ಪಾವಿತ್ರ್ಯದ ಕುರುಹಾಗಿ, ಆಧ್ಯಾತ್ಮಿಕ ಸಂಕೇತವಾಗಿ ಬಿಂಬಿತವಾಗಿದೆ. ಪೌರಾಣಿಕ ಕತೆಗಳಲ್ಲಿ ಕಮಲವು ವಿಷ್ಣುವಿನ ನಾಭಿಯಿಂದ ಉದಯಿಸಿ ಬ್ರಹ್ಮನಿಗೆ ಪೀಠವಾಗಿರುವ ಸಂಗತಿ ಕುತೂಹಲಕಾರಿಯಾದುದು.

ಕಮಲ ಪತ್ರವು ವಿರಕ್ತಿಯನ್ನು ಸಂಕೇತಿಸುತ್ತದೆ. ಪದ್ಮ ಪುಷ್ಪವು ಸಂಪತ್ತಿನ, ಸಮೃದ್ಧಿಯ ಸಂಕೇತವೂ ಹೌದು. ಹಾಗಾಗಿ ಕಮಲ ಹೂವಿನ ಕೆತ್ತನೆಯನ್ನು ದೇವಾಲಯಗಳಲ್ಲಿ ವಿಪುಲವಾಗಿ ಕಾಣಬಹುದು. ಈ ಪುಷ್ಪವು ವೃತ್ತಾಕಾರವಾಗಿದ್ದು ತಿಳಿಗೆಂಪು ಬಣ್ಣದಿಂದ ಮನೋಹರವಾಗಿದೆ. ಇದಕ್ಕೆ ಸಾವಿರ ದಳಗಳಿವೆ ಎಂಬ ಪ್ರತೀತಿಯಿದೆ.[೭] ಇದು ಫಲವತ್ತತೆಯನ್ನು ಅನುಗ್ರಹಿಸುತ್ತದೆ ಎಂಬ ಗ್ರಹಿಕೆಯಿದೆ. ಸಂಪತ್ತಿನ ದೇವತೆಯಾದ ಲಕ್ಷ್ಮಿಯು ಪದ್ಮಾಸೀನ.

ಅತಿ ಪ್ರಾಚೀನ ಕಮಲ ಪುಷ್ಪಗಳನ್ನು ಬೌದ್ಧಕಲೆಯಲ್ಲಿ ಕಾಣುತ್ತೇವೆ.[೮] ಇವು ಪೂರ್ಣಕುಂಭದ ಭಾಗವಾಗಿ ಶಿಲ್ಪಿತವಾಗಿದೆ. ಅಮರಾವತಿ ಶಿಲ್ಪಗಳಲ್ಲಿ ಕಮಲ ಪೂರ್ಣಘಟದ ಅಂಗವಾಗಿ ಪ್ರಕಟಗೊಂಡಿದೆ.[೯] ಗುಪ್ತರ ವಾಸ್ತುನಿರ್ಮಾಣಗಳಲ್ಲಿ ಈ ಬಗೆಯ ಅಲಂಕರಣವನ್ನು ಕಾಣುತ್ತೇವೆ.


ಚಿತ್ರ ೧೧೬. ಕಮಲ, ಕಂಬದ ಅಲಂಕರಣ

ಚಲುಕ್ಯರ ಗುಹಾಲಯ ಹಾಗೂ ರಾಚನಿಕ ಮಂದಿರಗಳ ಚತ್ತಿನ ಮೇಲೆ ಮತ್ತು ಕಂಬಗಳ ಮೇಲೆ **(ಚಿತ್ರ ೧೧೬)** ಪದ್ಮ ಪುಷ್ಪ ಕೆತ್ತನೆ ಸಾಮಾನ್ಯವಾಗಿ ಕಂಡು ಬರುತ್ತದೆ. ಪ್ರತಿಮಾಶಾಸ್ತ್ರ ತಿಳಿಸುವಂತೆ ಲಕ್ಷ್ಮಿ ಮತ್ತು ಸೂರ್ಯರು ಕೈಯಲ್ಲಿ ಕಮಲ ಹಿಡಿದಿರುವಂತೆ ಶಿಲ್ಪಿತರಾಗಿರುತ್ತಾರೆ. ಈ ಪುಷ್ಪವು ಶಿಲ್ಪಕಲೆಯಲ್ಲಿ ಹಲವು ವಿಧವಾಗಿ ಕೆತ್ತನೆ ಗೊಂಡಿದೆ. ಪೂರ್ಣವಿಕಸಿತ ಗೊಂಡು ವರ್ತುಲಾಕಾರದಲ್ಲಿ ಕಡೆದ ಕಮಲದ ಉಬ್ಬುಶಿಲ್ಪಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಕೆಲವೆಡೆ ಅರೆದೆರೆದ ದಳಗಳಿಂದಾದ ಚಿತ್ರಣವಿದೆ. ಮುಚ್ಚಿದ ದಳಗಳಿಂದ ಕೂಡಿರುವ ಮೊಗ್ಗುಗಳನ್ನು ಸಹ ಅಲಂಕಾರ ಶಿಲ್ಪಗಳಲ್ಲಿ ಬಳಸಲಾಗಿದೆ. ಕೆಲವು ಶಿಲ್ಪಗಳಲ್ಲಿ ಕಮಲ ಪುಷ್ಪದ ಪಾರ್ಶ್ವನೋಟವಿದೆ.

ಬಾದಾಮಿಯ ಶೈವಗುಹೆಯ ಮಂಟಪದ ಮೇಲ್ಗಂಡಿನಲ್ಲಿ ಕಮಲದ ಉಬ್ಬು ಶಿಲ್ಪವು ತುಂಬಾ ಕಲಾತ್ಮಕವಾಗಿದೆ. ಪುಷ್ಪದ ಒಳಸಾಲಿನ ದಳಗಳನ್ನು ಒಳಮುಖವಾಗಿಯೂ, ಹೊರಸಾಲಿನ ದಳಗಳನ್ನು ಹೊರಮುಖವಾಗಿಯೂ ರೂವಾರಿ ತೋರಿಸಿದ್ದಾನೆ. ಐಹೊಳೆಯ ಮೀನ ಬಸದಿಯ ಮಂಟಪದ ಮೇಲ್ಗಂಡು ಬೃಹದಾಕಾರದ ಕಮಲದ ಹೂವಿನಿಂದ ಅಲಂಕೃತವಾಗಿದೆ. ವೃತ್ತಾಕಾರದ ವಿಕಸಿತ ಪುಷ್ಪವನ್ನು ಚಚ್ಚೌಕಾದ ಚೌಕಟ್ಟಿನಲ್ಲಿ ಸಂಯೋಜಿಸಿದ್ದಾರೆ. ಇದರಿಂದಾಗಿ ನಾಲ್ಕು ಮೂಲೆಗಳಲ್ಲಿ ಉಂಟಾದ ಸ್ಥಳಾವಕಾಶವನ್ನು ಮತ್ತೆ ನಾಲ್ಕು ಚಿಕ್ಕದಾದ ಪದ್ಮಪುಷ್ಪಗಳಿಂದ ತುಂಬಿರುವರು. ನೆಲದ ಮೇಲೆ ಕೂಡ ಕಮಲದ ಹೂವನ್ನು ಬಿಡಿಸಿರುವರು. ರಾವಲಫಡಿಯ ಮಂಟಪದ ಮೇಲ್ಗಂಡು ಕೂಡ ತುಂಬಾ

೭ S. K. Ramachandra Rao, Encyclopedia of Indian Iconography. Vol. I, New Delhi, P. 255.

೮ M. Adinarayan op. cit P. 101.

೯ M. Adinarayan, op. cit, P. 89.

ರಮ್ಯವಾಗಿ ಕೆತ್ತನೆಗೊಂಡಿದೆ. (**ಚಿತ್ರ ೧೧೩**) ಮಧ್ಯದಲ್ಲಿ ಬೃಹದಾಕಾರದ ಕಮಲ ಪುಷ್ಪವನ್ನು ಚೌಕಾಕಾರದ ರಚನೆಯಲ್ಲಿ ಕಡೆದಿರುವರು. ಈ ಚೌಕದ ಬದಿಗಳು ಪಟ್ಟಿಗಳಿಂದಾಗಿದ್ದು ಅವು ಹೂಗಳಿಂದ ಅಲಂಕೃತಗೊಂಡಿವೆ.



**ಚಿತ್ರ ೧೧೩. ಕಮಲ, ವಿತಾನ, ರಾವಲ ಫಡಿ**

ಈ ಬಗೆಯ ಕಂಡರಣೆಯನ್ನು ರಾಚನಿಕ ಮಂದಿರಗಳಲ್ಲೂ ಕಾಣಬಹುದು. ಐಹೊಳೆಯ ಚಿಕ್ಕಿಗುಡಿಯ ಚತ್ತು ಬೃಹದಾಕಾರದ ಪದ್ಮ ಪುಷ್ಪದಿಂದ ಭೂಷಿತವಾಗಿದೆ. ಈ ವರ್ತುಲವನ್ನು ಚೌಕಾಕಾರದ ವಿನ್ಯಾಸದಲ್ಲಿ ಕಲಾತ್ಮಕವಾಗಿ ಹೊಂದಿಸಲಾಗಿದೆ. ಹುಚ್ಚಿಮಲ್ಲಿ ಗುಡಿಯ ಚತ್ತಿನ ಮಧ್ಯದಲ್ಲಿ ದೊಡ್ಡದಾದ ಕಮಲವನ್ನೂ ಮೂಲೆಗಳಲ್ಲಿ ಚಿಕ್ಕದಾದ ಕಮಲಗಳನ್ನೂ ಬಿಡಿಸಿದ್ದಾರೆ. ಪಟ್ಟದಕಲ್ಲಿನ ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ದೇವಾಲಯದ ಗರ್ಭಗೃಹದಲ್ಲಿ ಶಿವಲಿಂಗದ ಮೇಲೆ ಚತ್ತಿನಲ್ಲಿ ಕಮಲದ ಹೂವಿನ ಕೆತ್ತನೆ ಮಾಡಿರುವುದು ವಿಶೇಷವಾಗಿದೆ. ಸಾಮಾನ್ಯವಾಗಿ ಗರ್ಭಗೃಹದಲ್ಲಿ ಪ್ರಧಾನ ಪೂಜಾ ಪ್ರತಿಮೆಯನ್ನು ಹೊರತು ಪಡಿಸಿ ಇನ್ನಾವ ಆಲಂಕಾರಿಕ ಶಿಲ್ಪವು ಇರುವುದಿಲ್ಲ .

ಬಾದಾಮಿಯ ಶೈವ ಗುಹಾಲಯದ ಉಪಗುಹೆಯಲ್ಲಿ ದ್ವಿಭುಜ ಗಣೇಶನ ವಿಗ್ರಹವಿದೆ. ಆತನ ತಲೆಯ ಮೇಲೆ ಕಮಲ ಪುಷ್ಪವಿದೆ. ಯೋಗಶಾಸ್ತ್ರದಲ್ಲಿ ಇದು ಸಹಸ್ರಾರ ಕಮಲದ ಸಂಕೇತ. ಹೀಗೆ ಕಿರೀಟೋಪಾದಿಯಲ್ಲಿ ಪದ್ಮ ಪುಷ್ಪವನ್ನು ಹೊಂದಿರುವ ಇನ್ನೊಂದು ಸುಂದರ ಗಣೇಶ ಪ್ರತಿಮೆಯು ಅಲ್ಲಿಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿದೆ. ಮೂರನೆಯ ಗುಹಾಲಯದಲ್ಲಿನ ಸ್ಥಾನಕ ನರಸಿಂಹನ ಬೃಹತ್ ವಿಗ್ರಹವೂ ಕೂಡ ಹೀಗೆ ಕಮಲವನ್ನು ತಲೆಯ ಮೇಲೆ ಹೊತ್ತಿರುವಂತೆ ಶಿಲ್ಪಿತವಾಗಿದೆ.

ಚಲುಕ್ಯ ಶಿಲ್ಪಕಲೆಯ ಪುಷ್ಪ ವಿನ್ಯಾಸಗಳಲ್ಲಿ ಕಮಲದ ಹೂ ಸಿಂಹಪಾಲು ಪಡೆದಿದೆ. ಅದಕ್ಕೆ ಕಾರಣ ಅದರ ಸಹಜ ಚೆಲುವು ಹಾಗೂ ಆಧ್ಯಾತ್ಮಿಕ ಸಾಂಕೇತಿಕತೆ[೬]. ನಮ್ಮ ಆತ್ಮಶಕ್ತಿಯನ್ನು ಜಾಗೃತಗೊಳಿಸುವ ಸಂಕೇತವದು. ಮೂಲಾಧಾರದಲ್ಲಿ ನೆಲೆಸಿರುವ ಕುಂಡಲಿನಿ ಶಕ್ತಿಯು ಊರ್ಧ್ವಮುಖವಾಗಿ ಸಂಚರಿಸಿ ಸಹಸ್ರಾರ ದಳದ ಕಮಲದಲ್ಲಿ ಸಂಗಮಿಸುತ್ತದೆ ಎಂಬುದು ಯೋಗಿಗಳ ವಿವರಣೆ.

**ಪೂರ್ಣಕುಂಭ**

ಪೂರ್ಣಕುಂಭವೆಂದರೆ ತುಂಬಿದ ಕೊಡ ಎಂದರ್ಥ. ಇದನ್ನು ಪೂರ್ಣ ಘಟ, ಮಂಗಲಘಟ, ಘಟಪಲ್ಲವ ಇಲ್ಲವೆ ಅಮೃತ ಕಲಶ ಎಂದೂ ಕರೆಯುತ್ತಾರೆ. ಋಗ್ವೇದದಲ್ಲಿ ಪೂರ್ಣಕಲಶದ ಪ್ರಸ್ತಾಪವಿದೆ. ಅದು ಅಮೃತತ್ವ ನೀಡುವ ಸೋಮರಸದಿಂದ ತುಂಬಿದ್ದಿತು.[೭]

ಕಾಳಿಕಾ ಪುರಾಣದ ವರ್ಣನೆಯ ಮೇರೆಗೆ ದೇವಲೋಕದ ಶಿಲ್ಪಿಯಾದ ವಿಶ್ವಕರ್ಮನು ಮೊದಲ ಕಲಶವನ್ನು, ಸಮುದ್ರ ಮಂಥನದ ಸಮಯದಲ್ಲಿ ಹೊರ ಹೊಮ್ಮಿದ ಅಮೃತವನ್ನು ಸಂಗ್ರಹಿಸಲೆಂದು ನಿರ್ಮಿಸಿದನು. ಕಲಶವು ಅನೇಕ ದೇವತೆಗಳ ವಾಸಸ್ಥಾನವೆನಿಸಿದೆ. ಕಲಶದ

[೬] Aryan, K. C. op.cit p. 57

[೭] S. K. Ramachandra Rao, Op. cit, P. 260



ಚಿತ್ರ ೧೧೮. ಪೂರ್ಣ ಕುಂಭಗಳು, ಐಹೊಳೆ

ಮುಖವನ್ನು ಬ್ರಹ್ಮನೆಂದು, ಅದರ ಕಂಠವನ್ನು ರುದ್ರನೆಂದು, ತಳವನ್ನು ವಿಷ್ಣುವೆಂದು ಬಣ್ಣಿಸಲಾಗಿದೆ.[೯] ಕಲಶವು ನಕ್ಷತ್ರಗಳು, ಗ್ರಹಗಳು, ಏಳು ಸಮುದ್ರಗಳ ಏಳು ದ್ವೀಪಗಳು, ಗಿರಿ ನದಿಗಳು ಮೊದಲಾದವನ್ನು ಗರ್ಭೀಕರಿಸಿಕೊಂಡಿದೆ. ಕಲಶದ ರೂಪದಲ್ಲಿ ಎಲ್ಲ ದೇವತೆಗಳನ್ನು ಪೂಜಿಸಬೇಕೆಂದು ಕಾಳಿಕಾಪುರಾಣವು ಆದೇಶಿಸಿದೆ.[೧೦] ಪೂರ್ಣಕುಂಭದ ಚಿತ್ರಣ ದಲ್ಲಿ ಕಲಶವಿರುತ್ತದೆ. ಅದರಿಂದ ಹೊರ ಚಾಚಿಕೊಂಡ ಎಲೆ, ಹೂಗಳಿರುತ್ತವೆ. ಪಾತ್ರೆಯೊಳಗಿನ ನೀರು ಅಮೃತ. ಅದರಿಂದ ಚಿಗುರಿದ ಎಲೆಗಳು ಜೀವನದ ಆನಂದ ಗಳು. ಪೂರ್ಣಕುಂಭದ ಪ್ರಾಚೀನ ಶಿಲ್ಪಗಳು ಸಾಂಚಿ, ಭಾರ್ಹುತ, ಅಮರಾವತಿ, ನಾಗಾರ್ಜುನಕೊಂಡ ಮೊದಲಾದವುಗಳಲ್ಲಿವೆ.[೧೧] ಈ ಶಿಲ್ಪ ಪ್ರಕಾರವು ಗುಪ್ತರ ಕಾಲದಲ್ಲಿ ಹೆಚ್ಚು ಜನಪ್ರಿಯವಾಗಿದ್ದಿತು. ಪೂರ್ಣಕುಂಭವು ಜೈನ ಶಿಲ್ಪಕಲೆಯಲ್ಲಿಯೂ ಸ್ವೀಕೃತವಾಗಿದೆ. ಜೈನ ಪರಂಪರೆಯಲ್ಲಿ ಇದು ಅಷ್ಟ ಮಂಗಲಗಳ ಸಾಲನ್ನು ಸೇರಿದೆ.[೧೨]

ಪೂರ್ಣಕುಂಭವು ಮಂಗಲಕರವೂ, ಸಮೃದ್ಧಿದಾಯಕವೂ ಆಗಿರುವುದರಿಂದ ಈ ಶಿಲ್ಪಗಳನ್ನು ದೇವಾಲಯದ ಪ್ರವೇಶದ್ವಾರದಲ್ಲಿ ಇಲ್ಲವೆ ಮುಖಮಂಟಪದ ಮುಂಭಾಗಗಳಲ್ಲಿ ಕೆತ್ತಿರುವರು. ಕೆಲವು ಸಲ ಪೂರ್ಣಕುಂಭಗಳನ್ನು ಸಾಲಾಗಿ ನೆಲಕ್ಕೆ ಸಮಾಂತರವಾಗಿ ಕಂಭಗಳಿಗೆ ನಿರೂಪಿಸುವುದುಂಟು. ಇಂತಹ ಸಾಲನ್ನು ಚಲುಕ್ಯ ರೂವಾರಿಗಳು ಮುಖಮಂಟಪದ ಕಕ್ಷಾಸನದ ಹಿಂಭಾಗದಲ್ಲಿ ಕಡೆದಿರುವರು. ಐಹೊಳೆಯ ಹುಚ್ಚಿಮಲ್ಲಿ ಗುಡಿ, ಲಾಡಖಾನ ಗುಡಿಗಳ ಕಕ್ಷಾಸನಗಳ ಹೀಗೆ ಅಲಂಕೃತವಾಗಿವೆ. ಕಂಭಗಳಿಗೆ ಪೂರ್ಣಕುಂಭಗಳ ಅಲಂಕಾರವಿರುವುದು ಸಾಮಾನ್ಯ. ಗುಪ್ತರ ಕಲಾವಿದರು ಕಂಬಗಳ ಮೇಲ್ಭಾಗದಲ್ಲಿ ಪೂರ್ಣ ಕುಂಭಗಳನ್ನು ಸೃಜಿಸಿ ಕಂಬಗಳ ಅಂದವನ್ನು ಹೆಚ್ಚಿಸಿದರು. ಇದೇಪರಿಪಾಠವನ್ನು ಚಲುಕ್ಯ ಶಿಲ್ಪಗಳು ಅನುಸರಿಸಿದರು. ಆದರೆ ಕಲಶಗಳ ಆಕಾರ, ಗಾತ್ರ ಹಾಗೂ ಅವುಗಳ ನಿರೂಪಣೆಯಲ್ಲಿ ವೈವಿಧ್ಯವನ್ನೂ, ಕೌಶಲ್ಯವನ್ನೂ ತೋರಿಸಿದ್ದಾರೆ. ಕೆಲವು ಪೂರ್ಣ ಕುಂಭಗಳು ಹೆಚ್ಚು ಶೈಲೀಕೃತವಾಗಿವೆ. ಎಲೆ ಹೂಗಳಿಂದ ಶ್ರೀಮಂತವಾಗಿದೆ.

ಐಹೊಳೆಯ ದುರ್ಗಾಗುಡಿ ಮತ್ತು ಚಿಕ್ಕಿ ಗುಡಿಯ ಗರ್ಭಗೃಹ ಬಾಗಿಲ ಬಳಿಯ ಅರೆಗಂಬಗಳು ಮೇಲ್ಭಾಗದಲ್ಲಿ ಮತ್ತು ತಳದಲ್ಲಿ ಪೂರ್ಣಕುಂಭಗಳ ಕೆತ್ತನೆಯಿಂದ ಕೂಡಿವೆ. ಚಿಕ್ಕಿ ಗುಡಿಯ ಮಂಟಪದ ಅರೆಗಂಬಗಳೂ ಕೂಡ ಕಲಾ ಶ್ರೀಮಂತಿಕೆಯನ್ನು ಪ್ರದರ್ಶಿಸುವ ಪೂರ್ಣಕುಂಭಗಳಿಂದ ಕೂಡಿವೆ. ಕೊಂತ ಗುಡಿ ೨ ರಲ್ಲಿ ಗರ್ಭಗೃಹದ ದ್ವಾರಬಂಧದ ಕೆಳಭಾಗದಲ್ಲಿ ಹೂಗಳಿಂದ ತುಂಬಿ ತುಳುಕುವ ಪೂರ್ಣ ಘಟಗಳಿವೆ. ಪಟ್ಟದಕಲ್ಲಿನ ಮಲ್ಲಿಕಾರ್ಜುನ ಗುಡಿ ಮಂಟಪದ ಕಂಬ ವೊಂದರಲ್ಲಿ ಅತ್ಯಂತ ಸುಂದರವಾದ ಪೂರ್ಣಕುಂಭದ ಕೆತ್ತನೆಯಿದೆ. ಹೀಗೆ ಚಲುಕ್ಯರ ದೇವಾಲಯಗಳಲ್ಲಿ ಹಲವಾರು ಪೂರ್ಣಕುಂಭಗಳು ಕೆತ್ತನೆಗೊಂಡಿವೆ. **(ಚಿತ್ರ ೧೧೮)** ಆಲಂಪುರದಲ್ಲಿ ಪೂರ್ಣ ಕುಂಭಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುವುದು ಒಂದು ವಿಶೇಷ ಸಂಗತಿ.

[೯] Ibid.

[೧೦] Ibid.

[೧೧] Aryan, K. C. op.cit p. 63

[೧೨] Satetore, op. cit P. 174.

ಪ್ರಾಚೀನ ಕಾಲದಿಂದಲೂ ಸಾಂಕೇತಿಕತೆ ಭಾರತೀಯ ಕಲೆಯ ತಿರುಳಾಗಿದೆ. ಸಂಕೇತಗಳು ಅಲಂಕಾರ ಶಿಲ್ಪಗಳ ಅಂಗವಾಗಿವೆ. ಅವು ಶಿಲ್ಪಕ್ಕೆ ಸೌಂದರ್ಯವನ್ನೂ, ವಿಶೇಷ ಅರ್ಥವನ್ನೂ ಒದಗಿಸುತ್ತವೆ. ಅನೇಕ ಸಲ ನೋಡುಗರು ಅದರ ಸೌಂದರ್ಯವನ್ನು ಮಾತ್ರ ಸವಿಯುತ್ತಾರೆ. ಆದರೆ ಸಂಕೇತದ ಅರ್ಥ ವಿಶೇಷವನ್ನು ಗ್ರಹಿಸುವಲ್ಲಿ ವಿಫಲರಾಗುತ್ತಾರೆ.

ಭಾರತೀಯ ಕಲೆಯಲ್ಲಿ ಸಾಂಕೇತಿಕತೆಯು ಬೆಸೆದುಕೊಂಡದ್ದು ವೇದ ಹಾಗೂ ಆಗಮಗಳ ಕಾಲದಿಂದಲೇ[೧]. ಅವುಗಳಲ್ಲಿ ಧಾರ್ಮಿಕ ವಿಚಾರಗಳು ಆಕಾರವೊಂದರಲ್ಲಿ ಅಡಕಗೊಂಡವು. ಪುರಾಣಗಳ ಕಾಲದಲ್ಲಿ ಸೃಷ್ಟಿಸಲಾದ ಕಾಲ್ಪನಿಕ ಕತೆಗಳು ಅನೇಕ ಚಿತ್ರ ರಚನೆಗೆ ದಾರಿಮಾಡಿಕೊಟ್ಟವು. ಇದರಿಂದಾಗಿ ಆಲಂಕಾರಿಕ ಚಿತ್ರ ಇಲ್ಲವೆ ಶಿಲ್ಪಗಳು ರಚನೆಗೊಂಡವು.

ಜ್ಯಾಮಿತೀಯ ಆಕೃತಿಯ ಚಿಹ್ನೆಗಳು ಮಾಂತ್ರಿಕ ಚಟುವಟಿಕೆಗಳಿಗೆ ಸಂಬಂಧಿಸಿದ್ದು ದುಷ್ಟಶಕ್ತಿಯ ನಿವಾರಣೆಗೆ ಸಂಬಂಧಪಟ್ಟ ಚಿಹ್ನೆಗಳೆಂದು ಭಾವಿಸಲಾಗಿದೆ. ಸಿಂಧೂ ನಾಗರಿಕತೆಯಲ್ಲಿ ತ್ರಿಕೋನ, ಚತುರಸ್ರಾಕಾರ, ಸ್ವಸ್ತಿಕ ಮೊದಲಾದ ಆಕೃತಿಗಳು ಕಂಡು ಬಂದಿವೆ. ಯಜ್ಞವೇದಿಕೆಗಳನ್ನು ಇಂಥ ನಕ್ಷೆಗಳಿಂದ ಅಲಂಕರಿಸಲಾಗುತ್ತಿತ್ತು.[೨]

ಸಿಂಧೂ ಕೊಳ್ಳದ ನಾಗರಿಕತೆಯ ಅವಶೇಷಗಳು ಆಲಂಕಾರಿಕ ನಕ್ಷೆಗಳಿಂದ ಕೂಡಿವೆ. ಚೌಕಾಕಾರದ ಮುದ್ರಿಕೆಗಳನ್ನು ಇಲ್ಲಿ ಸ್ಮರಿಸಬಹುದು. ಆ ಕಾಲದಲ್ಲಿ ನಿರ್ಮಾಣಗೊಂಡ ನಗರಗಳ ತಲವಿನ್ಯಾಸಗಳು ಹಿಂದೂ ವಾಸ್ತು ವಿಧಾನವನ್ನು ಅವಲಂಬಿಸಿವೆ.[೩] ಈ ವಿನ್ಯಾಸಗಳು ಈಗಲೂ ವಾಡಿಕೆಯಲ್ಲಿವೆ.

ಆಲಂಕಾರಿಕ ಕಲೆಯ ಪಾರಂಪರಿಕ ನಕ್ಷೆಗಳು, ಚಿಹ್ನೆಗಳು ಹಿಂದೂ ಧರ್ಮ ಸಿದ್ಧಾಂತಗಳಿಂದ ಒಡಮೂಡಿವೆ. ಈ ಸಂಕೇತಗಳ ಗೂಢಾರ್ಥಗಳನ್ನು ಅರಿಯಲು ಪ್ರಾಚೀನ ಋಷಿ, ದೃಷ್ಟಾರರ ದರ್ಶನಗಳನ್ನು ತಿಳಿಯಬೇಕಾಗುತ್ತದೆ. ನಂತರ ಕಾಣಿಸಿಕೊಂಡ ಬೌದ್ಧ ಧರ್ಮವು ಹಿಂದೂ ಧರ್ಮದ ಹೊಸ ಟಿಸಿಲು ಮಾತ್ರ. ವೇದಕಾಲದ ಸಂಕೇತಗಳು ಬೌದ್ಧಕಲೆಯಲ್ಲೂ ಉಳಿದುಕೊಂಡಿವೆ.[೪] ತ್ರಿಶೂಲ, ಗಿಡ, ಕಮಲ ಮೊದಲಾದ ಚಿಹ್ನೆಗಳು ವೇದಕಾಲದಲ್ಲಿದ್ದವು. ಈ ಕಲಾ ಗುಣ ವಿಶೇಷಗಳು ಬೌದ್ಧ ಕಲೆಯಲ್ಲಿಯೂ ನೆಲೆಗೊಂಡಿವೆ.

ಸಾಂಚಿ, ಭಾರ್ಹುತ್, ಸ್ತೂಪಗಳಲ್ಲಿ ತ್ರಿಶೂಲಗಳನ್ನು ಕಾಣಬಹುದು. ಎಂಟನೆಯ ಶತಮಾನದಲ್ಲಿ ಉತ್ತರದ ಮೃಗಥಣಿಕಾಹಾರದಿಂದ ಪಟ್ಟದಕಲ್ಲಿಗೆ ಬಂದಿದ್ದ ಜ್ಞಾನ ಶಿವಾಚಾರ್ಯನು ತ್ರಿಶೂಲ ಸ್ತಂಭವನ್ನು ನಿಲ್ಲಿಸಿರುವ ಸಂಗತಿ ಇಲ್ಲಿ ಮುಖ್ಯವೆನಿಸುತ್ತದೆ. ಕಾಲದುದ್ದಕ್ಕೂ ತ್ರಿಶೂಲವು ಸಂಕೇತವಾಗಿ ಉಳಿದುಕೊಂಡು ಬಂದಿರುವುದನ್ನು ಇದು ಸ್ಪಷ್ಟ ಪಡಿಸುತ್ತದೆ.

೧ Aryan, K. C. op.cit p. 20

೨ ಕನ್ನಡ ವಿಶ್ವಕೋಶ, ಸಂಪುಟ ೧೩, ಪು. ೭೧೧

೩ Aryan, K. C. op.cit p. 11

೪ Ibid. p. 24

ಪ್ರಾಚೀನ ಋಷಿಗಳು ಪಂಚಮಹಾಭೂತಗಳನ್ನು ಆಕಾರಗಳ ರೂಪದಲ್ಲಿ ಸಂಕೇತಿಸಿದರು. ಪೃಥ್ವಿಯನ್ನು ಚಚ್ಚೌಕಾಕಾರದಲ್ಲಿ, ನೀರನ್ನು ವೃತ್ತಾಕಾರದಲ್ಲಿ, ಅಗ್ನಿಯನ್ನು ತ್ರಿಕೋನಾಕಾರದಲ್ಲಿ, ವಾಯುವನ್ನು ಅರ್ಧಚಂದ್ರನಾಕಾರದಲ್ಲಿ ಮತ್ತು ಬಿಂದುವಿನ ರೂಪದಲ್ಲಿ ಆಕಾಶವನ್ನು ಸಂಕೇತಿಸಿದ್ದಾರೆ.[೫] ಇವುಗಳಲ್ಲಿ ಚಚ್ಚೌಕ ಮತ್ತು ವೃತ್ತಗಳು ವಿಪುಲವಾಗಿ ಆಲಂಕಾರಿಕ ವಿನ್ಯಾಸಗಳಲ್ಲಿ ಕಾಣಿಸಿಕೊಂಡಿವೆ. ಚಲುಕ್ಯರ ಅಲಂಕಾರ ಶಿಲ್ಪಗಳೂ ಇದಕ್ಕೆ ಹೊರತಾಗಿಲ್ಲ.

**ಚತುರಸ್ರಾಕೃತಿ :**

ಹಿಂದೂ ಶಾಸ್ತ್ರಗಳ ಮೇರೆಗೆ ಚತುರಸ್ರಾಕೃತಿಯು ಎಲ್ಲ ಜ್ಯಾಮಿತೀಯ ಆಕೃತಿಗಳ ತಾಯಿ ಎನಿಸಿದೆ.[೬] ಇದು ಮೂಲ ಭೂತ ಆಕೃತಿಯಾಗಿದೆ. ಪಂಚ ತತ್ವಗಳಲ್ಲಿ ಒಂದಾದ ಪೃಥ್ವಿಯನ್ನು ಚತುರಸ್ರಾಕೃತಿಯಿಂದ ಸಂಕೇತಿಸಲಾಗುತ್ತದೆ. ವೇದಗಳ ಕಾಲದಲ್ಲಿ ದೇವಾಲಯಗಳಾಗಲೀ ಪೂಜಾ ಮೂರ್ತಿಗಳಾಗಲಿ ಇರಲಿಲ್ಲ. ಆದರೆ ಯಜ್ಞಕುಂಡಗಳಿದ್ದವು. ಅವು ಚೌಕಾಕಾರವಾಗಿದ್ದವು. ಹಿಂದೂಗಳಿಗೆ ಚತುರಸ್ರಾಕೃತಿಯು ಪವಿತ್ರವಾದುದಾಗಿದೆ. ವಾಸ್ತು ಪುರುಷ ಮಂಡಲವು ಚಚ್ಚೌಕವಾಗಿದ್ದು ಅದು ೬೪ ಇಲ್ಲವೆ ೮೧ ಚಿಕ್ಕ ಚೌಕುಗಳನ್ನು ಒಳಗೊಂಡಿರುತ್ತದೆ. ದೇವಾಲಯದ ಗರ್ಭಗೃಹವು ಚತುರಸ್ರಾಕೃತಿಯದ್ದಾಗಿರುತ್ತದೆ. ಚಲುಕ್ಯರ ದೇವಾಲಯಗಳಲ್ಲಿ ಸಾಮಾನ್ಯವಾಗಿ ಗರ್ಭಗೃಹಗಳು ಚೌಕಾಕಾರವಾಗಿವೆ. ವಿತಾನದ ಅಲಂಕರಣೆಯಲ್ಲಿ ಒಂದರ ಮೇಲೆ ಇನ್ನೊಂದು ಚೌಕು ಇರುವಂತೆ ವಿನ್ಯಾಸಗೊಳಿಸಲಾಗಿದೆ. ಇಲ್ಲವೆ ಒಂದರೊಳಗೆ ಒಂಬತ್ತು ಚಿಕ್ಕ ಚೌಕುಗಳನ್ನು ಕೊರೆದು ಸುತ್ತಲಿನ ಎಂಟು ಚೌಕುಗಳಲ್ಲಿ ಅಷ್ಟದಿಕ್ಪಾಲರನ್ನು ಕಂಡರಿಸಿರುವುದನ್ನು ಹಿಂದಿನ ಅಧ್ಯಾಯದಲ್ಲಿ ಗಮನಿಸಿದ್ದೇವೆ. ರಾವಲಫಡಿಯ ಮಂಟಪದ ಚತ್ತು ಚಚ್ಚೌಕುಗಳಿಂದ ಅಲಂಕೃತವಾಗಿದೆ. ಮೀನಬಸದಿಯ ಮಂಟಪದ ವಿತಾನದಲ್ಲಿಯ ದೊಡ್ಡ ಕಮಲ ಪುಷ್ಪವನ್ನು ಚತುರಸ್ರಾಕೃತಿಯಲ್ಲಿ ಸಂಯೋಜಿಸಲಾಗಿದೆ. ವಿರೂಪಾಕ್ಷ ದೇವಾಲಯದ ಪೂರ್ವದ ಅರ್ಧಮಂಟಪದ ಮೇಲ್ಗಂಡಿನಲ್ಲಿ ಸೂರ್ಯನನ್ನು ಚೌಕದಲ್ಲಿ ಕೆತ್ತಿರುವರು. ಜಂಬುಲಿಂಗ ಗುಡಿಯ ಮಂಟಪದ ವಿತಾನದಲ್ಲಿಯ ಮತ್ಸ್ಯಚಕ್ರವು ಚತುರಸ್ರಾಕೃತಿಯ ಚೌಕಟ್ಟಿನಿಂದ ಅಂದಗೊಂಡಿದೆ. ಈ ಜ್ಯಾಮಿತೀಯ ಆಕೃತಿಯು ಹೇರಳವಾಗಿ ಬಳಕೆಯಾಗಿರುವುದನ್ನು ಚಲುಕ್ಯರ ದೇವಾಲಯಗಳಲ್ಲಿ ಕಾಣಬಹುದು.

**ಸ್ವಸ್ತಿಕ :**

ಸ್ವಸ್ತಿಕ ಆಕೃತಿಯು ಕಲ್ಯಾಣಕರ ಸಂಕೇತವಾಗಿದೆ. ಸರ್ವರಿಗೂ ಶುಭವಾಗಲಿ ಎಂಬ ಸಂದೇಶ ಈ ಚಿಹ್ನೆಯದು. ಮಾನವನು ತನ್ನ ವಿಚಾರ ಮತ್ತು ಭಾವನೆಗಳನ್ನು ಅಭಿವ್ಯಕ್ತಗೊಳಿಸಲು ಕುರುಹುಗಳನ್ನು ರೂಪಿಸಿದ್ದಾನೆ. ಅಂಥವುಗಳಲ್ಲಿ ಸ್ವಸ್ತಿಕವೂ ಒಂದು. ಅತ್ಯಂತ ಪ್ರಾಚೀನ ಸಂಕೇತವಾದ ಸ್ವಸ್ತಿಕವು ಇಂದಿಗೂ ಭಾರತೀಯ ಕಲೆಯಲ್ಲಿ ರೂಢಿಯಲ್ಲಿದೆ. ಸಿಂಧೂ ಸಂಸ್ಕೃತಿಯ ನೆಲೆಗಳಲ್ಲಿ ಸ್ವಸ್ತಿಕ ಚಿಹ್ನೆಯಿರುವ ಮುದ್ರಿಕೆಗಳು ದೊರೆತಿವೆ.[೭] ಸ್ವಸ್ತಿಕ ಸೂರ್ಯನ ಚಲನೆಯ ಸಂಕೇತವಾಗಿದೆ[೮] ನಾಲ್ಕು ದಿಕ್ಕುಗಳ ಸೂಚಕವಾಗಿದೆ. ಇದು ಧರ್ಮಾರ್ಥ ಕಾಮ ಮೋಕ್ಷ ಮಾರ್ಗವನ್ನು ಪ್ರತಿನಿಧಿಸುತ್ತದೆ[೯]. ಮತ್ತು ಜೀವಿಯ ಹುಟ್ಟು, ಬಾಲ್ಯ, ಯೌವನ ಹಾಗೂ ಮುಪ್ಪನ್ನು ಅದು ಸಂಕೇತಿಸುತ್ತದೆಂದು ಭಾವಿಸಲಾಗಿದೆ. ಸ್ವಸ್ತಿಕಕ್ಕೆ ಮೂಲವಾದ ಎರಡು ಬಲ ಮುರಿ ಗೆರೆಗಳು ಸ್ತ್ರೀ ಪುರುಷರ ಮಿಲನವನ್ನು ಸೂಚಿಸುತ್ತವೆ.[೧೦]

ಸ್ವಸ್ತಿಕವು ಬೇರೆ ಬೇರೆ ನಾಗರಿಕತೆಗಳಲ್ಲಿ, ಬೇರೆ ಬೇರೆ ದೇಶಗಳಲ್ಲಿ ಮತ್ತು ವಿಭಿನ್ನ ಧರ್ಮಗಳಲ್ಲಿ ಕಾಣಿಸಿಕೊಂಡು ಹಲವಾರು ಅರ್ಥಗಳನ್ನು ಹೊತ್ತುಕೊಂಡಿದೆ. ಆಧುನಿಕ ಕಾಲದಲ್ಲಿ ಅಡಾಲ್ಫ ಹಿಟ್ಲರ್ ತನ್ನ ನಾಝಿ ಪಕ್ಷದ ಲಾಂಛನವಾಗಿ ಬಳಸಿದುದೂ ಉಂಟು.

[೫] Ibid. p. 35

[೬] Ibid. p. 36

[೭] Preety A. Trivedi, 'Svastika : The Gandharan Enigma' Buddihism and Gandhara Art, P. 143.

[೮] M. Adinarayan, Op. cit, P. 105.

[೯] ಕನ್ನಡ ವಿಶ್ವಕೋಶ, ಸಂಪುಟ ೧೩, ಪು. ೭೧೩

[೧೦] ಅದೇ

ಭಾರತದಲ್ಲಿ ಕ್ರಿ. ಪೂ. ೬೦೦ರ ವೇಳೆಗೆ ಸಂಬಂಧಿಸಿದ ಉಜ್ಜೈನ, ಹಿಮಾಚಲ ಪ್ರದೇಶಗಳಲ್ಲಿ ದೊರೆತ ನಾಣ್ಯಗಳ ಮೇಲೆ ಸ್ವಸ್ತಿಕ ಚಿಹ್ನೆ ಇದ್ದುದು ಕಂಡು ಬಂದಿದೆ.[೧೧] ಗುಪ್ತರ ಕಾಲದ ಧಾರ್ಮಿಕ ಸ್ತೂಪದಲ್ಲಿ ಸ್ವಸ್ತಿಕ ಆಕೃತಿ ಕಾಣಿಸಿಕೊಂಡಿದೆ. ಆನಂತರದ ಕಾಲದಲ್ಲಿ ಈ ಆಕೃತಿಯು ಹೆಚ್ಚು ಜನ ಪ್ರಿಯವಾಯಿತು.



ಚಿತ್ರ ೧೯೯ ಅ. ಸ್ವಸ್ತಿಕ (ಬದಿಗಳಲ್ಲಿ)



ಚಿತ್ರ ೧೯೯ ಆ. ಸ್ವಸ್ತಿಕ (ಮೂಲೆಗಳಲ್ಲಿ)

ಚಲುಕ್ಯರ ಶಿಲ್ಪಕಲೆಯಲ್ಲಿ ಸ್ವಸ್ತಿಕ ಅಲಂಕಾರ ಶಿಲ್ಪವಾಗಿ ಶಿಲ್ಪಿತವಾಗಿದೆ. ಐಹೊಳೆಯ ಮೀನ ಬಸದಿಯ ಮಂಟಪದ ಮೇಲ್ಗಂಡು ಸ್ವಸ್ತಿಕ ಆಕೃತಿಗಳಿಂದ ಶೋಭಿತವಾಗಿದೆ. ಬಾದಾಮಿಯ ಎರಡನೆಯ ಗುಹಾಲಯದ ಮೊಗಸಾಲೆಯ ವಿತಾನದಲ್ಲಿ ಎರಡು ಅಂಕಣಗಳು ತಲಾ ನಾಲ್ಕು ಸ್ವಸ್ತಿಕಗಳ ಜಾಲದಿಂದ ಕಲಾಪೂರ್ಣವಾಗಿವೆ. ಒಂದು ಅಂಕಣದಲ್ಲಿ ಸ್ವಸ್ತಿಕಗಳು ಬದಿಗಳಲ್ಲಿದ್ದರೆ ಇನ್ನೊಂದರಲ್ಲಿ ಅವು ಅಂಕಣದ ಮೂಲೆಗಳನ್ನು ತುಂಬಿಕೊಂಡಿವೆ. **(ಚಿತ್ರ ೧೯೯. ಅ, ಆ.)** ಜಂಬುಲಿಂಗ ದೇವಾಲಯದ ಮಂಟಪದ ಚತ್ತಿನಲ್ಲಿ ಬ್ರಹ್ಮನ ಗರ್ಭಗೃಹಕ್ಕೆ ಅಂಟಿಕೊಂಡ ಅಂಕಣದಲ್ಲಿ ಐದು ಸ್ವಸ್ತಿಕಗಳನ್ನು ಕಂಡರಿಸಿದ್ದಾರೆ. ಇದೊಂದು ಅಪರೂಪದ ಅಲಂಕರಣವಾಗಿದೆ. ಜಾಲಂಧ್ರಗಳಲ್ಲೂ ಸ್ವಸ್ತಿಕಗಳನ್ನು ಬಿಡಿಸಿ ರೂವಾರಿಗಳು ಕೈಚಳಕ ತೋರಿಸಿದ್ದಾರೆ. ನಾಗನಾಥ ಗುಡಿ, ಮಹಾಕೂಟೇಶ್ವರ ಗುಡಿ ಮತ್ತು ದುರ್ಗಾ ಗುಡಿಗಳಲ್ಲಿ ಈ ಬಗೆಯ ವಾತಾಯನಗಳನ್ನು ಕಾಣುತ್ತೇವೆ.

**ವರ್ತುಲಾಕೃತಿ :**

ಪಂಚಮಹಾಭೂತಗಳ ಸಾಲಿನಲ್ಲಿ ಎರಡನೆಯದು ನೀರು. ವೃತ್ತವು ನೀರ ಹನಿಯ ಜ್ಯಾಮಿತಿ ಆಕಾರ. ವೃತ್ತವು ಕಾಲದ ಪ್ರತೀಕವೆನಿಸಿದೆ. ಭಾರತೀಯ ಚಿತ್ರ, ಶಿಲ್ಪಗಳಲ್ಲಿ ಅಲಂಕಾರಕ್ಕೆಂದು ವರ್ತುಲಾಕೃತಿಗಳನ್ನು ವಿಪುಲವಾಗಿ ಬಳಸಿರುವರು. ವರ್ತುಲಗಳ ಮೂಲಕ ಕಾಲಚಕ್ರ ಮತ್ತು ಧರ್ಮಚಕ್ರಗಳನ್ನು ವಿವರಿಸಲಾಗಿದೆ. ಕಾಲಚಕ್ರವು ಸೂರ್ಯನನ್ನು ಪ್ರತಿನಿಧಿಸುತ್ತದೆ. ಸೂರ್ಯವು ಎಲ್ಲ ಜೀವರಾಶಿಗಳಿಗೆ ಮೂಲಶಕ್ತಿಯಾಗಿದ್ದಾನೆ. ಆತನು ಅನಂತತೆಯ ಕುರುಹು. ಆತನಿಗೆ ಆದಿ, ಅಂತ್ಯ ಇಲ್ಲ . ವರ್ತುಲಕ್ಕೂ ಆದಿ ಅಂತ್ಯ ಎಂಬುದಿಲ್ಲ. ಸೂರ್ಯನ ಪೂಜೆಗಾಗಿ ನೆಲದ ಮೇಲೆ ವೃತ್ತಗಳನ್ನು ರಚಿಸಬೇಕೆಂದು ಪುರಾಣಗಳು ಆದೇಶಿಸಿವೆ. ಕಲೆಯಲ್ಲಿ ವೃತ್ತಾಕಾರಕ್ಕೆ ಹೆಚ್ಚಿನ ಮಾನ್ಯತೆಯಿದೆ. ಸಾಂಚೀ ಸ್ತೂಪದ ತಲವಿನ್ಯಾಸವು ವರ್ತುಲಾ ಕೃತಿಯಲ್ಲಿದೆ. ಅಜಂತೆಯ ಗುಹೆಗಳಲ್ಲಿ ಕಮಲಪುಷ್ಪದ ವರ್ಣಚಿತ್ರಗಳು ವರ್ತುಲಗಳಲ್ಲಿ ಮೂಡಿಬಂದಿವೆ.

ಸಾಮಾನ್ಯವಾಗಿ ಅರಸರು ಸೂರ್ಯಾರಾಧಕರಾಗಿರುತ್ತಿದ್ದರು. ತಾವು ಸೂರ್ಯವಂಶಜರೆಂದು ಹೇಳಿಕೊಳ್ಳಲು ಅವರಿಗೆ ಅಭಿಮಾನ. ಅವರ ರಾಜ ಲಾಂಛನದಲ್ಲಿ ಸೂರ್ಯನ ಚಿತ್ರವಿರುತ್ತಿತ್ತು. ಸೂರ್ಯನ ಪ್ರತೀಕವಾಗಿ ಕಮಲ ಪುಷ್ಪವನ್ನು ಚಿತ್ರ ಮತ್ತು ಶಿಲ್ಪಗಳಲ್ಲಿ ಬಳಸಿದ್ದಾರೆ. ಮತ್ತು ಈ ಪದ್ಮ ಕುಸುಮವನ್ನು ವರ್ತುಲಾಕೃತಿಯಲ್ಲಿ ಸಂಯೋಜಿಸಿರುತ್ತಾರೆ. ಚಲುಕ್ಯರ ಶಿಲ್ಪಕಲೆಯಲ್ಲಿ

[೧೧] Preety. A. Trivedi, op. cit. P. 145.



ಚಿತ್ರ ೧೨೦. ಮತ್ಸ್ಯ ಚಕ್ರ, ವಿತಾನ, ಗುಹೆ ೨, ಬಾದಾಮಿ

ಕಮಲಗಳನ್ನು ವಿತಾನ, ಕಂಬ ಮೊದಲಾದವುಗಳನ್ನು ಅಲಂಕರಿಸಲು ಕಂಡರಿಸಿದ್ದಾರೆ. ಐಹೊಳೆಯ ರಾವಲಫಡಿ, ಮೇಣಬಸದಿ ಮತ್ತು ಬಾದಾಮಿಯ ಮೂರನೆಯ ಗುಹಾಲಯ ಇವುಗಳ ಚತ್ತುಗಳಲ್ಲಿ ವೃತ್ತಗಳು ವಿಧ ವಿಧವಾಗಿ ಮೂಡಿಬಂದಿವೆ. ಗುಹಾಲಯ ಮತ್ತು ರಾಚನಿಕ ದೇವಾಲಯಗಳ ಕಂಬಗಳು ವೃತ್ತಾಕಾರದ ಫಲಕಗಳಿಂದ ಶೃಂಗಾರ ಗೊಂಡಿರುವುದನ್ನು ಬಾದಾಮಿ ಗುಹಾಲಯಗಳಲ್ಲಿ , ದುರ್ಗಾಗುಡಿ ಮತ್ತು ಪಟ್ಟದಕಲ್ಲಿನ ಪ್ರಧಾನ ರಾಚನಿಕ ದೇವಾಲಯಗಳಲ್ಲಿ ಕಾಣುತ್ತೇವೆ. ವರ್ತುಲಾಕಾರದಲ್ಲಿರುವ ಅತ್ಯಂತ ಪ್ರಸಿದ್ಧ ಶಿಲ್ಪವೆಂದರೆ ಮತ್ಸ್ಯಚಕ್ರ. **(ಚಿತ್ರ ೧೨೦)** ಬಾದಾಮಿಯ ಎರಡನೆಯ ಗುಹಾಲಯದ ಚತ್ತಿನಲ್ಲಿ ಕಾಣಿಸಿಕೊಂಡಂತೆ ಅಲ್ಲಿಯ ಜಂಬುಲಿಂಗ ದೇವಾಲಯ, ಐಹೊಳೆಯ ದುರ್ಗಾಗುಡಿಯ ಮೇಲ್ಗಂಡಿನಲ್ಲೂ ಇದು ಶಿಲ್ಪಿತವಾಗಿದೆ. ಜಾಲಂಧ್ರಗಳೂ ವೃತ್ತಾಕಾರದಲ್ಲಿ ರೂಪುಗೊಂಡಿರುವುದುಂಟು. ಮೇಲಿನ ಶಿವಾಲಯದ ಪ್ರದಕ್ಷಿಣಾ ಪಥದಲ್ಲಿ ಇಂತಹ ಜಾಲಂಧ್ರವಿದೆ. ದುರ್ಗಾಗುಡಿಯಲ್ಲಿ ಜೋಡಿ ವೃತ್ತಗಳಿವೆ. **(ಚಿತ್ರ ೧೨೧)** ಮಾಲಗಿತ್ತಿ ಶಿವಾಲಯ ಮೊದಲಾದ ರಾಚನಿಕ ದೇವಾಲಯಗಳ ಅಧಿಷ್ಠಾನದ ಕಪೋತವು ಅರ್ಧ ವೃತ್ತಾಕಾರದ ಚೈತ್ಯಕೂಡುಗಳಿಂದ ಅಂದಗೊಂಡಿವೆ. ಒಟ್ಟಿನಲ್ಲಿ ಚಲುಕ್ಯ ದೇವಾಲಯಗಳಲ್ಲಿ ವರ್ತುಲಗಳು, ಅಂತರ್ಗತ ವರ್ತುಲಗಳು, ವರ್ತುಲದ ಒಳಗೆ ತುಂಬಿಕೊಂಡ ವರ್ತುಲ ಜಾಲಗಳು ಒಂದನ್ನೊಂದು ಛೇದಿಸುವ ವರ್ತುಲಗಳು, ಅರ್ಧ ವರ್ತುಲಗಳು, ಮುಕ್ಕಾಲು ಇಲ್ಲವೆ ಕಾಲು ಭಾಗದ ವರ್ತುಲಗಳು ಹೀಗೆ ವರ್ತುಲ ನಕ್ಷೆಗಳ ಭಂಡಾರವನ್ನು ಕಾಣಬಹುದು.



ಚಿತ್ರ ೧೨೧. ಜಾಲಂಧ್ರ ಜೋಡಿ, ಲಾಡಖಾನ ಗುಡಿ



**ಚಿತ್ರ ೧೨೨. ವೃತ್ತಾಕಾರದ ಸುರುಳಿ (ನಾಗರಾಜ)**

ಶಿಲ್ಪಗಳಲ್ಲಿ ವೃತ್ತಾಕಾರದ ಸುರುಳಿ ಹೆಚ್ಚು ಪ್ರಚಲಿತವಾಗಿದೆ. ಇದು ವೃತ್ತದ ಇನ್ನೊಂದು ರೂಪವೆನ್ನಬಹುದು. ಈ ಬಗೆಯ ಸುರುಳಿಯು ಫಲವತ್ತತೆ ಮತ್ತು ಸಮೃದ್ಧಿಯ ಸಂಕೇತವೆಂದು ಭಾವಿಸಲಾಗಿದೆ. ಹಾಗಾಗಿ ಇಂದಿಗೂ ಭಾರತೀಯ ಮಹಿಳೆ ರಂಗೋಲಿಯನ್ನು ಹೊಸ್ತಿಲ ಮುಂದೆ ಹಾಕುವಾಗ ಸುರುಳಿ ಚಿತ್ರ ಎಳೆಯುತ್ತಾಳೆ. ಬಾದಾಮಿಯ ಒಂದನೆಯ ಗುಹೆ, ಜಂಬುಲಿಂಗ ಗುಡಿ, ನಾಗರಾಳದ ನಾಗನಾಥ ಗುಡಿ **(ಚಿತ್ರ ೧೨೨)** ಪಟ್ಟದಕಲ್ಲಿನ ಪಾಪನಾಥ, ಐಹೊಳೆಯ ದುರ್ಗಾಗುಡಿಗಳಲ್ಲಿ ವೃತ್ತಾಕಾರದ ಸುರುಳಿಯ ರೂಪದಲ್ಲಿ ಆದಿಶೇಷನನ್ನು ಬಿಡಿಸಿರುವರು. ಈ ರೀತಿಯ ಆದಿಶೇಷನು ಅನಂತತೆಯ ಸಂಕೇತವಾಗಿದ್ದಾನೆ. ಈತನು ಚಲನೆಯನ್ನು ಸೂಚಿಸುತ್ತ ಪ್ರಗತಿಯ ಪ್ರತೀಕವಾಗಿದ್ದಾನೆ. ಬೆಳೆಯುತ್ತಿರುವ ಬಳ್ಳಿಗಳ ಕುಡಿಗಳು ಸುರುಳಿಯಾಕಾರದಲ್ಲಿ ಕಾಣಿಸಿಕೊಂಡಿವೆ. ಸ್ಥಳಾವಕಾಶವನ್ನು ತುಂಬಿಕೊಳ್ಳಲು ಶಿಲ್ಪಿಗಳು ಇಂತಹ ವಿನ್ಯಾಸಗಳನ್ನು ಬಳಸಿರುವರು.

## ತ್ರಿಕೋನ

ಪ್ರಾಚೀನ ಭಾರತೀಯರಿಗೆ ತ್ರಿಕೋನವು ಅಗ್ನಿಯ ಸಂಕೇತವೆನಿಸಿದೆ. ತ್ರಿಕೋನದ ಮೂರು ಬಿಂದುಗಳಲ್ಲಿ ಮೇಲಿನ ಬಿಂದು ಶಕ್ತಿದೇವತೆಯ ಪ್ರತೀಕವಾಗಿದೆ. ಕೆಳಗಿನ ಬಿಂದುಗಳಲ್ಲಿ ಎಡ ಬಿಂದು ಹರಿಯನ್ನು, ಬಲಬದಿಯ ಬಿಂದು ಹರನನ್ನು ಪ್ರತಿನಿಧಿಸುತ್ತವೆ. ಇನ್ನೊಂದು ವಿವರಣೆಯ ಮೇರೆಗೆ ಮೂರು ಬಿಂದುಗಳು ಬ್ರಹ್ಮ, ವಿಷ್ಣು ಮತ್ತು ಈಶ್ವರನ ಕುರುಹುಗಳು. ಈ ಮೂರು ಬಿಂದುಗಳನ್ನು ಪರಸ್ಪರ ಕೂಡಿಸುವ ಗೆರೆಗಳು ಇಚ್ಛೆ, ಜ್ಞಾನ ಮತ್ತು ಕ್ರಿಯೆಗಳನ್ನು ಸಂಕೇತಿಸುತ್ತವೆ ಎಂದು ನಂಬಲಾಗಿದೆ. ಇವು ಸತ್ವ, ರಾಜಸ ಮತ್ತು ತಾಮಸ ಎಂಬ ತ್ರಿಗುಣಗಳ ಚಿಹ್ನೆಗಳೆಂದು ಭಾವಿಸಲಾಗಿದೆ. ತಾಂತ್ರಿಕರಿಗೆ, ಭೌತಿಕವಾದಿಗಳಿಗೆ ತ್ರಿಕೋನವು ಸ್ತ್ರೀ ಸಂಕೇತ. ಸಂತಾನಕ್ಕೂ ಭೌತಿಕ ಅಭಿವೃದ್ಧಿಗೂ ಅದು ಕುರುಹು.

ಚಲುಕ್ಯರ ಅಲಂಕಾರ ಶಿಲ್ಪಗಳಲ್ಲಿ ತ್ರಿಕೋನಾಕಾರದ ವಿನ್ಯಾಸಗಳು ಸಾಕಷ್ಟು ಸಂಖ್ಯೆಯಲ್ಲಿ ಪ್ರಕಟಗೊಂಡಿವೆ. ದೇವಾಲಯದ ಹೊರಗೋಡೆಯಲ್ಲಿ ಕುಡ್ಯಸ್ತಂಭಗಳ



ಚಿತ್ರ ೧೨೩. ಕುಡ್ಯಸ್ತಂಭ ಪಂಜರ

ಮೇಲಿರುವ ಪಂಜರಗಳು ತ್ರಿಕೋನಾಕೃತಿಯಲ್ಲಿ ಮೂಡಿ ಬಂದಿವೆ. (**ಚಿತ್ರ ೧೨೩**) ಕಾಶಿವಿಶ್ವನಾಥ ಮತ್ತು ಪಾಪನಾಥ ಗುಡಿಯಲ್ಲಿ ಇಂತಹ ಪಂಜರ ಕೋಷ್ಠಗಳು ತ್ರಿಕೋನಾಕಾರದ ಗವಾಕ್ಷಗಳಿಂದ ಅಂದಗೊಂಡಿವೆ. ಪಟ್ಟದಕಲ್ಲಿನ ಗಳಗನಾಥ ದೇವಾಲಯದ ಮೇಲ್ಕಟಡದಲ್ಲಿ ಲಂಬ ಪಟ್ಟಿಕೆಯಲ್ಲಿ ಗವಾಕ್ಷಗಳು ತ್ರಿಕೋನಾಕೃತಿಯ ಮಾಡಗಳಲ್ಲಿವೆ. (**ಚಿತ್ರ ೧೨೪**) ಐಹೊಳೆಯ ಗೌಡರ ಗುಡಿಯ ಗರ್ಭಗೃಹದ ಉತ್ತರಾಂಗದಲ್ಲಿ ದುರ್ಗಾಭಗವತಿಯ ಶಿಲ್ಪವನ್ನೊಳಗೊಂಡ ಗೂಡು ಸ್ಥೂಲವಾಗಿ ತ್ರಿದಳಾಕಾರದಂತಿದೆ. ದುರ್ಗಾದೇವಾಲಯದ ಪ್ರತೋಳಿಯ ಮೇಲಿರುವ ಸೂರ್ಯಪ್ರತಿಮೆಯು ಕೂಡ ಇದೇ ವಿನ್ಯಾಸದಲ್ಲಿದೆ. ಈ ರೀತಿಯಲ್ಲಿ ತ್ರಿದಳಾಕೃತಿಯ ಅಲಂಕಾರಿಕ ನಿರ್ವಹಣೆಯನ್ನು ಐಹೊಳೆ ಸೂರ್ಯ ದೇವಾಲಯದ ಉತ್ತರಾಂಗದಲ್ಲಿಯೂ ಕಾಣಬಹುದು.

ಸಾಮಾನ್ಯವಾಗಿ ಅಧಿಷ್ಠಾನದ ಕಪೋತವು ನಾಸಿಗಳಿಂದ ಅಂದಗೊಂಡಿರುತ್ತದೆ. ಇವನ್ನು ಕಪೋತನಾಸಿ ಎಂದು ಕರೆಯುತ್ತಾರೆ. ಚಲುಕ್ಯರ ದೇವಾಲಯಗಳ ಕಪೋತನಾಸಿಗಳು ತ್ರಿಕೋನಾಕಾರದ ಚೌಕಟ್ಟಿನಿಂದಲೂ ಅಲಂಕೃತವಾಗಿವೆ.

ಚಲುಕ್ಯರ ಕಂಬಗಳ ಕಾಂಡ ಭಾಗದಲ್ಲಿ ಅಡ್ಡ ಪಟ್ಟಿಕೆಗಳಿದ್ದಂತೆ ರಾಷ್ಟ್ರಕೂಟ ದೇವಾಲಯದ ಕಂಬಗಳಲ್ಲಿ ತ್ರಿಕೋನಾಕಾರದ ಅಲಂಕಾರಗಳಿರುವುದು ವಿಶಿಷ್ಟ ಬದಲಾವಣೆ ಎನಿಸಿದೆ. ಅದು ರಾಷ್ಟ್ರಕೂಟ ವಾಸ್ತುವಿನ ಗುಣಲಕ್ಷಣವಾಗಿದೆ.



ಚಿತ್ರ ೧೨೪. ತ್ರಿಕೋನಾಕಾರದ ಗವಾಕ್ಷಗಳು, ಪಟ್ಟದಕಲ್ಲ



ಚಿತ್ರ ೧೨೫. ವಜ್ರಾಕೃತಿಯ ವಿನ್ಯಾಸ

ಜ್ಯಾಮಿತೀಯ ಆಕಾರಗಳ ರಚನೆಯಲ್ಲಿ ಆವರ್ತನ (repetation) ಸಾಮಾನ್ಯ ಸಂಗತಿ. ಜಾಳಿಗೆಯನ್ನು ಹೆಣೆದಂತೆ ರೇಖೆಗಳನ್ನು ವಿಸ್ತರಿಸಿ ಆಕೃತಿಗಳನ್ನು ರಚಿಸಬಹುದು. ಚೌಕ, ವಜ್ರಾಕೃತಿ, ಸಮಭುಜ ತ್ರಿಕೋನ ಮೊದಲಾದ ಆಕೃತಿಗಳಿಂದ ಸ್ಥಳವನ್ನು ತುಂಬಬಹುದು. ಶಿಲ್ಪಫಲಕದ ಅಂಚುಗಳು ವಿವಿಧ ಜ್ಯಾಮಿತಿ ನಕ್ಷೆಗಳಿಂದ ಕೂಡಿ ಕಲಾತ್ಮಕವಾಗಿವೆ. ವಿಶೇಷವಾಗಿ ವಿತಾನಾಲಂಕರಣ, ಕಂಬಗಳ ಅಲಂಕರಣಗಳಲ್ಲಿ ಈ ತಂತ್ರವನ್ನು ಗುರುತಿಸಬಹುದು. ಗುಹಾಲಯಗಳ ವಿತಾನಗಳಲ್ಲಿ, ಜಂಬುಲಿಂಗ, ಚಿಕ್ಕಿಗುಡಿ, ಹುಚ್ಚಪ್ಪಯ್ಯ ಗುಡಿಗಳ ಮೇಲ್ಗಂಡುಗಳಲ್ಲಿ ಈ ಬಗೆಯ ಚಿತ್ತಾರವನ್ನು ಕಾಣುತ್ತೇವೆ.

**ವಜ್ರಾಕೃತಿಗಳು**

ವಜ್ರಾಕೃತಿಯು ತ್ರಿಕೋನ ಇಲ್ಲವೆ ಚೌಕದ ಮಾರ್ಪಾಡು ಅಷ್ಟೆ. ಎರಡು ತ್ರಿಕೋನಗಳು ಸೇರಿದಾಗ ಇಲ್ಲವೆ ಚೌಕವನ್ನು ಲಂಬಕೋನದಷ್ಟು ಹೊರಳಿಸಿದಾಗ ಉಂಟಾಗುವ ಆಕೃತಿ ಇದು. ಜ್ಯಾಮಿತೀಯ ಅಳತೆಯನ್ನು ಆಧರಿಸಿದ ಇಂತಹ ಆಕೃತಿಗಳನ್ನು ಕೆತ್ತುವುದು ತೌಲನಿಕವಾಗಿ ಸರಳವಾದ ಕೆಲಸ. ಇದರಲ್ಲಿ ಕಲಾವಿದನ ಸೃಜನಶೀಲತೆ ಅಥವಾ ಕರ ಕೌಶಲ್ಯಕ್ಕೆ ಹೆಚ್ಚಿನ ಅವಕಾಶ ಇರುವುದಿಲ್ಲ. ಯಾಂತ್ರಿಕವಾಗಿ ಒಂದೇ ಬಗೆಯ, ಒಂದೇ ಅಳತೆಯ ಆಕೃತಿಗಳನ್ನು ಸಾಲಾಗಿ ಕೆತ್ತನೆ ಮಾಡಿ ವಾಸ್ತು ಅಂಗವೊಂದನ್ನು ಅಂದಗೊಳಿಸಲಾಗುತ್ತದೆ. ಸಾಮಾನ್ಯವಾಗಿ ಕಂಬದ ಬದಿಗಳಲ್ಲಿ ಇಲ್ಲವೆ ವಿತಾನದ ಅಂಚುಗಳಲ್ಲಿನ ಪಟ್ಟಿಗಳಲ್ಲಿ ಈ ರೀತಿಯ ಜ್ಯಾಮಿತೀಯ ನಕ್ಷೆಗಳನ್ನು ಕಾಣುತ್ತೇವೆ. (**ಚಿತ್ರ ೧೨೫**) ದೊಡ್ಡದಾದ ಅಂಕಣದಲ್ಲಿ ಉಳಿದಿರುವ ಖಾಲಿ ಜಾಗೆಯನ್ನು ತುಂಬಿಕೊಳ್ಳಲು ಜ್ಯಾಮಿತೀಯ ಆಕೃತಿಗಳು ನೆರವಾಗುತ್ತವೆ. ಈ ರೀತಿಯ ಕೆತ್ತನೆಗೆ ಹೆಚ್ಚಿನ ಸಮಯ ತಗಲುವುದಿಲ್ಲ. ಇಂತಹ ಕೆಲಸಕ್ಕೆ ಪರಿಣತ ಕಲಾವಿದನೂ ಬೇಕಿಲ್ಲ. ಹಾಗಾಗಿ ಶಿಲ್ಪಕಲಾ ತರಬೇತಿ ಪಡೆಯುವ ತರುಣ ಕಲಾವಿದರನ್ನು ಈ ಆಕೃತಿಗಳ ರಚನೆಯಲ್ಲಿ ತೊಡಗಿಸಬಹುದು. ಕಲಾತ್ಮಕತೆಯ ಸೊಗಸು ಇವುಗಳಲ್ಲಿ ಇಲ್ಲವಾದರೂ ಜ್ಯಾಮಿತಿ ರೇಖೆಗಳಿಂದಾದ ಏಕರೂಪತೆಯ ವಿನ್ಯಾಸಗಳು ಚಿತ್ತಾಕರ್ಷಕವಾಗಬಲ್ಲವು.

ಆದರೆ ಇಡಿ ಕಂಬ ಅಥವಾ ಗೋಡೆ ಹೀಗೆ ಏಕಸಾಮ್ಯತೆಯಿಂದಾದಲ್ಲಿ ಏನು ಚಂದ? ಅದಕ್ಕಾಗಿ ಭಾಗಶ: ವರ್ತುಲಾಕೃತಿ, ಅರ್ಧವರ್ತುಲಾಕೃತಿ ಇಲ್ಲವೆ ಚತುರಸ್ರಾಕೃತಿಗಳನ್ನು ಸಂಯೋಜಿಸಿ ಒಟ್ಟಾರೆ ಲೇಸಾಗುವಂತೆ ಕೆತ್ತನೆ ಮಾಡಿದ ಜಾಣ್ಮೆಯನ್ನು ರೂವಾರಿಗಳು ತೋರಿದ್ದಾರೆ. ಇವುಗಳ ಮಧ್ಯೆ ಸ್ಥಳಾವಕಾಶ ದೊರೆತಲ್ಲಿ ಪುಟ್ಟ ಹಕ್ಕಿ, ಮೀನು ಇಲ್ಲವೆ ಪುಷ್ಪಗಳ ವಿನ್ಯಾಸಗಳನ್ನು ಎರಕಹೊಯ್ದು ಕಲೆಯ ಸೌರಭವನ್ನು ಲೇಪಿಸಿದ್ದಾರೆ. ಜಡವಾದುದರಲ್ಲಿ ಚೈತನ್ಯ ತುಂಬುವ ರೂವಾರಿಯ ಈ ಗುಣವೇ ಕಲೆ !

ಸೃಜನಶೀಲ ಶಿಲ್ಪಕಲಾಕೃತಿಯನ್ನು ನೋಡುವಲ್ಲಿ (ಓದುವಲ್ಲಿ !) ಒಂದು ಸೊಗಸಿದೆ; ಆನಂದವಿದೆ. ನಿರ್ಮಾಣಕಾರನು ತನ್ನ ಕಲಾಕೃತಿಯನ್ನು ಹೆಚ್ಚು ಅರ್ಥಪೂರ್ಣವಾಗಿ, ರಸಮಯವಾಗಿ ಕಾಣುವಂತೆ ಮಾಡಲು ಬಗೆ ಬಗೆಯ ಆಕೃತಿ, ವಿನ್ಯಾಸ, ಸಂಕೇತ ಇಲ್ಲವೆ ಪೂರಕ ಶಿಲ್ಪಗಳಿಂದ ಅಲಂಕರಿಸುತ್ತಾನೆ. ಆ ಮೂಲಕ ಅದಕ್ಕೆ ಆಕರ್ಷಣೆಯ ಬಲವನ್ನು ತಂದು ಕೊಡುತ್ತಾನೆ. ಹೀಗೆ ಶಿಲ್ಪಗಳಿಗೆ ಲಾವಣ್ಯವನ್ನು ಬೆಸೆಯುತ್ತ ಚಲುಕ್ಯ ರೂವಾರಿಗಳು ಗುಹಾಲಯ ಹಾಗೂ ರಾಚನಿಕ ದೇಗುಲಗಳಲ್ಲಿ ಆಲಂಕಾರಿಕ ವಿನ್ಯಾಸಗಳನ್ನು ಹೇರಳವಾಗಿ ಮೂರ್ತಗೊಳಿಸಿದ್ದಾರೆ. ಮಂದಿರದ ವಾಸ್ತು ಅಂಗವನ್ನು ಹೆಚ್ಚು ಸುಂದರಗೊಳಿಸಲು ಅರೆಉಬ್ಬುಶಿಲ್ಪ ಇಲ್ಲವೆ ಮೂರು ಆಯಾಮಗಳ ಶಿಲ್ಪಗಳನ್ನು ಕಡೆದಿರುವರು. ಪ್ರಧಾನ ವಿಗ್ರಹವೊಂದರ ಮಹತ್ವವನ್ನು ಹೆಚ್ಚಿಸಲು ಅದರ ಸುತ್ತ ಆಕರ್ಷಕ ಚಿತ್ತಾರಗಳಿರುವ ಚೌಕಟ್ಟನ್ನು ಕೆತ್ತಿರುವುದುಂಟು. ಇದರ ಅಂಚಿನಲ್ಲಿನ ಪಟ್ಟಿಕೆಗಳು ಚಿಕಣಿ ಶಿಲ್ಪಗಳಿಂದ ಇಲ್ಲವೆ ಪುಷ್ಪಲತೆಗಳಿಂದ ಶೋಭಿತಗೊಂಡು ಅಲಂಕಾರಶಿಲ್ಪಗಳಾಗಿ ನೋಡುಗನ ಮನಸೆಳೆಯುತ್ತವೆ. ಮಿಥುನ ಶಿಲ್ಪ ಇಲ್ಲವೆ ವ್ಯಾಳಿ (ಯಾಳಿ) ಮುಖಗಳು ಪ್ರಧಾನ ವಾಸ್ತುಅಂಗವನ್ನು ಮತ್ತು ದೇವಾಲಯವನ್ನು ದೃಷ್ಟಿ ತಾಗದಂತೆ ರಕ್ಷಿಸುವವೆಂದು ನಂಬಲಾಗಿದೆ.

ಬೃಹತ್ ವಿಗ್ರಹವಿರುವ ಗೋಡೆಯ ಮೂಲೆಗಳಲ್ಲಿ ಖಾಲಿಯಾಗಿ ಉಳಿದಿರುವ ಸ್ಥಳವನ್ನು ವ್ಯಾಪಿಸಿಕೊಳ್ಳಲೆಂದು ಮತ್ತು ಇಡೀ ಬೃಹತ್‌ಶಿಲ್ಪದ ಸಂಯೋಜನೆಗೆ ಪೂರಕವಾಗುವಂತೆ ರೂವಾರಿಯು ಅಲಂಕಾರ ಶಿಲ್ಪಗಳನ್ನು ಕೆತ್ತುತ್ತಾನೆ. ಇದರಿಂದಾಗಿ ಪ್ರಧಾನಶಿಲ್ಪಕ್ಕೆ ಹೆಚ್ಚಿನ ಕಳೆಯನ್ನು ತಂದುಕೊಟ್ಟಂತಾಗುತ್ತದೆ. ಬಾದಾಮಿ ಗುಹಾಲಯಗಳ ಭವ್ಯಗಾತ್ರದ ಪ್ರತಿಮೆಗಳ ಮೇಲ್ಭಾಗದಲ್ಲಿ, ಇಕ್ಕೆಲಗಳಲ್ಲಿ ಮೂರ್ತಗೊಂಡ ವಿದ್ಯಾಧರರ ಜೋಡಿಗಳನ್ನೂ ಇಲ್ಲಿ ಸ್ಮರಿಸಬಹುದು. ಅದರಂತೆ ವಿತಾನದ ಅಂಕಣದ ಮಧ್ಯದಲ್ಲಿ ಪ್ರಧಾನ ದೇವತೆಯ ಶಿಲ್ಪವಿದ್ದರೆ ಸುತ್ತಲೂ ಗಣರು, ಗಂಧರ್ವರು, ದಿಕ್ಪಾಲರು ಇಲ್ಲವೆ ಜ್ಯಾಮಿತಿ ನಕ್ಷೆಗಳ ಕೆತ್ತನೆಯಿರುತ್ತದೆ. ಉಳಿದಿರುವ ಸ್ಥಳಾವಕಾಶವನ್ನು ಚಿತ್ತಾರಗಳಿಂದ ಸುವ್ಯವಸ್ಥಿತಗೊಳಿಸುವ ಕಲೆಯಲ್ಲಿ ಚಲುಕ್ಯ ಕಲಾವಿದರು ನಿಷ್ಣಾತರು. ಹೀಗೆ ಆಲಂಕಾರಿಕ ರಚನೆಗಳು ಇಲ್ಲವಾದರೆ ಇಡಿ ಅಂಕಣ ಅಥವಾ ಗೋಡೆಯು ಕಲಾ ಸಮತೋಲನದಿಂದ ವಂಚಿತವಾಗುತ್ತದೆ. ಪೂರಕ ಕೆತ್ತನೆಗಳಿಂದ ಕೂಡಿ ಒಟ್ಟಾರೆ ಫಲಿಸುವ ಚೆಲುವು ಇಲ್ಲವಾಗುತ್ತದೆ. ಬಿಡಿಯಾಗಿ ವಾಸ್ತು ಅಂಗಕ್ಕೆ, ಇಡಿಯಾಗಿ ದೇವಾಲಯಕ್ಕೆ ಹೆಚ್ಚಿನ ಬೆಡಗನ್ನೊದಗಿಸಲು ಅಲಂಕಾರ ಶಿಲ್ಪಗಳನ್ನು ಸಂಯೋಜಿಸಲಾಗುತ್ತದೆ. ಈ ಸಂಯೋಜನೆಯಲ್ಲಿ ಕಲಾವಿದನ ಸೋಪಜ್ಞತೆ ಬೆಳಕು ಕಾಣುತ್ತದೆ.

ದೇವಾಲಯದ ವಿವಿಧ ಭಾಗಗಳನ್ನು ಅಂದಗೊಳಿಸಲೆಂದು ರಚಿಸಲಾದ ಕೀರ್ತಿಮುಖ, ಪೂರ್ಣಕುಂಭ, ಸುರಳಿಗೊಂಡ ನಾಗರಾಜ, ಪದ್ಮಪುಷ್ಪಗಳ ವಿನ್ಯಾಸಗಳು ಅಮೂರ್ತ ಕಲ್ಪನಾಬಿಂಬ (concept), ವಿಚಾರ, ಭಾವನೆ ಅಥವಾ ಪ್ರಾಚೀನರ

ನಂಬುಗೆಗಳನ್ನು ಪ್ರತಿನಿಧಿಸುತ್ತವೆ. ಭಾರತೀಯ ಸಾಂಪ್ರದಾಯಿಕ ಕಲೆಯಲ್ಲಿ ಈ ಶಿಲ್ಪ ವಿಶೇಷಗಳು ಕಾಲದುದ್ದಕ್ಕೂ ಒಂದೊಂದು ಅರುಹಿನ ಕುರುಹುಗಳಾಗಿ ಉಳಿದುಕೊಂಡಿವೆ. ಸಹೃದಯ ನೋಡುಗನು ಈ ಸಂಕೇತಗಳ ಒಳಅರ್ಥವನ್ನು ಗ್ರಹಿಸಬೇಕಾಗುತ್ತದೆ. ಕಲ್ಯಾಣಕರವಾದ ಈ ಚಿಹ್ನೆಗಳು ಆತನ ಜೀವನೋತ್ಸಾಹವನ್ನು ವೃದ್ಧಿಸುತ್ತವೆ.

ಚಲುಕ್ಯ ರೂವಾರಿಗಳ ಕೈಚಳದಿಂದ ಕಗ್ಗಲ್ಲಿನಲ್ಲಿ ಒಡಮೂಡಿರುವ ರಸಿಕ ದಂಪತಿ, ಸಾಲಭಂಜಿಕಾ ಮೂರ್ತಿಗಳನ್ನು ನೋಡಿದಾಗ ರಸಂತ ಕಾವ್ಯವನ್ನು ಓದಿದ ಅನುಭವವಾಗುತ್ತದೆ. ಚೆಲುವಿನ ಚಿಲುಮೆಯಂತಿರುವ ಈ ಶಿಲ್ಪಕಲಾಕೃತಿಗಳು ಕಲಾ ರಸಾಸ್ವಾದನೆಯ ಅನುಭವವನ್ನು ನೀಡುತ್ತವೆ. ವಿತಾನದಲ್ಲಿ ಚಾಚಿಕೊಂಡ ಪದ್ಮ ಪುಷ್ಪಗಳ ಅಲಂಕರಣ, ಅಂಕಣವನ್ನೆಲ್ಲ ವ್ಯಾಪಿಸಿಕೊಂಡ ಸ್ವಸ್ತಿಕಗಳ ಜಾಲ, ಒಂದರೊಳಗೊಂದು ಮನೆ ಮಾಡಿಕೊಂಡ ವೃತ್ತಗಳು, ಸಂಕೀರ್ಣ ಜ್ಯಾಮಿತಿ ವಿನ್ಯಾಸಗಳು ಮೊದಲಾದವು ಸ್ಥಪತಿ ಮತ್ತು ರೂವಾರಿಗಳ ಕಲ್ಪನಾ ಶಕ್ತಿಯನ್ನು, ಕರಕೌಶಲ್ಯವನ್ನು ಪ್ರದರ್ಶಿಸುತ್ತವೆ. ಈಹಾಮೃಗಗಳ ಕೆತ್ತನೆಯಲ್ಲಿ ಕಲಾವಿದರ ಕಲಾಪ್ರತಿಭೆ ಇನ್ನೂ ಚೆನ್ನಾಗಿ ಪ್ರಕಟಗೊಂಡಿದೆ.

ಭಾರತವು ಕಲೆ, ಸಂಸ್ಕೃತಿಯ ಆಗರ. ಚಲುಕ್ಯ ಸ್ಥಪತಿಗಳು ವಾಸ್ತು ವಿಜ್ಞಾನಿಗಳು ಮಾತ್ರವಲ್ಲ , ಕಲಾತಪಸ್ವಿಗಳು. ಅವರು ನಿರ್ಮಿಸಿದ ದೇವಾಲಯಗಳು ಮತ್ತು ಅಲ್ಲಿ ಮೈವಡೆದ ಅಸಂಖ್ಯಾತ ಮೂರ್ತಿಗಳು ಭೌತಿಕ ಚೆಲುವಿನ ಜೊತೆಗೆ ಆಧ್ಯಾತ್ಮಿಕ ಸೌಂದರ್ಯದ ಸೌರಭವನ್ನು ಹರಡಿವೆ.

ದೇವಾಲಯಗಳಲ್ಲಿ ಭೌತಿಕ ಸೌಂದರ್ಯವು ಮೂಡಿ ಬಂದದ್ದು ಪ್ರಧಾನವಾಗಿ ಆಲಂಕಾರಿಕ ಶಿಲ್ಪಗಳಿಂದಾಗಿ. ಇವನ್ನು ಚಿತ್ತಗ್ರಾಹ್ಯ (abstract), ಮೃಗರೂಪಿ (zoomorphic) ಮತ್ತು ಸಸ್ಯರೂಪಿ (botanical) ಶಿಲ್ಪಗಳೆಂದು ವಿಂಗಡಿಸಬಹುದು. ಈ ಎಲ್ಲ ಬಗೆಯ ಅಲಂಕಾರ ಶಿಲ್ಪಗಳನ್ನು ಚಲುಕ್ಯ ಕಲಾವಿದರು ಕಂಡರಿಸಿದುದನ್ನು ಕಾಣುತ್ತೇವೆ. ಮಾನವ ಶಿಲ್ಪಗಳನ್ನು ಕುರಿತಾದ ಅಧ್ಯಾಯದಲ್ಲಿ ಚಿತ್ತಗ್ರಾಹ್ಯ ಶಿಲ್ಪಗಳ ನಿರೂಪಣೆಯಿದೆ. ಪ್ರಾಣಿ–ಪಕ್ಷಿಗಳ ಮತ್ತು ಕಿನ್ನರರ ಕೆತ್ತನೆಯಲ್ಲಿ ಪ್ರಾಣಿ ಪ್ರಪಂಚದ ದರ್ಶನವಾಗುತ್ತದೆ. ಹಾಗೆಯೇ ತರು, ಲತೆ, ಪುಷ್ಪಾದಿಗಳು ಸಸ್ಯರೂಪಿ ಶಿಲ್ಪಗಳಾಗಿ ದೇವಾಲಯದ ಚೆಲುವನ್ನು ಹೆಚ್ಚಿಸಿವೆ.

ಚಲುಕ್ಯರ ಆಲಂಕಾರಿಕ ಶಿಲ್ಪಗಳ ಅಧ್ಯಯನಕ್ಕಾಗಿ ಪ್ರಾತಿನಿಧಿಕವಾಗಿ ಮಹತ್ವದ ಕೆಲವು ದೇವಾಲಯಗಳನ್ನು ಅನುಲಕ್ಷಿಸಲಾಗಿದೆ. ಗುಹಾಲಯಗಳನ್ನೊಳಗೊಂಡು ನೂರಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ದೇವಾಗಾರಗಳು ಚಲುಕ್ಯ ಅರಸರ ಪೋಷಣೆಯಲ್ಲಿ ನಿರ್ಮಾಣಗೊಂಡಿವೆ. ಪ್ರಧಾನವಾಗಿ ಬಾದಾಮಿಯ ಏಕಶಿಲಾ ನಿರ್ಮಿತ ಗುಹಾಲಯಗಳು, ರಾಚನಿಕ ಮಂದಿರಗಳಾದ ಮಾಲಗಿತ್ತಿ ಶಿವಾಲಯ, ಜಂಬುಲಿಂಗ ಗುಡಿ, ಐಹೊಳೆಯ ಗುಹೆಗಳಾದ ರಾವಲಫಡಿ, ಮೀನಬಸದಿ ಮತ್ತು ಅಲ್ಲಿ ಕಟ್ಟಿ ನಿರ್ಮಿಸಲಾದ ದುರ್ಗಾ, ಹುಚ್ಚಿಮಲ್ಲಿ, ಹುಚ್ಚಪ್ಪಯ್ಯ, ಲಾಡಖಾನ ಗುಡಿಗಳು ಹಾಗೂ ಪಟ್ಟದಕಲ್ಲಿನ ವಿರೂಪಾಕ್ಷ, ಮಲ್ಲಿಕಾರ್ಜುನ, ಪಾಪನಾಥ ಮತ್ತು ಕಾಶಿವಿಶ್ವನಾಥ ಮೊದಲಾದ ದೇವಾಲಯಗಳತ್ತ ಅಧ್ಯಯನವನ್ನು ಹೆಚ್ಚು ಕೇಂದ್ರೀಕರಿಸಲಾಗಿದೆ. ಪ್ರಾಸಂಗಿಕವಾಗಿ ಮಹಾಕೂಟ, ಆಲಂಪುರ, ಸಂಡೂರು, ನಾಗರಾಳ ಮೊದಲಾದ ನೆಲೆಗಳ ದೇಗುಲಗಳನ್ನು ಗಮನಿಸಲಾಗಿದೆ.

ಅಲಂಕಾರ ಶಿಲ್ಪಗಳ ನಿರ್ವಹಣೆಯಲ್ಲಿ ಕಂಡು ಬರುವ ವ್ಯತ್ಯಾಸಗಳು ಇತಿಹಾಸದ ಹೆಜ್ಜೆ ಗುರುತುಗಳನ್ನು ಕಂಡು ಹಿಡಿಯಲು ನೆರವಾಗಬಲ್ಲವು. ದೇವಾಲಯದ ಕಾಲವನ್ನು ನಿರ್ಣಯಿಸುವಲ್ಲಿ ದಿಕ್ಸೂಚಿಯಾಗಲೂಬಹುದು. ಉದಾಹರಿಸುವುದಾದರೆ ಚಲುಕ್ಯ ಅರಸರ ಉತ್ತರದ ದಿಗ್ವಿಜಯದ ಪ್ರತೀಕವಾಗಿ ಗಂಗಾ ಯಮುನೆಯರ ಶಿಲ್ಪಗಳು ಅವರ ದೇವಾಲಯಗಳಲ್ಲಿ ಅಲಂಕಾರ ಶಿಲ್ಪಗಳಾಗಿ ಕಾಣಿಸಿಕೊಂಡವು. ನಂತರದ ಕಾಲದಲ್ಲಿ ನದೀ

ಶಿಲ್ಪಗಳ ಕಂಡರಣೆ ಒಂದು ಶಿಲ್ಪ ಲಕ್ಷಣವಾಗಿ ರೂಢಿಗತವಾಯಿತು. ಹಾಗೆಯೇ ಚಲುಕ್ಯರ ಆಡಳಿತದ ಮೊದಲ ಹಂತದಲ್ಲಿ ನಿರ್ಮಾಣಗೊಂಡ ಮಕರಶಿಲ್ಪಗಳಲ್ಲಿ ಮೊಸಳೆಯ ಬಾಲವು ಚಿಕ್ಕದಾಗಿರುವಂತೆ ಕಂಡು ಬಂದರೆ ಎರಡನೆಯ ಹಂತದ ದೇವಾಲಯಗಳಲ್ಲಿ ಉದ್ದಾದ ಬಾಲವಿರುವ ಮಕರಗಳು ಗೋಚರಿಸುತ್ತವೆ. ಇದನ್ನು ಆಧರಿಸಿ ದೇವಾಲಯದ ಕಾಲವನ್ನು ಊಹಿಸಲು ಸಾಧ್ಯ.

ಇದರಂತೆ ಶಿಲ್ಪಗಳ ವಿಶಿಷ್ಟ ಲಕ್ಷಣಗಳನ್ನಾಧರಿಸಿ ನಿರ್ಮಾಣಕಾರರ ಬಗ್ಗೆಯೂ ಮಾಹಿತಿ ಲಭ್ಯವಾಗಬಹುದು. ಬಾದಾಮಿಯ ಶೈವ ಗುಹೆಯಲ್ಲಿನ ಶಿಲ್ಪ ಲಕ್ಷಣಗಳು ಮತ್ತು ಮಾಲಗಿತ್ತಿ ಶಿವಾಲಯದಲ್ಲಿನ ಶಿಲ್ಪ ಲಕ್ಷಣಗಳು ಏಕ ರೂಪದ್ದಾಗಿರದೆ ಶೈಲಿಯಲ್ಲಿ ವ್ಯತ್ಯಾಸವು ಮೇಲ್ನೋಟಕ್ಕೇ ಗೋಚರಿಸುತ್ತದೆ. ಮಾಲಗಿತ್ತಿ ಶಿವಾಲಯದ ಶಿಲ್ಪಗಳು ಗುಪ್ತರ ಕಾಲದ ಶಿಲ್ಪಗಳನ್ನು ಬಹುವಾಗಿ ಹೋಲುತ್ತವೆ. ಅದಾಗಿ ಇವು ಉತ್ತರ ಭಾಗದಿಂದ ಬಂದಿದ್ದ ಶಿಲ್ಪಗಳ ಕಲಾಕೃತಿಗಳಾಗಿರಬೇಕು. ಉತ್ತರದಿಂದ ದಕ್ಷಿಣಕ್ಕೆ ಕಲಾ ವಿಸರಣೆ ನಡೆಯಿತೆಂಬುದನ್ನು ಇದು ಸ್ಪಷ್ಟಪಡಿಸುತ್ತದೆ.

ಚಲುಕ್ಯರ ದೇವಾಲಯಗಳ ಅಧಿಷ್ಠಾನ, ಗೋಡೆ, ಕಂಬ, ತೊಲೆಗಳ ಮೇಲೆ ನೂರಾರು ಕಥಾನಕ ಶಿಲ್ಪಗಳನ್ನು ಬಿಡಿಸಲಾಗಿದೆ. ಈ ಕಥಾ ನಿರೂಪಣಾ ಮೂರ್ತಿಗಳು ಅಲಂಕಾರದ ಕೆತ್ತನೆ ಎನಿಸಲಾರವು. ಅವನ್ನು ರೂಪಿಸುವಲ್ಲಿ ಕಲಾವಿದನಿಗಿರುವ ಉದ್ದೇಶವೇ ಭಿನ್ನವಾದುದು. ಆ ಕತೆ ಹೇಳುವುದರ ಮೂಲಕ ಶಿಲ್ಪಿಯು ದೇವನ ಮಹಿಮೆಯನ್ನು ಸ್ಥಾಪಿಸುತ್ತಾನೆ. ಇಲ್ಲವೆ ನೀತಿ ಪ್ರತಿಪಾದನೆ ಮಾಡುತ್ತಾನೆ. ಆದ್ದರಿಂದ ಅಲಂಕರಣವು ಈ ಶಿಲ್ಪಗಳ ಕೆತ್ತನೆಯ ಉದ್ದೇಶವಲ್ಲ. ಈ ಕಾರಣಕ್ಕಾಗಿ ಭಾಗವತ ಕತೆಗಳು, ರಾಮಾಯಣ, ಮಹಾಭಾರತದ ಸನ್ನಿವೇಶ ಚಿತ್ರಣಗಳು, ಭಾಗವತ ಪ್ರಸಂಗಗಳು ಮತ್ತು ಪಂಚತಂತ್ರ ಕತೆಗಳು ಪ್ರಸ್ತುತ ಅಧ್ಯಯನದ ಪರಿಧಿಯಾಚೆ ಉಳಿದುಕೊಂಡಿವೆ.

ಭಾರತೀಯ ಕಲೆಯು, ಎಲ್ಲ ಕಾಲಗಳಲ್ಲಿ ತನ್ನೆಲ್ಲ ಪ್ರಕಾರಗಳಲ್ಲಿ, ಮಾನವನ ಜೀವನಕ್ಕೆ ತುಂಬ ಹತ್ತಿರವಾಗಿದೆ. ಅಷ್ಟು ಮಾತ್ರವಲ್ಲ ಅದು ಮಾನವ ಜೀವನದ ಭಾಗವೇ ಆಗಿದೆ. ಮಾನವ–ಮಾನವ ಸಂಬಂಧ, ಪ್ರಾಣಿ–ಮಾನವ ಸಂಬಂಧ, ಸಸ್ಯ–ಮಾನವ ಸಂಬಂಧ ಇವೆಲ್ಲವೂ ಅಲಂಕಾರ ಶಿಲ್ಪಗಳಲ್ಲಿ ಒಂದಿಲ್ಲೊಂದು ರೀತಿಯಲ್ಲಿ ಪ್ರಕಟಗೊಂಡಿವೆ. ಇದು ಪ್ರಾಚೀನ ಭಾರತೀಯರ ಕಲಾದೃಷ್ಟಿಯಾಗಿದೆ, ಸಮಷ್ಟಿ ನೋಟವಾಗಿದೆ. ವಾಸ್ತವದಲ್ಲಿ ಈ ಎಲ್ಲ ರೂಪಗಳಲ್ಲಿ ಶಿಲ್ಪರ್ಷಿಗಳು ದೈವತ್ವವನ್ನು ಗುರುತಿಸಿದ್ದಾರೆ. ಮನುಷ್ಯರೂಪದಲ್ಲಿ ದೇವರನ್ನು ಕಂಡಂತೆ ಪ್ರಾಣಿ ರೂಪದಲ್ಲಿ ಮತ್ತು ಸಸ್ಯರೂಪದಲ್ಲಿ ದೇವರನ್ನು ಕಂಡಿದ್ದಾರೆ. ಪ್ರಕೃತಿಯ ಪ್ರತಿಯೊಂದು ವಸ್ತುವೂ ಅಗೋಚರ ದೇವನ ಮೂರ್ತ ರೂಪವೆಂಬುದು ಭಾರತೀಯ ಕಲಾವಿದನ ಗಾಢ ನಂಬುಗೆಯಾಗಿದೆ.

ಶಿಲ್ಪವನ್ನು ಕುರಿತಾದ ಸಾಹಿತ್ಯ ರಚನೆಯು ಕನ್ನಡದಲ್ಲಿ ವಿರಳವೆಂದೇ ಹೇಳಬೇಕು. ಶಿಲ್ಪ, ಶಿಲ್ಪೋದ್ದೇಶ ಇವೇ ಮೊದಲಾದವುಗಳ ಬಗ್ಗೆ ಜನಸಾಮಾನ್ಯರಿಗೆ ಪರಿಚಯಿಸುವ ಕೆಲಸ ಹೆಚ್ಚೆಚ್ಚು ಆಗಬೇಕಿದೆ. ಈ ದಿಶೆಯಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಇಂತಹ ಕೃತಿ ರಚನೆಗೆ ಅವಕಾಶ ನೀಡಿರುವುದು ಸ್ತುತ್ಯಾರ್ಹವಾಗಿದೆ. ಸಾಂಪ್ರದಾಯಿಕ ಶಿಲ್ಪಕಲೆ ಎಂದರೆ ಆಧುನಿಕ ಕಲಾವಿದರು ಮೂಗು ಮುರಿಯುವುದುಂಟು. ಆದರೆ ಪ್ರಾಚೀನ ಕಲೆಯಲ್ಲಿ ಆಧುನಿಕ ಕಲೆಯ ಬೇರು ಅಡಗಿದೆ ಎಂಬುದನ್ನು ಮರೆಯಲಾಗದು. ಪ್ರಾಚೀನ ಶಿಲ್ಪಕಲೆಯಲ್ಲಿಯೂ ತತ್ವವಿದೆ, ಸತ್ವವಿದೆ. ಅದರಲ್ಲೂ ಒಳ್ಳೆಯದಿದೆ, ಚೆಲುವಿದೆ, ತಂತ್ರಜ್ಞತೆಯಿದೆ, ಕೌಶಲ್ಯವಿದೆ. ಇದನ್ನು ಮನಗಾಣುವ ಅವಶ್ಯಕತೆಯಿದೆ. ಈ ಉದ್ದೇಶದ ಸಫಲತೆಯುತ್ತ ಪ್ರಸ್ತುತ ಗ್ರಂಥವು ಒಂದು ಪ್ರಯತ್ನವಾಗಿದೆ.



ಚಿತ್ರ ೧. ಪದ್ಮ ನಿಧಿ, ಗುಹೆ ೨, ಬಾದಾಮಿ



ಚಿತ್ರ ೨. ಯಾಳಿ (ಬೋದಿಗೆ)



ಚಿತ್ರ ೩. ಕಿನ್ನರ - ಲತಾ ನಕ್ಷೆ



ಚಿತ್ರ ೪. ಯಾಳಿ - ಕುಂಭ



ಚಿತ್ರ ೫. ಕಂಬದ ಅಲಂಕಾರ



ಚಿತ್ರ ೬. ಕಂಬದ ಅಲಂಕರಣ



ಚಿತ್ರ ೭. ಕುಬ್ಜಗಣರು



ಚಿತ್ರ ೮. ಲತಾ ನಕ್ಷೆ



ಚಿತ್ರ ೯. ಯಾಳಿ ನಕ್ಷೆ



ಚಿತ್ರ ೧೦. ಕಿನ್ನರ - ಲತಾ ನಕ್ಷೆ



ಚಿತ್ರ ೧೧. ಪೂರ್ಣ ಕುಂಭ



ಚಿತ್ರ ೧೨. ಪುಷ್ಪ ಮಾಲೆ ವಿನ್ಯಾಸ



ಚಿತ್ರ ೧೩. ಪುಷ್ಪ ಮಾಲೆ ವಿನ್ಯಾಸ



ಚಿತ್ರ ೧೪. ಮಿಥುನ



ಚಿತ್ರ ೧೫. ಕಿನ್ನರ ಪುಷ್ಪ ವಿನ್ಯಾಸ



ಚಿತ್ರ ೧೬. ಮಿಥುನ



ಚಿತ್ರ ೧೭. ಗಜಕ್ರಾಂತ



ಚಿತ್ರ ೧೮. ಆನೆಯ ಆರ್ಭಟ



ಚಿತ್ರ ೧೯. ಲತಾ ನಕ್ಷೆ



ಚಿತ್ರ ೨೦. ನಾಗರಾಜ



ಚಿತ್ರ ೨೧. ಕಿನ್ನರ ದಂಪತಿ



ಚಿತ್ರ ೨೨. ಶಂಖ - ಲತಾ ಸುರುಳಿ



ಚಿತ್ರ ೨೩. ಯಾಳಿ (ಬೋದಿಗೆ)



ಚಿತ್ರ ೨೪. ಮಕರ ತೋರಣ



ಚಿತ್ರ ೨೫. ಕಿನ್ನರ ಕಿನ್ನರಿ



ಚಿತ್ರ ೨೬. ಪೂರ್ಣಕುಂಭ, ಆನೆ



ಚಿತ್ರ ೨೭. ಲತಾನಕ್ಷೆ (ಬೋದಿಗೆ)



ಚಿತ್ರ ೨೮. ಯಾಳಿ (ಬೋದಿಗೆ)

# ಮುಖ್ಯ ಆಧಾರಗ್ರಂಥಗಳು


## ಕನ್ನಡ

೧. ಅಣ್ಣೀಗೇರಿ, ಎ. ಎಂ., ಪಟ್ಟದಕಲ್ಲ ಗುಡಿಗಳು, ಧಾರವಾಡ, ೧೯೬೦.

೨. ಅಣ್ಣೀಗೇರಿ ಎ.ಎಂ. ಐಹೊಳೆ : ಸಂಸ್ಕೃತಿ, ಕಲೆ, ಧಾರವಾಡ, ೧೯೭೪

೩. ಅಪರ್ಣ, ಕೂ.ಸ., ದೇವಾಲಯ ವಾಸ್ತುಶಿಲ್ಪ : ಪರಿಚಯ, ಹಂಪಿ, ೧೯೯೯

೪. ಕನ್ನಡ ವಿಶ್ವಕೋಶ ಸಂಪುಟಗಳು, ಮೈಸೂರು, ೧೯೮೬.

೫. ಕರುಣಾ ವಿಜಯೇಂದ್ರ, ಕರ್ನಾಟಕ ದೇವಾಲಯಗಳಲ್ಲಿ ರಂಗಭೋಗ, ಧಾರವಾಡ ೨೦೦೮

೬. ಗೋಪಾಲ. ಬಾ.ರಾ., ವಾಸ್ತು, ಬೆಂಗಳೂರು, ೧೯೯೩.

೭. ಜ್ಞಾನಾನಂದ, ಜಿ. (ಸಂ) ಆಚಾರ್ಯಾಭಿವಂದನೆ, ಶ್ರೀ ನಾ.ಭಾ. ಸನ್ಮಾನ ಸಮಿತಿ, ಬೆಂಗಳೂರು

೮. ಜ್ಞಾನಾನಂದ, ಜಿ. ಶಿಲ್ಪಾದರ್ಶ ಸಂ. ೨. ಹಂಪಿ, ೨೦೦೨

೯. ತಿಪ್ಪೇಸ್ವಾಮಿ, ಪಿ. ಆರ್., (ಸಂ) ಕಲಾಕೋಶ, ಬೆಂಗಳೂರು, ೧೯೯೪

೧೦. ರಾಜಶೇಖರ, ಎಸ್., ದಕ್ಷಿಣ ಭಾರತದ ವಾಸ್ತುಶಿಲ್ಪಕ್ಕೆ ಬಾದಾಮಿ ಚಾಲುಕ್ಯರ ಕೊಡುಗೆ ಮೈಸೂರು, ೧೯೯೬.

೧೧. ಶೀಲಾಕಾಂತ ಪತ್ತಾರ, ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಹಂಪಿ, ೨೦೦೦

೧೨. ಶ್ರೀನಿವಾಸ ವೆಂ. ಪಾಡಿಗಾರ, ಬಾದಾಮಿ ಚಲುಕ್ಯರ ಶಾಸನಗಳು, ವಾಸ್ತು ಮತ್ತು ಶಿಲ್ಪಕಲೆ, ಧಾರವಾಡ, ೨೦೦೮

೧೩. ಸುಂದರ. ಅ, (ಸಂಪುಟ ಸಂಪಾದಕರು), ಕರ್ನಾಟಕ ಚರಿತ್ರೆ ಸಂಪುಟ ೧. ಹಂಪಿ, ೧೯೯೭

## English

1. Adinarayana M. Decorative Arts of South Indian Temples, Delhi, 2001

2. Annigeri, A.M. A Guide to the Pattadakal temples, Dharwad, 1961

3. Aryan, K.C., Basis of Decorative Element in Indian Art, NewDelhi, 1981

4. Banerji, R.D. Basreliefs of Badami, Calcutta, 1928

5. Bansi Lal Malla, Trees in Indian Art, Mythology and Folklore, New Delhi, 2000.

6. Channabasppa S. Patil, Panchatantra in Karnataka Sculptures, Mysotre, 1995.

7. Gopinatha Rao, T.A. Elements of Hindu lconography Vol. II, Part II, Delhi, 1997.

8. Gupte, R.S., The Art and Architecture of Aihole, Bombay, 1967

9. Nagar, S. L. Composite Deities in Indian Art and Literature, New Delhi, 1989

10. Nagaraja Rao, M.S., (Ed), The Chalukyas of Badami, Bangalore, 1978.

11. Radcliffe, Carol Elizabeth, Early Chalukya Sculpture Vol. I-IV, Newyork University, Ph. D. (unpublished.)

12. Rajasekhara. S. 1) Karnataka Architecture, Dharwad, 1985 2) Early Chalukya Art at Aihole, New Delhi, 1985

13. Rajendra Prasad. B. Chalukya Temples of Andhra Pradesh, New Delhi, 1983

14. Ramachandra Rao S.K., Encyclopaedia of Indian lconography, Vol. I & II, Delhi, 2003.

15. Saletore, R.N. Vijayanagara Art, Delhi, 1982

16. Shrinivas V. Padigar, (Ed), Inscriptions of the Calukyas of Badami, Bangalore, 2010.

17. Sivaramamurti, C.

    (1) Birds and Animals in Indian Sculpture, New Delhi, 1974,

    (2) Sri Lakshmi in Indian Art and thought, New Delhi, 1982.

18. Soundara Rajan, K.V. Cave temples of the Deccan, New Delhi, 1981

19. Sundara, A, Pattadakal, New Delhi, 2008

20. Tarapada Bhattacharyya, The Canons of Indian Art or A Study on Vastuvidya, Calcutta, 1986, (Ed)

# ಬಾದಾಮಿ ಚಲುಕ್ಯರ ದೇವಾಲಯಗಳ

# ಅಲಂಕಾರ ಶಿಲ್ಪಗಳು



ಬಾದಾಮಿ ಚಲುಕ್ಯ ದೇವಾಲಯಗಳಲ್ಲಿ ಅಲಂಕಾರ ಶಿಲ್ಪಗಳು ಪ್ರಬಂಧವು ವಿಶಿಷ್ಟವಾದದ್ದು. ಬಾದಾಮಿಯ ದೇವಾಲಯಗಳ ಬಗ್ಗೆ ಬಹು ವಿವರವಾದ ಹಲವು ಅಧ್ಯಯನಗಳು ನಡೆದಿವೆ. ಆದರೆ ಅಲಂಕಾರ ಶಿಲ್ಪಗಳ ಬಗ್ಗೆ ಅಧ್ಯಯನದ ಮೊದಲ ಪ್ರಯತ್ನ ಇದಾಗಿದೆ.

ದೇವಾಲಯಗಳು ನಿರ್ಮಿತವಾಗವುದು ಶಿಲ್ಪಶಾಸ್ತ್ರದ ನಿಯಮಗಳ ಅನುಸಾರವಾಗಿ. ನಿಜಕ್ಕೂ ಅಳತೆ ಇಲ್ಲದ ಯಾವ ಭಾಗವೂ ದೇವಾಲಯದಲ್ಲಿ ಇರುವುದಿಲ್ಲ. ಮೂಲ ಮೂರ್ತಿ, ಅದಕ್ಕೆ ತಕ್ಕ ಪರಿವಾರ, ಎಲ್ಲವೂ ಶಾಸ್ತ್ರ ನಿರ್ದೇಶನದ ಅನುಸಾರವೇ ಇರುತ್ತವೆ. ದೇವಾಲಯದಲ್ಲಿರುವ ಸ್ತಂಭಗಳೂ ಇದೇ ಶಾಸ್ತ್ರದ ಮಾನ-ಲಕ್ಷಣದ ಅನುಸಾರವೇ ಇರಬೇಕು.

ಆದರೆ ಅಲಂಕಾರ ಭಾಗಕ್ಕೆ ಈ ರೀತಿಯ ಕಟ್ಟುಪಾಡು ಇರುವುದಿಲ್ಲ. ಅಲಂಕಾರಗಳಲ್ಲಿ ಬಳಕೆಯಾಗಬಹುದಾದ ಹಂಸ, ಮಕರ, ಕೀರ್ತಿಮುಖ, ಕುದುರೆ, ಸಿಂಹ, ವ್ಯಾಳ, ಕಿನ್ನರ, ಅಪ್ಸರೆ, ಯಕ್ಷ, ಗಂಧರ್ವ ಇವರಿಗೆ ರೂಪ ವಿನ್ಯಾಸವಿದೆ. ತಾಲಮಾನದ ಅಳತೆಗಳು ನಿಗದಿಯಾಗಿವೆ. ಆದರೆ ಯಾವುವು ಎಲ್ಲಿ ಇರಬೇಕು ಎಂಬ ನಿರ್ದೇಶನವಿಲ್ಲ. ಎಂದರೆ ಇವನ್ನು ಸುಂದರ ಎಂದು ತೋರುವ ಕಡೆ ಬಳಸಿ ದೇವಾಲಯದ ಸೌಂದರ್ಯವನ್ನು ವೃದ್ಧಿಗೊಳಿಸುವ ಸ್ವಾತಂತ್ರ್ಯ ಸ್ಥಪತಿಯಾದವನಿಗೆ ಇರುತ್ತದೆ.

ಈ ಬಗ್ಗೆ ಬಾದಾಮಿಯ ದೇವಾಲಯಗಳಲ್ಲಿ ಲಭಿಸುವ ವಿವರಗಳನ್ನು ಡಾ॥ ಶೀಲಾಕಾಂತ ಪತ್ತಾರ ಅವರು ಸಮಗ್ರವಾಗಿ ತಮ್ಮ ಪ್ರಬಂಧದಲ್ಲಿ ಚರ್ಚಿಸಿದ್ದಾರೆ. ಅವಶ್ಯಕವಾದ ಸ್ಥಾನಗಳಲ್ಲಿ ರೇಖಾಚಿತ್ರಗಳನ್ನೂ ಬರೆಸಿ ಗ್ರಂಥದಲ್ಲಿ ಅಳವಡಿಸಿದ್ದಾರೆ.

**ಡಾ॥ ಜಿ. ಜ್ಞಾನಾನಂದ**

ಅಧ್ಯಕ್ಷರು, ಕರ್ನಾಟಕ ಶಿಲ್ಪಕಲಾ ಅಕಾಡೆಮಿ

